# ಅಂಬಿಕೆ.

(ಪತ್ತೇದಾರೀ ಕತೆ.)




ಲೇಖಕ:—

ಭಿ. ಪ. ಕಾಳೆ.





ಪ್ರಕಾಶಕ:—

ಯ. ಗು. ಕುಲಕರ್ಣಿ,

ಎಡಿಟರ, ಸ. ಚ., ಆನಂದವನ.





೧೯೨೯





ಬೆಲೆ ೧-೪-೦ ರೂ

ಕೆಲವು ಬೆನ್ನಮೇಲೂ, ಕೆಲವು ಮುಖದ ಮೇಲೂ, ಕೆಲವು ವಕ್ಷಸ್ಥಳದಲ್ಲೂ ಗುಚ್ಛಗುಚ್ಛಗಳಾಗಿ ಹರಡಿಕೊಂಡಿದ್ದವು. ಆಕೆಯು ಆ ಹಳ್ಳಿಯ ಯಾವ ಓಣಿಯನ್ನೂ ಹಿಡಿದು ಭರದಿಂದ ಸಾಗಿದ್ದಳೋ ಆ ಓಣಿಯ ಆಚೆಯ ತುದಿಯ ಒಂದು ಮನೆಯಲ್ಲಿ ಮಂದವಾದ ದೀಪವು ಇನ್ನೂವರೆಗೆ ಉರಿಯುತ್ತಿತ್ತು. ಕುಮಾರಿಯು ಆ ಮನೆಯ ಬಳಿಗೆ ಹೋಗಿ ನೋಡುತ್ತಾಳೆ, ಅದೊಂದು ಚಿಕ್ಕತಕ್ಕಡಿಯ ಕಿರಾಣಿ ಅಂಗಡಿಯಾಗಿತ್ತು. ಅಲ್ಲಿ ನಾಲ್ಕೈದು ಜನರು ಒತ್ತಟ್ಟಿಗೆ ಕುಳಿತು ಇಸ್ಪೇಟಿನ ಆಟವನ್ನಾಡುತ್ತಿದ್ದರು; ನಡು ನಡುವೆ ಅವರು ತಂಬಾಕ ಸೇದುತ್ತಿದ್ದರು; ಎಲಿ-ಅಡಕೆಯ ತಲಬು ನೀಗಿಸುತ್ತಿದ್ದರು; ಹಾಗು ನಾನಾ ಪ್ರಕಾರದ ಹರಟೆ ಹೊಡೆಯುತಲಿದ್ದರು.

ಆ ಕಿರಾಣಿಅಂಗಡಿಯ ಮಾಲಿಕನ ಹೆಸರು ಬಲವಂತ ಶೇಣವಿ. ಅತನೂ ಆ ಇಸ್ಪೇಟಿನಾಟದಲ್ಲಿ ಸೇರಿಕೊಂಡಿದ್ದನು. ಉಳಿದ ೩-೪ ಜನರಾದರೂ ಅದೇ ಓಣಿಯವರು. ಆ ಭಯಂಕರವಾದ ಮಳೆಗಾಳಿಗಳಲ್ಲಿ ಗಿರಾಕಿಗಳು ಬಾರದಾಗಲು, ತನ್ನ ಅಂದಿನ ಲಾಭದ ಆಶೆಯನ್ನು ತೊರೆದು ಬಲವಂತ ಶೇಣ್ವಿಯು ಇಸ್ಪೇಟಿನ ಜೋಡನ್ನು ಹೊರಹೊರಡಿಸಿದ್ದನು. ಅಂಗಡಿಗೆ ಬಂದಿದ್ದ ಉಳಿದ ೩-೪ ಜನ ಗಿರಾಕಿಗಳೂ ಆ ಪ್ರಬಲವಾದ ಮಳೆಗಾಳಿಗಳಲ್ಲಿ ತೊಯ್ಸಿಕೊಳ್ಳುತ್ತ ಮನೆಗೆ ಹೋಗಲಾರದೆ ಬಲವಂತನ ಇಸ್ಪೇಟಿನಾಟಕ್ಕೆ ಅಂಗಭೂತರಾಗಿದ್ದರು. ಅವರ ಆಟವು ಆ ರಾತ್ರಿಯ ಮೂರನೇ ಪ್ರಹರದ ವರೆಗೂ ಒಳ್ಳೇ ರಂಗಿನಲ್ಲಿ ಸಾಗಿದ್ದಿತು. ಮೇಲೆ ವಿವರಿಸಿದ ಕುಮಾರಿಯು ನಡುಗುತ್ತ ಬಂದು ಆ ಅಂಗಡಿಯ ಬಾಗಿಲಲ್ಲಿ ನಿಂತುಕೊಂಡು—ಅಪ್ಪಗಳಿರಾ, ನಾರಾಯಣಶಾಸ್ತ್ರಿಗಳ ಮನೆಯು ಎತ್ತ ಕಡೆಗಿರುವದೆಂಬದನ್ನು ತಿಳಿಸುವಿರಾ? ಎಂದು ಪ್ರಶ್ನ ಮಾಡಿದಳು.

ಆ ಕುಮಾರಿಯ ಪ್ರಶ್ನೆಗೆ ಎಷ್ಟೋ ಹೊತ್ತಿನವರೆಗೆ ಅಲ್ಲಿಯವರಾರೂ ಉತ್ತರಕೊಡಲಿಲ್ಲ. ಆಗ ಅವರ ಇಸ್ಪೇಟಿನಾಟವು ನಿಂತುಹೋಯಿತು; ಬತ್ತಿಸೇದುವದು ಕಟ್ಟಾಯಿತು; ಎಲಿ-ಅಡಕಿಯ ತಲಬೂ ಮಾಯವಾಯಿತು; ಅಡಕಿ ಕತ್ತರಿಸುತ್ತಿದ್ದವನ ಕೈಯೊಳಗಿನ ಅಡಕೊತ್ತು, ಅವನ ಕೈನಡುಗುವಿಕೆಯಿಂದ ಕಟ್ಟೆಯಕೆಳಗೆ ಬಿದ್ದುಬಿಟ್ಟಿತು. ಈ ಮೊದಲು ಆ ಇಸ್ಪೇಟಿನಾಟದವರಲ್ಲಿ ಭೂತಚೇಷ್ಟೆಯ ಮಾತುಕಥೆಗಳು ಒಳ್ಳೇ ಭರದಿಂದ ಸಾಗಿದ್ದವು. ಯಾವನು ಯಾವದೊಂದು ಅದ್ಭುತಭೂತದ ಕಥೆ

ಯನ್ನು ಅರ್ಧನುರ್ಧದವರೆಗೆ ಹೇಳಿದ್ದನೋ ಅವನ ಬಾಯಿಯು ಅಲ್ಲಿಗೇ ಕಟ್ಟಾಗಿ ನಿಂತಿತು. ಹೀಗೆ ಆ ಅಂಗಡಿಯೊಳಗಿನವರೆಲ್ಲರೂ ಪಿಟ್ಟೆಂದು ಮಾತಾಡದೆ ಚಿತ್ರದೊಳಗಿನ ಬೊಂಬೆಗಳಂತೆ ಆ ಕುಮಾರಿಯ ಕಡೆಗೆ ಟಕ ಮಕ ನೋಡುತ್ತ ಕುಳಿತುಕೊಂಡರು. ಕೆಲಹೊತ್ತು ಉತ್ತರದ ದಾರೀ ನೋಡಿ, ಕುಮಾರಿಯು ಅವರಿಗೆ ಮತ್ತೆ ಅದೇ ಪ್ರಶ್ನವನ್ನು ಮಾಡಿದಳು. ಆದರೂ ಯಾರೂ ಅದಕ್ಕೆ ಉತ್ತರಕೊಡಲಿಲ್ಲ. ಈ ಮೊದಲು ಯಾವನು ಚೌಡಿಯುಕಥೆ ಹೇಳುತ್ತಿದ್ದನೋ, ಅವನು ಒಂದು ಘೋರತರವಾದ ಅಮಾವಾಸ್ಯೆಯ ಮಧ್ಯರಾತ್ರಿಯಲ್ಲಿ ಒಂದು ಅದ್ಭುತವಾದ ಚೌಡಿಯನ್ನು ತಾನು ಕಣ್ಣಾರೆ ನೋಡಿದ್ದೆನೆಂದು ಹೇಳುತ್ತಿರಲಿಕ್ಕೂ, ಅವರೆಲ್ಲರೆದುರಿಗೆ ಇಂದಿನ ಈ ಪ್ರಚಂಡ ಮಳೆಯ ಘನವಾದ ಅಂಧಕಾರದಲ್ಲಿ ಈ ಕುಮಾರಿಯು ಬಂದು ನಿಲ್ಲಲಿಕ್ಕೂ ಗಂಟೇ ಬಿದ್ದಿತ್ತು. ಕೂಡಲೆ ಅವನು ಕಣ್ಣುಮುಚ್ಚಿಕೊಂಡು ಪಿಶಾಚನಿವಾರಕ ಮಂತ್ರವನ್ನು ಮನಸ್ಸಿನಲ್ಲಿಯೇ ಪಠಿಸಲಾರಂಭಿಸಿದನು. ಹೊರಗಿನ ಭಯಾನಕ ದೃಶ್ಯವನ್ನು ಕಂಡಿದ್ದ ಅವನ ದೇಹವೂ ಅಂತರಂಗವೂ ಒಂದೇಸವನೆ ನಡುಗುತ್ತಿದ್ದದರಿಂದ, ಆತನ ಬಾಯಿಂದ ಆ ಮಂತ್ರದ ಅಕ್ಷರಗಳು ಸ್ಪಷ್ಟವಾಗಿ ಹೊರಡದಾದವು. ಅಬಡ-ತಬಡವಾಗಿ, ಮಂತ್ರವು ಭಂಗವಾಗಲಾರಂಭಿಸಿತು!

ಕೆಲಹೊತ್ತುತಡೆದು ಆ ಕುಮಾರಿಯು—ಕಂಪಿತದನಿಯಿಂದ ಅಪ್ಪಗೆಳಿರಾ, ಹೀಗೇಕೆ ಸುಮ್ಮನೆ ಕುಳಿತಿರುವಿರಿ? ನಾರಾಯಣಶಾಸ್ತ್ರಿಗಳ ಮನೆಯು ಯಾವ ಓಣಿಯಲ್ಲಿದೆ? ದಯವಿಟ್ಟು ಹೇಳಿರಿ, ಎಂದಳು.

ಆಗ ಅವರೆಲ್ಲರಲ್ಲಿಯ ಕಡುಸಾಹಸಿಗನೂ, ಧೈರ್ಯವಂತನೂ ಆದ ಬಲವಂತ ಶೇಣ್ವಿಯು ಧೀಕರಿಸುತ್ತ—ತಂಗೀ, ನೀನು ಯಾರು? ಎಲ್ಲಿಂದ ಬಂದೆ? ಎಂದು ಪ್ರಶ್ನೆಮಾಡಲು, ಕುಮಾರಿಯು ಅವನ ಪ್ರಶ್ನೆಗಳಿಗೆ ಏನನ್ನೂ ಉತ್ತರ ಕೊಡದೆ—ನನಗೆ ವೇದನೆಗಳಾಗುತ್ತಲಿವೆ. ನಿಲ್ಲಲಿಕ್ಕೆ ಕೂಡ ನಾನು ಅಶಕ್ತಳಾಗಿದ್ದೇನೆ. ನಿಮಗೆ ಈ ಊರ ನಾರಾಯಣಶಾಸ್ತ್ರಿಗಳ ಮನೆಯು ಗೊತ್ತಿದ್ದರೆ ಯಾವ ಕಡೆಗಿರುವದೆಂಬದನ್ನಷ್ಟು ತೀವ್ರವಾಗಿ ನನಗೆ ತಿಳಿಸಿರಿ. ನಾನು ಘೋರತರವಾದ ಸಂಕಟಕ್ಕೊಳಗಾಗಿರುತ್ತೇನೆ, ಎಂದು ನುಡಿದಳು.

ಬಲವಂತ ಶೇಣ್ವಿಯು ಸಾಹಸವನ್ನು ಕಂಡು, ಮಾಣಿಕನೆಂಬ ಹೆಸ

ರಿನ ಭಟ್ಟನು ತಾನೂ ತನ್ನ ಧೈರ್ಯವನ್ನು ತೋರ್ಪಡಿಸುವ ಸಮಯ ವನ್ನು ಈಗ ಕಳಕೊಳ್ಳಬಾರದೆಂದು ಯೋಚಿಸಿ, ಆ ಪಿಶಾಚಿ ಸದೃಶಳಾದ ಕುಮಾರಿಕೆಯನ್ನು ಕುರಿತು—ನಾರಾಯಣಶಾಸ್ತ್ರಿಗಳ ಮನೆಯಲ್ಲಿ ಯಾರನ್ನು ಕಾಣಬೇಕಾಗಿದೆ? ಎಂದು ಕೇಳಿದನು

ಮಾಣಿಕನ ಮಾತಿಗೆ ಆ ಕುಮಾರಿಯು ಏನನ್ನೂ ಹೇಳಲಿಲ್ಲ. ಸುಮ್ಮನೆ ನಿಂತುಬಿಟ್ಟಳು; ಮಾಣಿಕಭಟ್ಟನಿಗೆ ಆ ಕುಮಾರಿಕೆಯಿಂದ ತನ್ನ ಪ್ರಶ್ನೆಯು ಉತ್ತರವನ್ನು ಹೊಂದುವ ಅಪೇಕ್ಷೆಯೂ ಇಂದಿಲ್ಲ; ಆದರೆ ತಾನು ಆ ಆಗಂತುಕ ಕುಮಾರಿಯು ಕೂಡ ಮಾತಾಡಿಸಿದೆನಲ್ಲ? ಎಂಬ ಪ್ರೌಢಿಯನ್ನು ಅಲ್ಲಿ ಕೂಡಿದವರಲ್ಲಿ ಮೆರಿಸುವದಕ್ಕಾಗಿಯೆ ಅವನು ಅವಳಿಗೆ ಹಾಗೆ ಪ್ರಶ್ನೆ ಮಾಡಿದ್ದನಷ್ಟೇ. ಕುಮಾರಿಯು ಉತ್ತರ ಕೊಡದಾಗಲು ಅವನು ಅವಳಿಗೆ ಮತ್ತೆ—ನಾರಾಯಣಶಾಸ್ತ್ರಿಗಳ ಮನೆಯು ಇಲ್ಲಿಂದ ದೂರದಲ್ಲಿದೆ. ಇಗೋ ಇತ್ತ ಕಡೆಯ ಈ ಕೆರೆಯ ದಂಡೆಯ ಹಿಡಿದು ದಕ್ಷಿಣದಿಕ್ಕಿಗೆ ಸರಾಸರಿ ಮೂರುಫರ್ಲಾಂಗ ನಡೆದು ಹೋದರೆ ಅಲ್ಲಿಯೊಂದು ಓಣಿ ಹತ್ತುವದು. ಅದೇ ಓಣಿಯಲ್ಲಿ ಶಾಸ್ತ್ರಿಗಳ ಮನೆಯಿರುತ್ತದೆ; ಆದರೆ ತಂಗೀ, ಇಂಥ ಈ ಭಯಂಕರ ಮಳೆಸುರಿಯುವ ಅಪರಾತ್ರಿಯಲ್ಲಿ ನಿನಗೆ ಆ ಮನೆಯು ಸಿಗು ವದೋ ಇಲ್ಲವೆ ದಾರಿತಪ್ಪಿ ಮತ್ತಾವ ಅನರ್ಥಕ್ಕೀಡಾಗುವಿಯೋ ತಿಳಿಯ. ದು, ಎಂದಂದು ಸುಮ್ಮನಾದನು.

ಕುಮಾರಿಯು ಪುನಃ ಒಂದಕ್ಷರವನ್ನು ಕೂಡ ನುಡಿಯದೆ, ಆ ಕೂಡಲೆ ಅಲ್ಲಿಂದ ಹೊರಟು ಆ ಘೋರವಾದ ಕಾರ್ಗತ್ತಲೆಯಲ್ಲಿ ಮಾಯ ವಾದಳು. ಆಕೆಯು ಕಾಣದಂತಾದ ಕೂಡಲೆ ಈ ಮೊದಲು ಒಳ್ಳೇ ಸಾಹಸಿಗರೆಂದು ತಮ್ಮತಮ್ಮಷ್ಟಕ್ಕೆ ಪ್ರೌಢಿ ಹೊಂದಿದ್ದ ಬಲವಂತ ಶೇಣ್ವೆ ಯೂ, ಮಾಣಿಕಭಟ್ಟನೂ ತೆಪ್ಪಗೆ ಕುಳಿತರು ಅವರ ಎದೆಯೂ ಧಡ ಧಡೆಂದು ಹಾರಹತ್ತಿತು. ಎಲ್ಲರೂ ಕಿಂಕರ್ತವ್ಯವಿಮೂಢರಾಗಿ ಸುಮ್ಮನೆ ಕುಳಿತುಕೊಂಡರು.

ಬಳಿಕ ಈ ಮೊದಲು ಚೌಡಿಯ ಕಥೆಯನ್ನು ಹೇಳುತ್ತಿದ್ದಂಥ ಹೆಗಡೆ ಮಂಜಯ್ಯನು ಮೆಲ್ಲಗೆ—ಯಾಕರಣ್ಣಾ, ಹೇಗಿದೆ? ಮಾಣಿಕಭಟ್ಟಾ, ಈಗ ಇಲ್ಲಿ ಕಾಣಿಸಿಕೊಂಡ ಮೂರ್ತಿಯು ಮತ್ತಾವುದೂ ಅಲ್ಲ. ಆ ದಿನ ನನಗೆ ಕಂಡ ಆ ಕುಪ್ಪಯ್ಯಶೆಟ್ಟಿಯ ಚಿಕ್ಕಸೊಸೆಯೇ ಅಹುದು. ಅವಳು ಹಡೆದು

ಸತ್ತು ವರ್ಷವಾಗುತ್ತ ಬಂತು. ಸತ್ತಾಗಿನಿಂದ ಅವಳು ಭೂತವಾಗಿರುವ ಳೆಂದು ಎಲ್ಲೆಲ್ಲಿಯೋ ವಾರ್ತೆಹರಡಿದೆ. ಆಕೆಗೂ ಆ ಅಜೀಕೇರಿಯ ನಾರಾಯಣ ಶಾಸ್ತ್ರಿಗಳ ಮಗಳಿಗೂ ಬಲು ಮೈತ್ರಿಯಿತ್ತು. ಅಂತೇ ಅವಳೀಗೆ ಅವರ ಮನೆಕೇಳುತ್ತ ನಡೆದಿರುವಳು. ಬಂದವಳು ಪಿಶಾಚಿಯೇ ಆಗಿತದಿದ್ದರೆ ಇಂದಿನ ಈ ನಭೂತಪೂರ್ವ ಮಳೆಯಲ್ಲಿ, ಗಾಢವಾದ ಕತ್ತಲೆಯಲ್ಲಿ ಹೊರಹೊರಡಲು ಅದಾವ ಹೆಂಗಸಿಗೆ ಇಷ್ಟು ಸಾಹಸವುಂಟಾಗಬಹುದು? ಇಂದು ಶನಿವಾರ, ಅಮಾಸಿಯು ಸಮೀಪಿಸಿದೆ; ಮೇಲಾಗಿ ಇಂಥ ದುರ್ಯೋಗ. ಅಂದಮೇಲೆ ಈ ಭೂತ ಪಿಶಾಚಿಗಳ ಸಂಚಾರಕ್ಕೆ ಇದರಂತಹ ಸುಯೋಗವು ಮತ್ತೊಂದು ದೊರಕಬೇಕು? ಎಂದು ನುಡಿಯಲು,

ಮಾಣಿಕಭಟ್ಟನು ಒಳ್ಳೇ ಆತ್ಮತೆಯಿಂದ—ಛೇ-ಛೇ, ಮಂಜಯ್ಯಾ ನಿನ್ನ ಮಾತಿಗೆ ನಾನೆಂದೂ ಒಪ್ಪತಕ್ಕವನಲ್ಲ. ಆ ಕುಪ್ಪಯ್ಯನ ಚಿಕ್ಕ ಸೊಸೆಯು ಇಷ್ಟೆಲ್ಲಿ ಸುಂದರಳಿದ್ದಳು? ನೀನು ಅವಳನ್ನು ಚನ್ನಾಗಿ ನೋಡಿರದಿದ್ದರೂ ನನಗೂ ಅವಳಿಗೂ ಚೆನ್ನಾಗಿ ಪರಿಚಯ ಇದ್ದರಿಂದ ಈಗ ಕಾಣಿಸಿಕೊಂಡವಳು [illegible] ಬಲ್ಲೆನು.

ಆಗ ಮಂಜಯ್ಯನು ತನ್ನ ಮಾತಿನ ಪುಷ್ಟಿಗಾಗಿ ಅನೇಕ ಉದಾಹರಣೆಗಳನ್ನು ಕೊಟ್ಟು—ಪಿಶಾಚ್ಯಾ, ಪಿಶಾಚಿ-ಚೌಡಿಗಳ ರೂಪವು ಇಂತಹದೇ ಎಂದು ಯಾರೂ ನಿಷ್ಕರ್ಷಿಸಿ ಹೇಳಲಾರರು. ಅವು ತಮ್ಮ ರೂಪಗಳನ್ನು ಒಬ್ಬರಿಗೆ ಒಂದು ತೆರನಾಗಿ ತೋರಿಸಿಕೊಂಡರೆ ಮತ್ತೊಬ್ಬರಿಗೆ ಮತ್ತೊಂದು ತೆರನಾಗಿ ಕಾಣಿಸಿಕೊಳ್ಳುವವು. ಈಗ ಬಂದವಳು ಅವಳಿಗಿಂತ ಸುಂದರ-ಅಸುಂದರಳಾಗಿದ್ದಳೆಂದು ಅನ್ನುವದು ತೀರ ಹುಚ್ಚುತನವು. ಈ ದಿನದಂತೆ ಈ ಮೊದಲೊಮ್ಮೆ ನನಗೆ ಅವಳು ಹೀಗೆಯೇ ಕಾಣಿಸಿಕೊಂಡಿದ್ದಳು. ಆದರೆ ನನಗೆ ಚೌಡಿಯ ಮಂತ್ರ ಬರುತ್ತಿರುವದರಿಂದ ಅದನ್ನು ಆಗಲೆ ಜಪಿಸಹತ್ತಿದೆನು. ಕೂಡಲೆ ಅವಳು ಮಾಯವಾಗಿದ್ದಳು. ಇಂದಾದರೂ ಅವಳ ದರ್ಶನವಾದ ಕೂಡಲೆ ನಾನು ಪುನಃ ಅದೇ ಕಾಯಕವನ್ನು ನಡಿಸಿದೆನು ಅಂತೇ ಅವಳು ಇಷ್ಟು ಬೇಗನೆ ಸುಮ್ಮನೆ ಹೊರಟು ಹೋದಳು. ಬಲವಂತಶೆಟ್ಟಿ,-ಮಾಣಿಕಭಟ್ಟ, ನಿಮ್ಮ ಧೈರ್ಯವನ್ನು ನೋಡಿ ಅವಳು ಹೆದರಿ ಹೋದಳೆಂದು ಮಾತ್ರ ನೀವು ಸರ್ವಥಾ ತಿಳಿಕೊಳ್ಳಬೇಡಿರಿ. ಇಂದು ನಾನು ನಿಮ್ಮೊಳಗಿರದಿದ್ದರೆ ಹಾಗು ಆಕೆಯ

ದರ್ಶನವಾದಕೂಡಲೆ ನಾನು ಚೌಡಿಯ ಮಂತ್ರವನ್ನು ಜಪಿಸಹತ್ತಿದ್ದರೆ ಕಾಣುತ್ತಿತ್ತು ಆಗ ನಿಮ್ಮ ಧೈರ್ಯ-ಸಾಹಸಗಳ ಬಣ್ಣವೆಷ್ಟೆಂಬದು?

ಬಲವಂತರೇಣ್ಣೆಗೆ ಮಂಜಯ್ಯನ ಆತ್ಮಪ್ರೌಢಿಯು ರುಚಿಸಲಿಲ್ಲ. ಆದರಿಂದ ಅವನು ಆತನನ್ನು ಮತ್ತೆ ಮಾತಾಡಗೊಡದೆ— ಅದಿರಲಿ ಬಿಡೋ, ಅವಳು ಭೂತವಂತೂ ಅಲ್ಲ. ನಾರಾಯಣಶಾಸ್ತ್ರಿಗಳ ಕೇರಿಯ ಯಾರೊಬ್ಬರ ಮನೆಯ ಮಗಳಾಗಿರಬೇಕು. ಅತ್ತೆಯ ಮನೆಯ ಅಸಹ್ಯ ಕಾಟವನ್ನು ತಾಳಲಾರದೆ, ಈ ದಿನದ ಈ ದುಃಸಮಯದಲ್ಲಿ ಅತ್ತೆಯ ಮನೆಯವರ ಕಣ್ಣು ತಪ್ಪಿಸಿ ಓಡಿಬಂದಿರಬೇಕೆಂದು ಕಾಣುತ್ತದೆ ಎಂದನು.

ಇದೇ ಪ್ರಕಾರದ ವಾದ-ವಿವಾದದಲ್ಲಿ ಅವರ ಇಸ್ಪೇಟನಾಟವು ಒಮ್ಮೆ ನಿಂತದ್ದು ನಿಂತೇಹೋಯಿತು. ಮಳೆಯ ವೇಗವು ಕೊಂಚವೂ ಕಡಿಮೆಯಾಗಿರಲಿಲ್ಲ ಇಷ್ಟರಲ್ಲಿ ಮತ್ತೊಂದು ಮೂರ್ತಿಯು ಆ ಅಂಗಡಿಯ ಎದುರಿಗೆ ಬಂದು ನಿಂತಿತು. ಆ ಆಗಂತುಕ ಮೂರ್ತಿಯನ್ನು ಕಂಡು ಅವರೆಲ್ಲರೂ ಮತ್ತೆ ಗದಗುಟ್ಟಿ ನಡುಗಹತ್ತಿದರು. ಅವನಂತಹ ಭಯಂಕರ, ಅವನಂತಹ ಅಸಹ್ಯ ಮುಸುಡಿಯ ಮನುಷ್ಯನನ್ನು ಅಲ್ಲಿ ಕಲೆತಿದ್ದ ನಾಲ್ಕೈದು ಜನರಲ್ಲಿ ಈ ಮೊದಲಾರೂ ನೋಡಿರಲಿಲ್ಲ. ಅಂತೇ ಅವರು ಅಷ್ಟು ಅಂಜಿ ಭಯಭೀತರಾಗಿದ್ದರು. ಆ ಆಗಂತುಕನ ಹಳ್ಳೇ ಬಲಿಷ್ಠವಾದ ದೇಹ, ಉದ್ದುದ್ದನ್ನ ಕೈ-ಕಾಲುಗಳು, ಕಾಡಿಗೆಗಿಂತ ಕಪ್ಪಾದ ಮೈ ಬಣ್ಣ, ಇಷ್ಟಗಲವಾದ ಮೋರೆ, ಗುಲಗಂಜಿಯಂತಹ ಕಣ್ಣು, ಚಪ್ಪಟೆಯಾದ ಮೂಗು, ಅಂಕಡೊಂಕಾದ ಹಲ್ಲು ಇವುಗಳೂ, ಇವುಗಳಿಗಿಂತ ಒಂದು ತೂಕ ಹೆಚ್ಚೇ ಕರ್ಕಶವಾದ ಆತನ ದನಿ ಇವೆಲ್ಲ ಅವರನ್ನು ಗಾಬರಿಗೊಳಿಸಲಿಕ್ಕೆ ಕಾರಣವಾಗಿದ್ದರೆ ಸೋಜಿಗವೇನು?

ಆ ಆಗಂತುಕ ದಸ್ಯುಸದೃಶ ವ್ಯಕ್ತಿಯು ಆ ಕಿರಾಣಿ ಅಂಗಡಿಯ ಎದುರಿಗೆ ಬಂದು—ಎಲೈ ಅಂಗಡಿಕಾರನೇ, ಈ ದಾರಿಯಿಂದ ಹಬ್ಬ ಕುಮಾರಿಯು ಹೋದದ್ದನ್ನು ನೋಡಿದೆಯಾ? ಎಂದು ಪ್ರಶ್ನಮಾಡಲು, ಅವನಿಗೆ ಉತ್ತರ ಕೊಡಲಿಕ್ಕೆ ಯಾರೂ ಧೈರ್ಯ ತಾಳಲಿಲ್ಲ.

ಕೂಡಲೆ ಆ ರಾಕ್ಷಸಪುರುಷನು—ಎಲೈ ಜನಗಳಿರಾ, ನೀವು ನಾನು ಕೇಳಿದ ಪ್ರಶ್ನೆಗೆ ಖಂಡಿತವಾದ ಉತ್ತರವನ್ನು ಕೊಡದಿದ್ದರೆ ನಿಮ್ಮ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ. ನಿಮ್ಮನ್ನೆಲ್ಲ ಈ ನನ್ನ ಕೈಗತ್ತಿಗೆ ಆಹುತಿ

ಕೊಡದೆ ಬಿಡೆನು, ಎಂದಂದು ತನ್ನ ಬಗಲೊಳಗೆ ಅವಿತುಕೊಂಡಿಟ್ಟದ್ದ ಇಷ್ಟುದ್ದ ಒಳ್ಳೇ ಹದನಾದ ಕತ್ತಿಯನ್ನು ಹೊರಹೊರಡಿಸಿ, ಅದನ್ನು ಝಳಪಿಸುತ್ತ ಅವರ ಕಡೆಗೆ ಟಕಮಕ ನೋಡಲಾರಂಭಿಸಿದನು.

ಅದನ್ನು ಕಂಡು ಈ ಮೊದಲು ತನ್ನ ಅತುಲಧೈರ್ಯಸಾಹಸಗಳಿಂದ ತನ್ನ ಸಂಗಡಿಗರನ್ನು ಬೆಪ್ಪುಗೊಳಿಸಿದ್ದ ಮಾಣಿಕಭಟ್ಟನು ತಡವರಿಸುತ್ತ— ಈಗ ಕೆಲಹೊತ್ತಿನ ಮುಂಚೆ ಓರ್ವ ಕುಮಾರಿಯು ಈ ದಕ್ಷಿಣದಿಕ್ಕಿನ ಕೆರೆಯ ಒಂಡಿಹಿಡಿದು ನಾರಾಯಣಶಾಸ್ತ್ರಿಗಳ ಕೇರಿಯ ಕಡೆಗೆ ಹೋದಳು, ಎಂದು ಅಸ್ಪಷ್ಟವಾಗಿ ನುಡಿದನು.

ಕೂಡಲೆ ಆ ಆಗಂತುಕ ದಸ್ಯುವು ಅಲ್ಲಿ ಮತ್ತೆ ಒಂದು ನಿಮಿಷಕೂಡ ನಿಲ್ಲದೆ ದಕ್ಷಿಣಾಭಿಮುಖವಾಗಿ ಭರದಿಂದ ಸಾಗಿದನು. ಅವನು ತಮಗಾವ ಬಗೆಯ ಕೇಡನ್ನೂ ಬಗೆಯದೆ ಸುಮ್ಮನೆ ಹೊರಟು ಹೋದದ್ದನ್ನು ಕಂಡು ಮಾಣಿಕಭಟ್ಟನು ಒಂದು ನಿಟ್ಟುಸಿರುಗರೆದು ಶಾಂತನಾದನು. ಕೆಲಹೊತ್ತಿನ ಮೇಲೆ ಅವನು—ಏನಯ್ಯಾ ಅಂಗಡಿಕಾರಾ, ಇಂದಿನ ಈ ದೃಶ್ಯಗಳ ಗೂಢವೇನಿರಬಹುದು, ಹೇಳು ನೋಡೋಣ? ಎನ್ನಲು,

"ಈ ಗೂಢವು ನನಗೂ ತಿಳಿಯದು. ಅಂತೂ ಏನೋ ಗೊಂದಲ ಕಾಣುತ್ತದೆ" ಎಂದು ಬಲವಂತನು ನುಡಿಯುತ್ತಿರಲಿಕ್ಕೆ

ನಡುವೇ ಬಾಯಿಹಾಕಿ ಮಂಜಯ್ಯ ಹೆಗಡೆ- ಇದು ಮತ್ತೇನೂ ಇಲ್ಲರೋ; ಇದೆಲ್ಲ ಭೂತಚೇಷ್ಟೆ.

ಬಲವಂತ ಶೆಣ್ವೆ (ತಿರಸ್ಕಾರದಿಂದ)---ಛೀ-ಛೇ! ಭೂತಗಳಲ್ಲ. ಆ ಒಂದುಗಡೆ ಹೋದವನದೇನೋ ದುಷ್ಟಹೇತುವಾಗಿರುವಂತೆ ತೋರುತ್ತದೆ.

ಹೀಗೆ ಅವರಲ್ಲಿ ಅಬದ್ಧ ಮಾತು-ಕಥೆಗಳು ನಡೆದಿರಲಿಕ್ಕೆ ದೂರದಲ್ಲಿ— "ಅಪ್ಪಾ ಯಾರಿದ್ದೀರಲ್ಲಿ? ಬೇಗನೆ ಬನ್ನಿರಿ ಖೂನಿ ಖೂನಿ-ಕೊಲ್ಲುತ್ತಿದ್ದಾನೆ. ಬೇಗನೆ ಬಂದು ಈ ನೀಚನ ಕೈಯಿಂದ ಬಿಡಿಸಿಕೊಳ್ಳಿರಿ........" ಎಂಬ ಕರ್ಣಕಠೋರ ಚೀತ್ಕಾರಧ್ವನಿಯು ಕೇಳಿಸಿತು. ಅದನ್ನು ಕೇಳಿದ ಕೂಡಲೆ ಬಲವಂತನು ಎದ್ದುನಿಂತನು; ಹಾಗು ತನ್ನ ಬಡಿಗೆಯನ್ನು ಝಡುಕಿಕೊಂಡು ಅಲ್ಲಿದ್ದವರನ್ನು ಕುರಿತು—ಈಗ ಹೋದ ಆ ದಸ್ಯುವು ಆ ಕುಮಾರಿಯನ್ನು ಕೊಲ್ಲುತ್ತಿರುವಂತೆ ಕಾಣುತ್ತದೆ. ಆದುದರಿಂದ ಈಗ ನಾವಿಲ್ಲಿ ಸುಮ್ಮನೆ ಹರಟೆಹೊಡೆಯುತ್ತ ಕೂಡ್ರುವದು ಸರಿಯಲ್ಲ. ನಾನ್ಹೆ

ಲ್ಲರೂ ಶೀಘ್ರವಾಗಿ ಅಲ್ಲಿಗೆ ಹೋದರೆ ಪಾಪ ಆ ಬಡಕನ್ನಿಕೆಯು ಪ್ರಾಣದಿಂದ ಉಳಿದರೂ ಉಳಿಯಬಹುದಾಗಿದೆ, ಎಂದನು.

ಬಲವಂತನ ಆ ನುಡಿಯನ್ನು ಕೇಳಿ ಅಲ್ಲಿ ಇಸ್ಪೀಟಿನಾಟಕ್ಕೆ ಕುಳಿತಿದ್ದ ವರೆಲ್ಲರೂ ಅವನೊಡನೆ ಹೊರಡಲು ಸನ್ನದ್ಧರಾದರು; ಮಂಜಯ್ಯನು ಮಾತ್ರ ತನ್ನ ಮನೋಭಾವನೆಗೆ ತಕ್ಕಂತೆ ಅದನ್ನೆಲ್ಲ ಭೂತಚೇಷ್ಟೆಯೆಂದೇ ತಿಳಿದು, ತಾನು ಅವರೊಡನೆ ಹೊರಡದೆ, ಸಿಟ್ಟಿಗೆ ಮನೆಯ ದಾರಿಹಿಡಿದ ನಷ್ಟೇ ಅಲ್ಲ, ಅವರಿಗೂ ಅಲ್ಲಿಗೆ ಹೋಗುವದು ಯುಕ್ತವಲ್ಲೆಂದು ಬೋಧಿ ಸದೆ ಬಿಡಲಿಲ್ಲ.

ಕೂಡಲೆ ಬಲವಂತನು ತನ್ನ ಸಂಗಡಿಗರೊಡನೆ ಅಂಗಡಿಯಿಂದ ಹೊರಬಿದ್ದನು. ಹೊರಡುವಾಗ ಅಂಗಡಿಯ ಮಳಿಗೆಯ ಪಟಕು ಗಳನ್ನು ಇಕ್ಕಿಕೊಂಡು ಭದ್ರವಾದ ಕೀಲಿ ಹಾಕಿದನು; ಹಾಗು ಸಂಗಡಿಗರ ಕೈಯಲ್ಲೂ ಒಂದೊಂದು ನಿಡಿದಾದ ಬಡಿಗೆಯನ್ನು ಕೊಟ್ಟು ಕಂದಿಲನ್ನು ಒಡಕೊಂಡು ಆ ಚೀತ್ಕಾರಶಬ್ದವು ಕೇಳಬರುತ್ತಿರುವಕಡೆಗೆ ಭರದಿಂದ ಸಾಗಿದನು. ಇಷ್ಟರಲ್ಲಿ ಮಳೆಯವೇಗವೂ ಕಡಿಮೆಯಾಗಿತ್ತು. ಆಕಾಶವೂ ನೀಲಿಬಣ್ಣದ್ದಾದ್ದರಿಂದ ಅಲ್ಲಲ್ಲಿ ತಾರಕಾಪುಂಜಗಳು ಒಳ್ಳೇ ತೇಜದಿಂದ ಮಿನುಗಲಾರಂಭಿಸಿದ್ದವು. ಮಾಣಿಕಭಟ್ಟನು ಯಾವ ಕೆರೆಯಹಿಡ್ದಿನ ದಾರಿ ಹಿಡಿದು ಹೋದರೆ ನಾರಾಯಣಶಾಸ್ತ್ರಿಗಳ ಮನೆ ಸಿಗುವದೆಂದು ಕುಮಾರಿ ಕೆಗೆ ಹೇಳಿದ್ದನೋ ಅದೇ ದಾರಿಹಿಡಿದು ಇವರೆಲ್ಲರೂ ಹುಡುಕಲಾರಂಭಿಸಿದರು. ಅಲ್ಪಾವಕಾಶದಲ್ಲಿಯೇ ಅವರು ಆ ಕೆರೆಯದಂಡೆಯ ಕಡೆಗೆ ಬಂದರು. ಅಲ್ಲಿ ಅವರಿಗಾರೂ ಕಾಣಿಸಲಿಲ್ಲ. ಅವರು ಆ ಕೆರೆಯಸುತ್ತಲು ತಿರುಗಿ, ಚೀ-ತ್ಕಾರಮಾಡಿದ ಕುಮಾರಿಯನ್ನು ಶೋಧಿಸಿದರು. ಹೀಗೆ ಅವರು ಅರ್ಧ-ಮುಕ್ಕಾಲು ಗಂಟೆಯವರೆಗೆ ಹುಡುಕಿದರೂ ಏನೂ ಪ್ರಯೋಜನವಾಗಲಿಲ್ಲ. ಆದರೂ ಅವರು ನಿರಾಶೆಗೊಳ್ಳದೆ ಅತ್ತಿತ್ತ ಶೋಧಿಸುತ್ತಲೇ ನಡೆದಿದ್ದರು. ಆ ಕುಮಾರಿಯನ್ನಾಗಲಿ, ಅವಳ ಮೃತಶರೀರದ ಶೇಷವನ್ನಾಗಲಿ ಇಲ್ಲವೆ ಅವಳನ್ನು ಖೂನಿಮಾಡಿದ್ದ ಆ ಕಾಪುರುಷನನ್ನಾಗಲಿ ಗೊತ್ತುಹಚ್ಚದೆ ಮನೆಗೆ ತಿರುಗಲಿಕ್ಕಿಲ್ಲವೆಂದು ಅವರೆಲ್ಲರೂ ಆಗ ಪಣತೊಟ್ಟಂತೆಯೇ ತೋರುತ್ತಿತ್ತು.

ಈ ಪ್ರಕಾರ ಛಲಕ್ಕೆಬಿದ್ದ ಅವರು ಮತ್ತೆ ಅರ್ಧತಾಸಿನ ವರೆಗೆ ಆ

ಕೆರೆಯ ಸುತ್ತುಮುತ್ತಲೂ ಹುಡುಕಿದರು. ಅಷ್ಟರಲ್ಲಿ ಆ ಕೆರೆಯ ಆಚೇದಂಡೆ ಹಿಡಿದು ಯಾವನೋ ಒಬ್ಬನು ತ್ವರಿತಗತಿಯಿಂದ ಸಾಗುತ್ತಿರುವದು ಅವರಿಗೆ ಕಾಣಿಸಿತು. ಆ ಕೂಡಲೆ ಅವರೆಲ್ಲರೂ ಹುಯ್ಯೆಂದು ಅತ್ತಕಡೆಗೇ ಓಡಲಾರಂಭಿಸಿದರು. ಆ ಮನುಷ್ಯನ ಸಮೀಪಕ್ಕೆ ಹೋಗಿ ಅವನ ಮುಖದಮೇಲೆ ಕಂದೀಲಿನ ಪ್ರಕಾಶಕೆಡಹಿ ನೋಡುತ್ತಾರೆ, ಅವನು ಮತ್ತಾರೂ ಆಗಿರದೆ ತಮ್ಮ ಊರ ಆಚೇಕೇರಿಯ ಆ ನಾರಾಯಣ ಶಾಸ್ತ್ರಿಯೇ ಆಗಿದ್ದನು. ಆ ಕೂಡಲೆ ಅವರೆಲ್ಲರೂ ಅವನಿಗೆ ಒಬ್ಬೊಬ್ಬರಾಗಿ ಪೊಡಮಟ್ಟು ಒತ್ತಟ್ಟಿಗೆಸರಿದು ನಿಂತುಕೊಂಡರು. ಇಷ್ಟುಜನರು ಈ ಅಪರಾತ್ರಿಯಲ್ಲಿ ತನ್ನೆಡೆಗೆ ಬಂದು ತನಗೆ ಪೊಡಮಟ್ಟದ್ದನ್ನು ನೋಡಿ ನಾರಾಯಣಶಾಸ್ತ್ರಿಯೂ ವಿಸ್ಮಯುಗೊಂಡನು. ಆಗ ಆತನು ಅಧಿಕಾರವಾಣಿಯಿಂದ—ಯಾಕೋ ಬಲವಂತಾ, ಈ ಅಪರಾತ್ರಿಯಲ್ಲಿ ಹೀಗೆ ಉದ್ದುದ್ದನ್ನ ಡೊಣ್ಣೆಗಳನ್ನು ಹಿಡಿದುಕೊಂಡು ತಿರುಗುತ್ತಿರುವದೇಕೆ? ಎಂದು ಪ್ರಶ್ನೆ ಮಾಡಿದನು.

ಬಲವಂತ ಶೇಣ್ವಿಯು ಅಂದು ರಾತ್ರಿ ನಡೆದ ಸಮಸ್ತ ಸಂಗತಿಗಳನ್ನೂ ನಾರಾಯಣಶಾಸ್ತ್ರಿಗೆ ವಿಶದವಾಗಿ ತಿಳಿಸಿದನು. ಅದನ್ನೆಲ್ಲ ಕೇಳಿ ನಾರಾಯಣಶಾಸ್ತ್ರಿಯು—ನಿಮ್ಮ ಅನುಮಾನವು ಸರಿಯಾದದ್ದೇ ಎಂದು ನನಗೀಗ ತಿಳಿಯಿತು. ಯಾಕಂದರೆ ದಾರಿಯಲ್ಲಿ ಬರುವಾಗ ನಾನೊಂದು ರಕ್ತದಿಂದ ಮುಳುಗಿದ್ದ ಅರಿವೆಯನ್ನು ನೋಡಿದೆನು, ಎಂದನು.

"ಶಾಸ್ತ್ರಿಗಳೇ ಅದೆಲ್ಲಿ? ನಮ್ಮನ್ನು ಅಲ್ಲಿಗೆ ಕರೆದೊಯ್ದು ತೋರಿಸುವಿರಾ? ಆ ಅರಿವೆಯನ್ನು ನೋಡಿದರೆ ಅದು ಆ ಕುಮಾರಿಯದಹುದೋ ಅಲ್ಲವೋ ಎಂಬದನ್ನು ನಾವು ಹೇಳಬಲ್ಲೆವು"ಎಂದು ಬಲವಂತಾದಿ ಜನರು ಆಗ್ರಹಪಡಲು,

ನಾರಾಯಣಶಾಸ್ತ್ರಿಯು ಒಮ್ಮೆಲೆ ಆ ಅರಿವೆಯಿದ್ದಲ್ಲಿಗೆ ಅವರನ್ನು ಕರೆದೊಯ್ಯಲಿಕ್ಕೆ ಸಮ್ಮತಿಸಲಿಲ್ಲ. ಅವರು ಪುನಃ ಪುನಃ ಆ ಬಗ್ಗೆ ಪೀಡಿಸಹತ್ತಲು ಕಡೆಗೆ ಅವನು ಸಮ್ಮತಿಸಿ ಅವರೊಡನೆ ಅತ್ತಸಾಗಿದನು. ಕೆಲ ದಾರಿಯನ್ನು ಕ್ರಮಿಸಿದ ಬಳಿಕ ನಾರಾಯಣಶಾಸ್ತ್ರಿಯು ಅವರೆಲ್ಲರನ್ನು ಸಮೀಪದಲ್ಲಿರುವ ಒಂದು ಕಾಡಿಗೆ ಕರೆದೊಯ್ದನು. ಆ ಕಾಡಿನಲ್ಲಿ ಅವರು ಬಹಳ ದಾರಿ ಕ್ರಮಿಸಬೇಕಾಗಲಿಲ್ಲ. ಹತ್ತೆಂಟು ಹೆಜ್ಜೆಸಾಗುವಷ್ಟರಲ್ಲಿ

ದೀಪದ ಬೆಳಕಿನಲ್ಲಿ ಆ ರಕ್ತದಿಂದ ಮುಳುಗಿದ ಅರಿವೆಯ ತುಂಡು ಅವರೆಲ್ಲರ ದೃಷ್ಟಿಗೆ ಬಿದ್ದಿತು. ಅಲ್ಲಿ ಬರೀ ಆ ರಕ್ತದಲ್ಲಿ ಮುಳುಗಿದ ಅರಿವೆಯೇ ಇರದೆ, ಅದರ ಹತ್ತರವೇ ಒಂದು ದೀರ್ಘವಾದ ಕೈಗತ್ತಿಯೂ, ಎರಡು-ಮೂರು ಹೆಂಗಸರ ತುರುಬಿನಲ್ಲಿ ಚುಚ್ಚುವ ಬೆಳ್ಳಿಯ ಅಕಡಾಗಳೂ ಬಿದ್ದಿದ್ದವು.

ಆ ಅರಿವೆಯ ತುಂಡನ್ನು ನೋಡಿದ ಕೂಡಲೆ ಅದು ಪಾಪ ಆ ಬಡ ಕುಮಾರಿಯದೇ ಎಂಬದನ್ನು ಬಲವಂತಾದಿಗಳು ಗುರ್ತಿಸಿದರು. ಅಲ್ಲಿಯ ಆ ದೃಶ್ಯವನ್ನು ಕಂಡು ನಾರಾಯಣಶಾಸ್ತ್ರಿಯು ಹೊರತು ಉಳಿದವರೆಲ್ಲರ ಎದೆಯು ಧಸ್ಸೆಂದಿತು; ಮೈಮೇಲೆ ರೋಮಾಂಚಗಳೆದ್ದವು. ಅವರು ಆ ಕೊಲೆಗೆ ಸಂಬಂಧಪಟ್ಟ ಆ ಅರಿವೆ, ಕೈಗತ್ತಿ, ಅಕಡಾ ಮುಂತಾದವುಗಳನ್ನು ಎತ್ತಿಕೊಳ್ಳುವದೊತ್ತಟ್ಟಿಗಿರಲಿ, ಅವುಗಳನ್ನು ನೋಡಿದಾಗಿನಿಂದ ಅವರ ಕೈಕಾಲುಗಳು ಥರಗುಟ್ಟಿ ನಡುಗಹತ್ತಿದ್ದವು. ಮನುಷ್ಯನ ರಕ್ತವೆಂದರೆ ಅಂಥ ಭಯಾನಕ ವಸ್ತುವೇ ಸರಿ! ಆಗ ಆ ಬಲವಂತನ ಕೈಯೊಳಗಿನ ಆ ನಿಡಿದಾದ ಡೊಣ್ಣೆಯೂ ಉಜ್ವಲಿತ ಪ್ರಕಾಶವುಳ್ಳ ಕಂದಿಲೂ ಜಾರಿ ನೆಲಕ್ಕೆ ಬಿದ್ದವು. ಕಂದೀಲಿನ ಕಾಜು ಒಡೆದು ದೀಪವು ನಂದಿಹೋಯಿತು ಕೂಡಲೆ ಅವರೆಲ್ಲರೂ ಅಲ್ಲಿ ಮತ್ತೆ ಒಂದು ಕ್ಷಣಕೂಡ ನಿಲ್ಲದೆ ಕಾಲಿಗೆ ಬುದ್ಧೀ ಹೇಳಿ ತಮ್ಮ ತಮ್ಮ ಮನೆಯನ್ನು ಸೇರಿಕೊಂಡರು.

ಅಂದಿನ ರಾತ್ರಿ ಅವರೆಲ್ಲರ ಮನಸ್ಸಿನಲ್ಲಿಯೂ ಆ ಕುಮಾರಿಕೆಯು ಯಾರು? ಎಂಬ ವಿಷಯವೇ ಮನೆಮಾಡಿಕೊಂಡಿತ್ತು.

---

## ೨ ಮನೋರಮೆ.

ಮನೋರಮೆಗೆ ಬರಬರುತ್ತ ಹುಚ್ಚು ಹಿಡಿಯಿತು; ಅವಳು ಹಗಲು-ರಾತ್ರಿಗಳೆನ್ನದೆ ಯಾವುದೋ ಒಂದು ಚಿಂತೆಯಲ್ಲಿ ಮಗ್ನಳಾಗಿರುತ್ತಿದ್ದಳು. ನಿರ್ಜನ ಪ್ರದೇಶಕ್ಕೆ ಹೋಗಿ ಹಣೆ ಹಣೆ ಬಡಕೊಂಡು ಅಳುತ್ತಿದ್ದಳು. ಒಮ್ಮೊಮ್ಮೆ ಅಳುವಾಗಲೂ ಒಳ್ಳೇ ಗಟ್ಟಿಯಾಗಿ ಖೊಕ್-ಖೊಕ್ಕೆಂದು ನಗುತ್ತಿದ್ದಳು. ಮತ್ತೊಮ್ಮೆ ನಗುವಾಗಲೂ ಗಟ್ಟಿದನಿ ತೆಗೆದು ಅಳುತ್ತಿದ್ದಳು.

ಮನೋರಮೆಯು ಹುಚ್ಚಿಯಾಗಿದ್ದಳೋ ಹುಚ್ಚಿಯಾಗುತ್ತ ನಡೆದಿದ್ದಳೋ ಯಾವುದನ್ನೂ ನಿಷ್ಕರ್ಷಿಸಲಿಕ್ಕೆ ಸಾಧ್ಯವಿರಲಿಲ್ಲ. ಅವಳ ಈ ಮೊದಲಿನ ವಿದ್ಯುತ್ ಸಂಚಾರದಂತಹ ಮರ್ಮಭೇದಕ ಕಟಾಕ್ಷಗಳು ಮಾತ್ರ ಸಂಪೂರ್ಣವಾಗಿ ಲುಪ್ತವಾಗಿದ್ದವು. ಆದರಿಂದ ಈಗ ಮನೋರಮೆಯು ಮನೋರಮತ್ವವು ಬಾಕಿ ಉಳಿದಿರಲಿಲ್ಲ ಮನೋರಮೆಗೆ ಇಷ್ಟು ದುಃಖ-ಚಿಂತೆಗಳು ಯಾಕೆ ಉಂಟಾಗಿರಬಹುದು? ವಾಚಕರೇ ನಿಮಗೆ ಈಗ ಅದನ್ನೇ ಹೇಳುತ್ತಿರುವೆವು; ಲಕ್ಷ್ಯವಿಟ್ಟು ಕೇಳಿರಿ.

ಕಾರ್ಗತ್ತಲೆಯು ನಿಬಿಯು. ಅರುಣೋದಯವಾಗಲಿಕ್ಕೆ ಇನ್ನು ವಿಲಂಬವಿರಲಿಲ್ಲ. ಬಹಳ ಹೊತ್ತಿಗೆ ಮೊದಲು ಮಳೆಯು ಒಂದು ದೊಡ್ಡ ಸೆಳಕಲು ಆಗಿ ಹೋಗಿತ್ತು. ಆದರೂ ಇನ್ನೂ ಮುಗಿಲ ತುಂಬೆಲ್ಲ ಕೃಷ್ಣವರ್ಣದ ಮೋಡಗಳೇ ಮೋಡಗಳು; ಆಗಿನ ಆಕಾಶದ ಕಡೆಗೆ ನೋಡಿದ್ದರೆ ಇನ್ನೊಂದು ಸರಿವು ಜಲೋ ಮಳೆಯಾಗದೆಯಿರದೆಂದು ತಿಳಿಯದೆ ಇರುತ್ತಿರಲಿಲ್ಲ. ಸಮುದ್ರದಲ್ಲಿಯೂ ನದೀತೀರಗಳಲ್ಲಿ ಝಳಝಳನೆಂಬ ಪ್ರವಾಹನಾದವು ಕರ್ಣಕಠೋರವಾಗಿದ್ದಿತು. ಆ ಸಮಯದಲ್ಲಿ ನದೀತೀರದ ವೃಕ್ಷಗಳೊಳಗಿನ ಗೂಡುಗಳಲ್ಲಿಯ ಯಾವುದೊಂದು ಪಕ್ಷಿಯ ಶಬ್ದವು ಇಲ್ಲವೆ ಸಮೀಪದ ಗ್ರಾಮದೊಳಗಿನ ಯಾವುದೊಂದು ಮನೆಯ ಶಿಶುವಿನ ಕ್ರಂದನವು ಕೂಡ ಕೇಳಬರುತ್ತಿರಲಿಲ್ಲ. ಇಂಥೀ ಸಮಯದಲ್ಲಿ ನದಿಯ ನೀರಲ್ಲಿ ಅಲ್ಪಸ್ವಲ್ಪವಾಗಿ ಕಾಣುತ್ತಿದ್ದ ಆಕಾಶದೊಳಗಿನ ಕಪ್ಪುಬಣ್ಣದ ಪ್ರಚಂಡ ಮೋಡಗಳ ಪ್ರತಿಬಿಂಬಗಳನ್ನು ದಂಡೆಯಲ್ಲಿ ಕುಳಿತಿದ್ದ ಒಂದು ವ್ಯಕ್ತಿಯು ಎಡೆಬಿಡದೆ ನೋಡುತಲಿತ್ತು.

ಹೊಳೆಯ ಧಡದಲ್ಲಿ ಕುಳಿತಿದ್ದವನ ಬೆನ್ನಹಿಂದೆ ತುಸ ದೂರದಲ್ಲಿ ಹುಚ್ಚ ಮನೋರಮೆಯು ಹದನಾದ ಕಠಾರಿಯನ್ನು ಹಿಡಕೊಂಡು ನಿಂತಿದ್ದಳು; ಹಾಗು ಕೊಂಚವೂ ಕಾಲಸಪ್ಪಳವಾಗದ ಹಾಗೆ ಒಂದೊಂದೇ ಹೆಜ್ಜೆಯನ್ನಿಕ್ಕುತ್ತ ಆ ವ್ಯಕ್ತಿಯ ಸಮೀಪಸಮೀಪಕ್ಕೆ ಸಾಗುತಲಿದ್ದಳು. ಆಗ ಸುತ್ತಲೂ ಬಹು ಭಯಾನಕವಾದ ಕಾರ್ಗತ್ತಲೆಯು ಬಿದ್ದು ಏನೂ ಕಾಣದಂತಾಗಿದ್ದರೂ, ಆ ಹುಚ್ಚಿಯ ಕಣ್ಣುಗಳಿಂದ ಕೆಂಡಗಳು ಹೊರಚಿಮ್ಮುತ್ತಿರುವಂತೆ ತೋರುತಲಿತ್ತು ಮನೋರಮೆಯು ಯಾವಾಗ ಆ ವ್ಯಕ್ತಿಯ ತೀರ ಹತ್ತಿರದಲ್ಲಿ ಹೋದಳೋ, ಆಗ ಅವನು ಅವಳ ಕಡೆಗೆ ಕಣ್ಣೆತ್ತಿ

ಕೂಡ ನೋಡದೆ, ಸ್ಮಿತವದನದಿಂದ—ಮನೋರಮೇ, ಈ ದಿನ ಮತ್ತೆ ನನ್ನ ಗೊಡವೆಗೇಕೆ ಬಂದೆ? ನನ್ನ ವೈರವುಟ್ಟಿ ನನ್ನನ್ನು ಕೊಲ್ಲಬೇಕೆಂದಿರುವೆಯಾ? ಆದರೆ ಆ ಸಾಹಸಕ್ಕೆ ಮನಸ್ಸು ಮಾಡಿ ನಿನ್ನ ಆಯುಷ್ಯವನ್ನು ಮಾತ್ರ ಮುಗಿಸಿಕೊಳ್ಳುತ್ತೀ, ಎಂದು ನುಡಿದನು.

ಈಗಲೀ ಈತನಿಗೆ ತನ್ನ ಸುಳಿವು ಹತ್ತಿತಲ್ಲವೆ? ಎಂದು ಹತಾಶಳಾಗಿ ಮನೋರಮೆಯು ನಿಂತಲ್ಲಿಯೇ ನಿಂತುಬಿಟ್ಟಳು. ಕೆಲಕ್ಷಣಗಳ ನಂತರ ಅವಳು—ನಾನಂತೂ ಎಂದೋ ಸತ್ತು ಹೋಗಿರುತ್ತೇನೆ; ಇನ್ನು ನನ್ನ ಸಾವಿನಲ್ಲಿ ಬಾಕಿ ಉಳಿದಿರುವದೇನು? ಆದರೆ ವಿನಾಯಕಾ, ಈ ದಿನವೂ ನೀನು ನನ್ನ ಕೈಯಿಂದ ಪಾರಾದೆ. ಆದರೂ ಇಷ್ಟಕ್ಕೇ ತೀರಿತೆಂದು ಭಾವಿಸಿ ನಿಶ್ಚಿಂತನಾಗಬೇಡ. ಈ ನನ್ನ ಕೈಗತ್ತಿಯು ನಿನ್ನ ಹೃದಯವನ್ನು ಪ್ರವೇಶಿಸಿ, ನಿನ್ನನ್ನು ಯಮಲೋಕಕ್ಕಟ್ಟುವ ಒಂದು ದಿನವು ಇನ್ನು ತುಸದಿನಗಳಲ್ಲಿಯೇ ಉದಯಿಸುವದೆಂಬದನ್ನು ಲಕ್ಷ್ಯದಲ್ಲಿಟ್ಟುಕೋ.

ವಿನಾಯಕನು ಈ ಹುಚ್ಚಿಯ ಮಾತಿಗೆ ವ್ಯಂಗವಾಗಿ ನಕ್ಕು—ಮನೋರಮೇ, ನಿನ್ನ ಮಾತಿನ ಹೆದರಿಕೆಯನ್ನು ಯಾವನೊಬ್ಬ ಚಿಕ್ಕಬಾಲಕನಿಗೆ ತೋರಿಸಿದ್ದರೆ ಕಿಂಚಿತ್ತಾದರೂ ಫಲಕಾರಿಯಾಗುತಲಿತ್ತು. ನನ್ನಂಥ ನಾಡ ಲಫಂಗನಿಗೆ ಅದರಿಂದೇನು ಪ್ರಯೋಜನ? ಮನೋರಮೇ, ನಿನ್ನ ಈ ಸಂಕಲ್ಪವನ್ನು ಬಿಟ್ಟುಬಿಡು. ನಿನ್ನ ಕೈಗತ್ತಿಗೆ ನಾನು ಆಹುತಿಯಾಗುವದಂತೂ ಒತ್ತಟ್ಟಿಗೇ ಇರಲಿ, ನಿನ್ನಂಥ ಸಾವಿರಾರು ಜನ ಸಾಹಸಿಗಳು ಏಕಸಮಯಾವಚ್ಛೇದದಿಂದ ಪ್ರಯತ್ನಿಸಿದರೂ ನನ್ನ ಒಂದು ಕೂದಲಿಗೆ ಕೂಡ ಧಕ್ಕೆ ಹತ್ತಲಾರದು; ಆದರೆ ನಾನು ಇಚ್ಛಿಸಿದಾಗ ಮಾತ್ರ—ಅದೇಕೆ ಈಗಿಂದೀಗಲೆ ನಿನ್ನನ್ನು ತುಂಡರಿಸಿ ಕೊಲ್ಲಬಹುದಾಗಿದೆ. ಆ ಶಕ್ತಿ-ಸಾಹಸಗಳು ನನ್ನಲ್ಲಿರುವವೋ ಇಲ್ಲವೋ ಎಂಬದರ ಅನುಭವವು ನಿನಗೀ ಮೊದಲು ಹಲವುಸಾರೆ ಬಂದಹ್ದಾಗಿದೆ. ಈ ವಿನಾಯಕನು ನಿನ್ನನ್ನು ಸಮಬಲದ ಶತ್ರುವೆಂದು ತಿಳಿಯುತ್ತಿದ್ದರೆ, ನಿನ್ನಿಂದ ನನಗೇನಾದರೂ ಎಂದಾದರೂ ಅಪಾಯವುಂಟಾದೀತೆಂಬ ಭರವಸೆಯಿದ್ದರೆ ಈ ವರೆಗೆ ನಾನು ನಿನ್ನನ್ನು ಬದುಕಗೊಡುತ್ತಿರಲಿಲ್ಲ. ನನ್ನನ್ನು ಪತ್ತೆಹಚ್ಚುವದಕ್ಕಾಗಿ ಎಷ್ಟು ಜನ ನಿಷ್ಣಾತ ಪತ್ತೆದಾರರು ಅಂತೆಲೆಯುತ್ತಿರುವರೆಂಬದು ನಿನಗರಿಯದ ವಿಷಯವಲ್ಲ. ಅಂಥಂಥವರಿಗೇ ನಾನು ಕೊಂಚವೂ ಹೆದರದಿರುವಾಗ ನಿನ್ನಂತಹ

ಹುಚ್ಚ ಅಬಲೆಗೆ ಅಂಜುವೆನೇ? ಆದುದರಿಂದ ನಿನಗಿನ್ನೊಮ್ಮೆ ಭಯದಿಂದಲ್ಲ, ಪ್ರೇಮದಿಂದ ತಿಳಿಸಿಡುತ್ತೇನೆ; ಮನೋರಮೇ, ಈ ಮೊದಲಿನಂತೆ ಈಗಲೂ ನಾನು ನಿನ್ನನ್ನು ಪ್ರೀತಿಸುತ್ತೇನೆ; ಹಾಗು ಆಗಿನಂತೆಯೇ ಸುಖದಿಂದಿಡಲು ಬಾಧ್ಯನಾಗಿರುತ್ತೇನೆ. ನೀನು ಆಗಿನಂತಹ ಅರಮನೆ ಸದೃಶವಾದ ಮಹಾಲಿನಲ್ಲಿಯೇ ವಾಸಮಾಡಿರು. ದಾಸ-ದಾಸಿಯರಿಂದ ಸೇವೆ ಹೊಂದು; ಮತ್ತು ನೀನು ಏನನ್ನು ಬಯಸುವಿಯೋ ಕೂಡಲೆ ಅದನ್ನೆಲ್ಲ ನಿನ್ನ ಸನ್ನಿಧಿಗೆ ಬರಮಾಡುವೆನು. ಯಾವ ವಿಷಯದಲ್ಲೂ ನಿನಗೆ ಕೊರತೆಯುಂಟಾಗಗೊಡುವದಿಲ್ಲ. ಮನೋರಮೇ, ಹುಚ್ಚಳ ಹಾಗೆ ಹೀಗೆ ರಾತ್ರಿ-ಅಪರಾತ್ರಿಯಲ್ಲಿ ಅಡವಡವಿ ತಿರುಗುವದನ್ನು ಬಿಟ್ಟು ಸುಖದಿಂದಿರು. ಹೀಗೆ ದಾರಿಯ ಭಿಕಾರಿಯಂತೆ ತಿರುಗುವದರಿಂದ ನಿನಗಾವ ಸುಖವಾಗಬೇಕಾಗಿದೆ?

ಮನೋರಮೆಯು ವಿನಾಯಕನ ಮಾತುಗಳನ್ನೆಲ್ಲ ಚಿತ್ತಗೊಟ್ಟು ಕೇಳುತ್ತಿದ್ದಳು. ಆದರಿಂದ ಆವಳ ಸಿಟ್ಟು ಅಂಗಾಲಿನಿಂದ ನಡುನೆತ್ತಿಯವರೆಗೂ ಏರಿತು. ಕಡೆಗೆ ಅವಳಿಂದ ಸಹಿಸಲಾಗದೆ ಸಿಟ್ಟಿನ ಆವೇಶದಿಂದ ಅವಳು—ಅಧಮಾಧಮಾ, ನೀಚಾ, ಪಿಶಾಚಿಯೇ ಮತ್ತೆ ಪ್ರೇಮದ ಹೆಸರನ್ನೆತ್ತುವಿಯಾ? ಇಷ್ಟಾದರೂ ನಿನಗಿನ್ನೂ ತೃಪ್ತಿಯುಂಟಾಗಲಿಲ್ಲವೆ? ಇನ್ನೂ ನಿನ್ನ ಬಯಕೆಯು ಸಂಪೂರ್ಣವಾಗಿ ಈಡೇರಲಿಲ್ಲವೆ? ಯಾವ ಸುಖದ ಆಶೆಗಾಗಿ ನಾನಿನ್ನು ನಿನ್ನಬಳಿಗೆ ಕೃಪಾಭಿಕ್ಷೆಯನ್ನು ಬೇಡಬೇಕು? ನನ್ನನ್ನು ಯಾವ ಗೃಹಿಣೀಪದದಿಂದ ನೀಚನಾದ ನೀನು ಒಮ್ಮೆ ಭ್ರಷ್ಟಗೊಳಿಸಿರುವಿಯೋ, ಆ ಪೂಜ್ಯಪದವು ಜನ್ಮಜನ್ಮಾಂತರದಲ್ಲಿಯೂ ನನಗೆ ದುರ್ಲಭವಾಗಿಬಿಟ್ಟಿತು. ನೀನು ನನ್ನನ್ನು ಯವನಳನ್ನಾಗಮಾಡಬೇಕೆಂದು ಯೋಚಿಸಿ, ಮತ್ತೆ ಹೀಗೆ ಬೆಲ್ಲದಂತಹ ನುಡಿಯನ್ನು ನುಡಿಯುತ್ತಿರುವಿಯೇನು? ಅದೆಂದೂ ಆಗದು. ನೀನು ಈ ವರೆಗೆ ನನಗೆ ಮಾಡಿದ ಸರ್ವನಾಶವು ಸಾಕಾಗಲಿಲ್ಲವೆ? ಧರ್ಮಭ್ರಷ್ಟ,-ಗೃಹಿಣೀಪದಭ್ರಷ್ಟಳಾದ ನನ್ನ ಹಾಡನ್ನು ನಾನು ಕಂಡುಕೊಂಡೆನು; ನೀನೂ ಕಂಡಿರುವೆ; ಲೋಕದ ಪ್ರಾಣಿಗಳೂ ನೋಡುತ್ತಿರುವರು. ಆದರೆ ನಿನ್ನಂತಹ ಸಮಾಜದಲ್ಲಿಯ ಸನ್ಮಾನಿತನು ನನ್ನಂತಹ ಅಪ್ರಬುದ್ಧ ವಿಧವೆಯ ಸರ್ವಸ್ವವನ್ನೂ ಹರಣಮಾಡಿ, ಹಾದಿಯ ಭಿಕ್ಷುಕಿಯನ್ನಾಗ ಮಾಡಿದ ನಿನ್ನ ಘೋರಪಾಪಕ್ಕೆ ಪ್ರಾಯಶ್ಚಿತ್ತವುಂಟೆ? ಎಂದೆಂದಿಗೂ

ಇಲ್ಲ. ನಿನ್ನ ಕೃತಿಗೆ ಅಖಂಡವಾದ ರೌರವ ನರಕವಾಸವೇ ಯೋಗ್ಯ ಪ್ರತಿಫಲವು. ಹತ್ತು ವರುಷಗಳ ಹಿಂದೆ, ಯಾವಾಗ ನಾನು ಹದಿನೆಂಟು ವರುಷದ ತರುಣಿಯಾಗಿದ್ದೆನೋ ಆಗ ನೀನು ನನ್ನಲ್ಲಿ ನಾನಾವಿಧದ ಪ್ರಲೋಭ ವನ್ನು ಬೀರಿ, ನನ್ನನ್ನು ನನ್ನ ಬಾಲವಿಧವಾ ಪದದಿಂದ ಚ್ಯುತಿಗೊಳಿಸಿದೆ. ನನ್ನ ವಿವಾಹವು ತೀರ ಬಾಲ್ಯದಲ್ಲಿ ಅಂದರೆ 4-5 ವರ್ಷದ ವಯಸ್ಸಿನಲ್ಲೇ ಆಗಿ, ನನ್ನ ಪತಿಯು ವಿವಾಹದನಂತರ ಹದಿನೈದು ದಿವಸಗಳಲ್ಲೇ ಗತಿಸಿ ಬಿಟ್ಟಿದ್ದನು. ಆದರಿಂದ ನನಗೆ ಲಗ್ನವೆಂದರೇನು? ಗಂಡನೆಂದರೇನು? ಹೆಂಡತಿಯೆಂದರೇನು? ಅಕೆಯ ಧರ್ಮ-ಕರ್ಮಗಳೆಂದರೇನು? ಮುಂತಾದ ಯಾವ ಕಲ್ಪನೆಯೂ ಇರಲಿಲ್ಲ. ನಾನು ನನ್ನ ಗಂಡನನ್ನು ಚಿಕ್ಕಂದ ನಲ್ಲಿಯೇ ಕಳಕೊಂಡದುದರಿಂದ ನನ್ನ ಪಾಲನ-ಪೋಷಣದ ಭಾರವು ನನಗೆ ಬಾದರಾಯಣದ ಸಂಬಂಧಿಕನೊಬ್ಬನ ಮೇಲೆ ಬಿದ್ದಿತ್ತು. ಆ ಮನೆ ಯವರು ನನ್ನಕಡೆಗೆ ಹೆಚ್ಚು ಲಕ್ಷ್ಯಗೊಡದ್ದರಿಂದಲೂ, ನಿನ್ನಂತಹ ನೀಚನು ನನ್ನ ಕಣ್ಣಿಗೆ ಕಾಮಸದೃಶನಾಗಿ ತೋರಿದ್ದರಿಂದಲೂ ನನ್ನ ಪದಭ್ರಷ್ಟತೆಗೆ ಕೊಂಚವೂ ಅವಕಾಶವುಂಟಾಗಲಿಲ್ಲ. ನಾನು ನನ್ನ ಧರ್ಮ, ಜಾತಿ, ಶೀಲಗಳನ್ನೊಂದೂ ಯೋಚಿಸದೆ, ಹೆಣ್ಣುನಾಯಿಯಂತೆ ನಿನ್ನ ಬೆನ್ನು ಹತ್ತಿ ಬಂದೆನು.

ನಿನ್ನೊಡನೆ ಬರುವಾಗ ನಾನು ನನ್ನ ದೇಹವನ್ನಷ್ಟೇ ತರದೆ, ನನ್ನ ಪಿತೃಸ್ವಾಮಿತ್ವದ ೧೧-೮ ಸಾವಿರ ರೂಪಾಯಿ ಬೆಲೆಯ ವಸ್ತ್ರ-ಒಡವೆಗ ಳನ್ನೂ ತಂದು ನಿನ್ನ ಹೆಣಕ್ಕೆ ಬಡಿದೆನು. ನೀನು ಆ ಒಡವೆಗಳನ್ನೆಲ್ಲ ಒಂದೊಂದೇ ಎಂದು ಒಂದೆರಡು ವರುಷಗಳಲ್ಲಿ ಗೊತ್ತುಹಚ್ಚಿಬಿಟ್ಟೆ; ಹಾಗು ನಾನು ನಿರ್ಧನಳಾಗಲು ನಿನ್ನ ಮನೆಯಿಂದ ಒದೆದು ಹೊರಗಟ್ಟಿದೆ! ಇಂಥ ಅರ್ಥ ಪಿಶಾಚಿಯು ನೀನು. ಬಳಿಕ ಧನಲೋಭಕ್ಕಾಗಿ ನೀನು ಮುಸಲ್ಮಾ ನನಾಗಿ, ಒಬ್ಬ ಮುಸಲ್ಮಾನ ರಮಣಿಯನ್ನು ಲಗ್ನವಾದೆ. ನನ್ನನ್ನು ಯಾವ ದಾರಿಗೆ ಹಚ್ಚಿದೆಯೋ, ಕೆಲ ದಿನಗಳಲ್ಲಿ ಅವಳಿಗೂ ಅದೇ ದಾರಿ ತೋರಿಸಿಬಿಟ್ಟೆ. ವಿನಾಯಕಾ, ನಾನು ಪಾಪಿನಿಯು; ನನ್ನ ಪಾಪದ ಫಲಭೋಗವನ್ನು ಇಹ ಜನ್ಮದಲ್ಲೇ ಭೋಗಿಸಿ ತೀರಿಸುವೆನು. ಅದಕ್ಕಾ ಗಿಯೇ ನಾನಿನ್ನೂ ಸತ್ತು ಬದುಕಿರುವದು; ಆದರೆ ನಿನ್ನ ಮಾತು ಹಾಗಲ್ಲ. ಈಗೆಂಟು ವರುಷಗಳಿಂದ, ಈ ಪ್ರಾಂತದಲ್ಲಿ ನಿನ್ನನ್ನಾರೂ ನೋಡಿರಲಿಲ್ಲ.

ನಿನ್ನನ್ನು ಪತ್ತೆಹಚ್ಚುವದಕ್ಕಾಗಿ ನಾನು ಬಹಳವಾಗಿ ಪ್ರಯತ್ನಿಸಿದೆನು. ಈ ವರೆಗೆ ನಿನ್ನ ಸುಳಿವೇ ಹತ್ತಿರಲಿಲ್ಲ. ನಿನ್ನನ್ನು ಕೆಲದಿನಗಳ ಹಿಂದೆ ಪುನಃ ನೋಡಿದಾಗ ನೀನೊಂದು ಹೊಸ ಹಕ್ಕಿಯನ್ನು ಹಿಡಕೊಂಡು ಬಂದಿರುವದಾಗಿ ತಿಳಿಯಿತು. ನಿನ್ನ ಈಗಿನ ಹೆಂಡತಿಯು ನಿನಗೆ ತಕ್ಕವಳೇ ಆಗಿರುತ್ತಾಳೆಂಬದರಲ್ಲಿ ಸಂದೇಹವಿಲ್ಲ. ನಿನಗೆ ಅವಳಿಂದಲೂ, ಅವಳಿಗೆ ನಿನ್ನಿಂದಲೂ ಚೆನ್ನಾಗಿ ಸುಖವಾಗಬಹುದಲ್ಲವೇ? ಆದರೆ ವಿನಾಯಕಾ, ನಿನ್ನ ಈ ಸುಖದ ದಿನಗಳು ಇನ್ನು ಹೆಚ್ಚಾಗಿ ಉಳಿಯುವದಿಲ್ಲ. ಈ ನನ್ನ ಕೈಗತ್ತಿಯಿಂದ ಸಾಧಿಸಿದರೆ ನಿಮ್ಮಿಬ್ಬರನ್ನೂ, ಅದಾಗದಿದ್ದರೆ ನಿನ್ನೊಬ್ಬನನ್ನಾದರೂ ಕೊಂದು ನಿನ್ನ ಸೇಡುತೀರಿಸಿಕೊಳ್ಳದೆ ಬಿಡಲಾರೆನು. ಒಲಿದರೆ ನಾರಿಯು, ಮುನಿದರೆ ಮಾರಿಯು. ನಾರಿಯು ಒಮ್ಮೆ ಪದಭ್ರಷ್ಟಳಾದಳೆಂದರೆ ಅವಳಿಗೆ ಅಸಾಧ್ಯವಾದುದೂ ಉಳಿಯುವದಿಲ್ಲೆಂಬ ಮಾತಿನ ಅನುಭವವನ್ನು ನಿನಗೆ ತಂದುಕೊಟ್ಟೇತೀರುವೆನು, ಎಂದು ಅರ್ಭಟಿಸುತ್ತ, ಆ ನದಿಯ ತೀರದಲ್ಲಿ ಕುಳಿತಿದ್ದ ವ್ಯಕ್ತಿಯು ಕಡೆಗೆ ಕೆಂಗಣ್ಣಿನಿಂದ ನೋಡುತ್ತ ಅಲ್ಲಿಂದ ಹೊರಟು ಹೋದಳು.

ಮನೋರಮೆಯು ಹಿಂದಿರುಗಿದ ಮೇಲೆ ವಿನಾಯಕನು ಒಂದೆಂದರೆ ಒಂದೇಸಾರೆ ಅವಳ ಕಡೆಗೆ ಹೊರಳಿ ನೋಡಿ, ಒಮ್ಮೆ ಮೆಲ್ಲಗೆ ಉಸುರ್ಗರೆದು ಘೋರವಾದ ಚಿಂತೆಗೊಳಗಾದನು.

---

## ೩ ನಿಮ್ಮ ಗುರುತಿನ ಕೊಲೆಗಾರ.

ನಾವು ಯಾವ ಕಾಲದ ಕಥೆಯನ್ನು ಹೇಳತೊಡಗಿರುವೆವೋ, ಆಗ ಕರ್ನಾಟಕ ಪ್ರಾಂತದ ಸಮುದ್ರ ತಟಾಕದ ಒಂದು ಚಿಕ್ಕ ಹಳ್ಳಿ “ವಸಂತ” ಎಂಬ ಅಡ್ಡಹೆಸರಿನ ಒಬ್ಬ ಸುಪ್ರಸಿದ್ಧ ಪತ್ತೇದಾರನು ಸಿದ್ಧದೇವಪುರದಲ್ಲಿ ವಾಸಿಸುತ್ತಿದ್ದನು. ಆತನ ವಿಲಕ್ಷಣ ಪತ್ತೇದಾರಿಕೆ, ಸುಸ್ಪಷ್ಟ ಭಾಷಣ, ವೇಷಪರಿವರ್ತನ, ನಾನಾ ಭಾಷೆಗಳ ಜ್ಞಾನ, ಪ್ರತಿ ಮನುಷ್ಯನಲ್ಲಿಯ ತಾರತಮ್ಯಭಾವಾವಲೋಕನ, ಶೌರ್ಯ, ಸಾಹಸ, ಸತ್ಯಪ್ರಿಯತೆ ಮೊದ

ಲಾದ ಸದ್ಗುಣಗಳನ್ನು ಆ ಪ್ರಾಂತದ ಜನರೆಲ್ಲರೂ ಹಾಡಿಹರಿಸುತ್ತಿದ್ದರಷ್ಟೇ ಅಲ್ಲ, ಅವನ ಚಿರಶತ್ರುಗಳಾದ ಕಳ್ಳರು, ದರವಡೆಗಾರರು, ದಾರಿಬಡಿಯುವವರು, ಕೊಲೆಗಾರರೇ ಮುಂತಾದ ಸಮಸ್ತ ಜನರೂ ನಿರ್ವ್ಯಾಜ್ಯದಿಂದ ಶ್ಲಾಘಿಸುತ್ತಿದ್ದರು. ಪತ್ತೇದಾರಿಯ ಉದ್ಯೋಗವನ್ನೇ ಮಾಡಿ ಮಧ್ಯಾಹ್ನ ಸಾಗಿಸಬೇಕೆಂಬ ಕನಿಷ್ಠವೃತ್ತಿಯ ಪ್ರಾಣಿಯು ಅವನಾಗಿರಲಿಲ್ಲ. ಆ ತಾಲೂಕಿನ ಎಷ್ಟೋ ವಾಳ್ಯ(ಹಳಿ)ಗಳಲ್ಲಿ ಹೆಚ್ಚು ಕಡಿಮೆಯಾಗಿ ಅವನ ಸ್ವತ್ತಿನ ಭತ್ತದ ಗದ್ದೆಗಳೂ, ಮೆಣಸು-ಅಡಕೆ-ಯಾಲಕ್ಕಿ ಬೆಳೆಯುವ ತೋಟಗಳೂ ಇದ್ದದರಿಂದ, ಖರ್ಚುಕಂದಾಯ ಕಳೆದು ವರ್ಷಕ್ಕೆ ಏನಿಲ್ಲೆಂದರೂ ಅವನಿಗೆ ಹತ್ತೆಂಟು ಸಾವಿರ ರೂಪಾಯಿಗಳ ಸ್ವಾಸ್ತಿಯಿದ್ದಿತು. ಮನೆಯಲ್ಲಿ ಖರ್ಚೂ ವಿಶೇಷವಾಗಿರಲಿಲ್ಲ; ಪಂತ, ಪಂತನ ಹೆಂಡತಿ, ದೂರಿನ ಆಪ್ತರ ಒಂದೆರಡು ಚಿಕ್ಕಮಕ್ಕಳು ಇಷ್ಟೇ ಜನರಿದ್ದರು. ಪಂತನು ಈಗ ೫೦ ವಯಸ್ಸಿನವನಾಗಿದ್ದರೂ ಅವನಿಗೆ ಸಂತತಿಯುಂಟಾಗಿರಲಿಲ್ಲ. ಹೆಂಡತಿಯಾದರೂ ಪಂತನಿಗಿಂತ ನಾಲ್ಕೇ ವರ್ಷಕ್ಕೆ ಚಿಕ್ಕವಳು. ಇಷ್ಟು ವಯಸ್ಸಿನ ವರೆಗೆ ತಮಗೆ ಸಂತತಿಯಾಗಿರದಿದ್ದರೂ, ಆ ದಂಪತಿಗಳಿಗೆ ಆ ಬಗ್ಗೆ ವಿಶೇಷ ದುಃಖವೆನಿಸುತ್ತಿರಲಿಲ್ಲ.

ಒಂದು ದಿನ ಪಂತನು ಬೆಳಿಗ್ಗೆ ತನ್ನ ಮನೆಯ ಮುಂದಿನ ಉದ್ಯಾನದಲ್ಲಿ ಯಾವುದೊಂದು ಹೂಗಿಡದ ಬಳಿಯಲ್ಲಿ ಕುಳಿತು ಅದಕ್ಕೆ ಕಲಮು ಕಟ್ಟುತ್ತಿರಲು, ಸಿದ್ಧದೇವಪುರತಾಲೂಕ ಜೇಲರನ ಪತ್ರವನ್ನು ತಂದಂಥ ಒಬ್ಬ ಶಿಪಾಯಿಯು ಆ ಪುಷ್ಪವಾಟಿಕೆಯ ಬಾಗಿಲಲ್ಲಿ ನಿಂತು ಗಟ್ಟದನಿಯಿಂದ, ಆದರೆ ಸೌಮ್ಯವಾಗಿ—ಧಣಿಯರೇ, ಇಗೊಳ್ಳಿರಿ ಈ ಪತ್ರವನ್ನು, ರಾಯರು ಕೊಟ್ಟಿರುವರು; ಮತ್ತು ಈಗಲೇ ತಾಲೂಕ ಕಚೇರಿಗೆ ಬರಬೇಕೆಂದು ಬಾಯಿಮಾತಿನಿಂದ ತಮಗೆ ತಿಳಿಸ ಹೇಳಿರುವರು, ಎಂದಂದು ಒಂದು ಪತ್ರವನ್ನು ಪಂತನ ಎದುರಿಗೆ ಇಟ್ಟನು.

ಪಂತನು ತನ್ನ ಸ್ವಭಾವಧರ್ಮದಂತೆ ಒಮ್ಮೆ ಆ ಪತ್ರತಂದವನ ಮುಖದ ಕಡೆಗೆ ನಿರೀಕ್ಷಿಸಿದನುಮಾತ್ರ. ಅಷ್ಟರಿಂದಲೇ ಈ ಪತ್ರದಲ್ಲಿ ಒಳ್ಳೇ ಜರೂರಿಯ ಕರೆಯಿರುವದೆಂದು ಬಗೆದು, ಅವನು ಆ ಪತ್ರದ ಹೊದಿಕೆಯನ್ನು ತೆಗೆದು ಒಳಗಿನ ಸಂಗತಿಯನ್ನು ಓದತೊಡಗಿದನು:—

"ತಾಲೂಕಾ ಜೇಲ ಆಫೀಸ, ಸಿದ್ಧದೇವಪುರ,

ಪ್ರಿಯ ಪಂತ ಮಹಾಶಯರಿಗೆ—

ಈ ಪತ್ರಮೂಲಕ ತಮಗೆ ಅರಿಕೆ ಮಾಡಿಕೊಳ್ಳುವದೇನಂದರೆ, ಈ ಪತ್ರವು ತಮ್ಮ ಹಸ್ತಗತವಾದೊಡನೆಯೇ ತಾವು ಇಲ್ಲಿಗೆ ಬರಬೇಕು; ಕೊಂಚ ವಿಲಂಬವೂ ಕೆಲಸದ್ದಲ್ಲ. ಸಮಕ್ಷಮ ಸಕಲವೂ ವೇದ್ಯವಾಗುವದು. ಇತಿ— ತಮ್ಮ ಪ್ರೀತಿಪಾತ್ರನಾದ,

ಭುಜಂಗರಾಯ ಜೇಲರ"

ಪಂತನು ಪತ್ರ ತಂದವನಿಗೆ ಬಂದೆನು ನಡೆ, ಎಂದಿಷ್ಟೇಹೇಳಿ, ಅವನನ್ನು ಸಾಗಹಚ್ಚಿ, ಕ್ಷಣಕಾಲ ತನ್ನಷ್ಟಕ್ಕೆ ತಾನೇ ಏನೇನೋ ಆಲೋಚಿಸಿದನು. ನಂತರ ಮನೆಯೊಳಕ್ಕೆ ಹೋಗಿ ಪೋಷಾಕು ಧರಿಸಿ, ಬಂದಿಶಾಲೆಗೆ ನಡೆದನು.

ಸಿದ್ಧದೇವಪುರ ತಾಲೂಕ-ಜೇಲು ಪಂತನ ಬಿಡಾರದಿಂದ ಬಹಳ ದೂರದಲ್ಲಿರಲಿಲ್ಲ. ಆದರಿಂದ ಅವನು ತೀವ್ರವೇ ಅಲ್ಲಿಗೆ ಹೋದನು. ಅಲ್ಲಿ ಭುಜಂಗರಾವ ಜೇಲರನು ಪಂತನ ದಾರಿಕಾಯುತ್ತ ನಿಂತೇ ಇದ್ದನು. ಇವನು ಬಂದೊಡನೆ ಇವನನ್ನು ಒಂದು ಬೀಗಹಾಕಿದ ಕೋಣೆಯ ಕಡೆಗೆ ಕರೆದೊಯ್ದು, ಆ ಕೋಣೆಯ ಬೀಗತೆಗೆದು ಇಬ್ಬರೂ ಒಳಹೊಕ್ಕರು. ಕೂಡಲೆ ಜೇಲರನು ಒಳಗಿನಿಂದ ಬಾಗಿಲವನ್ನಿಕ್ಕಿ ಭದ್ರಪಡಿಸಿದನು. ಆ ಕೋಣೆಯ ಒಂದು ಮೂಲೆಯಲ್ಲಿ ಒಂದು ಹೊಸ ಸಂದುಕವಿದ್ದಿತು. ಅಲ್ಲಿ ಕುರ್ಚೆ, ಬಾಕು ಮುಂತಾದ ಕೂಡ್ರುವ ಸಾಧನಗಳೊಂದೂ ಇರದ್ದರಿಂದ, ಪಂತನು ಆ ಝುಗಝುಗಿಸುವ ಹೊಸ ಸಂದುಕದ ಮೇಲೆಯೇ ಕೂಡ್ರಹೋದನು; ಆದರೆ ಜೇಲರನು ಅವನನ್ನು ಅದರ ಮೇಲೆ ಕೂಡ್ರಗೊಡದೆ ಆ ಸಂದುಕದ ಬೀಗತೆಗೆದು ಬಾಗಿಲವನ್ನು ತೆರೆದು ಅದರೊಳಗಿನ ದೃಶ್ಯವನ್ನು ಪಂತನಿಗೆ ತೋರಿಸಿದನು. ಅದರೊಳಗಿನ ಆ ಭಯಾನಕ ದೃಶ್ಯವನ್ನು ಕಂಡು ಪಂತನು ಗದಗದ ನಡುಗಿದನು. ಆತನ ಭಯಚಕಿತ ದೃಷ್ಟಿಯು ಎಷ್ಟೋ ಹೊತ್ತಿನ ವರೆಗೆ ಆ ಸಂದುಕದೊಳಗಿನ ಭಯಾನಕ ದೃಶ್ಯವನ್ನು ಪುನಃ ಪುನಃ ನಿರೀಕ್ಷಿಸುವದರಲ್ಲಿಯೇ ಲೀನವಾಗಿತ್ತು. ಕಟ್ಟಕಡೆಗೆ ಒಂದು ದೀರ್ಘವಾದ ನಿಟ್ಟುಸಿರುಗರೆದು, ಅವನು ಕ್ಷಣಕಾಲ ಚೇತನಾವಿಹೀನವಾದ ಕಲ್ಲಗೊಂಬೆಯಂತೆ ಸುಮ್ಮನೆ ನಿಂತುಬಿಟ್ಟನು.

ಪಂತನು ಆ ಸಂದುಕದಲ್ಲಿ ಕಂಡದ್ದೇನಂದರೆ:— ೧೨ಕ್ಕೆ ಕಡಿಮೆಯಿಲ್ಲ ೧೪ಕ್ಕೆ ಹೆಚ್ಚಿಲ್ಲದ ವಯಸ್ಸಿನ ಒಬ್ಬ ಸುಂದರ ಬಾಲಿಕೆಯ ಮೃತದೇಹವು ಅದರಲ್ಲಿ ಇದ್ದಿತು ಆ ದೇಹದ ಪ್ರತಿಯೊಂದು ಅವಯುವದ ಮೇಲೂ ಹತ್ತಿಪ್ಪತ್ತು ಕಡೆಗೆ ಶಸ್ತ್ರಾಘಾತ ಮಾಡಲ್ಪಟ್ಟದ್ದರಿಂದ ಅದೊಳ್ಳೇ ಭಯಾನಕವಾಗಿ ತೋರುತಲಿತ್ತು. ಅದರಿಂದ ಎಷ್ಟೋ ಕಡೆಯ ಎಲವುಗಳು ಕೂಡ ಹೊರಬಿದ್ದಿದ್ದವು! ಇಷ್ಟಲ್ಲದೆ ಅವಳ ಬಲಗೈಯೊಂದು ಸಮೂಲವಾಗಿ ಛೇದಿಸಲ್ಪಟ್ಟದ್ದು, ಆ ಭಾಗವು ಆ ಸಂದುಕದಲ್ಲಿಲ್ಲೂ ಕಂಡು ಬರುತ್ತಿರಲಿಲ್ಲ. ಇವಳನ್ನು ಈ ಪರಿಯಾಗಿ ಯಾರು ಕೊಂದಿರಬಹುದೆಂಬ ವಿಚಾರವು ಮನಸ್ಸಿನಲ್ಲಿ ಬರಲು, ಆ ಕೊಲೆಗಾರನ ಹೃದಯದ ಮಹಿಮಯ ಭೀಷಣತೆಯಿಂದ ಯೋಚಕರ ಹೃತ್ಪಿಂಡವು ನಡುಗಿಹೋಗುತ್ತಿತ್ತು!

ಕೆಲಕ್ಷಣಗಳ ತರುವಾಯ ಪಂತನು ಆ ಸಂದುಕದೊಳಗಿನ ಆ ಮೃತದೇಹವನ್ನು ಹೊರಗೆ ತೆಗೆದನು. ಪಕ್ಕದ ವಿಶಾಲವಾದ ಕಿಟಕಿಯೊಳಗಿಂದ ಬರುತ್ತಿರುವ ರವಿಕಿರಣಗಳು ಆ ರಕ್ತಮಯ ದೇಹದ ಮೇಲೆ ಬೀಳಲು, ಅದು ಮತ್ತಿಷ್ಟು ಭೀಕರವಾಗಿ ಕಾಣಲಾರಂಭಿಸಿತು. ಕೆಲನಿಮಿಷಗಳ ವರೆಗೆ ಪಂತನು ಆ ಶರೀರದ ಕಡೆಗೆ ದಿಟ್ಟಿಸಿನೋಡಿ ನಂತರ ಜೇಲರನನ್ನು ಕುರಿತು:— ಭುಜಂಗರಾಯರೇ, ಇದರ ಸಂಗತಿಯೇನು? ಎಂದು ಪ್ರಶ್ನೆಮಾಡಿದನು.

"ನಾನೇನು ಹೇಳಲಿ? ಈಗ ಇದು ತಮ್ಮ ಕಣ್ಣಿಗೆ ಹೇಗೆ ಬಿದ್ದಿರುವದೋ ಅದೇ ಸ್ಥಿತಿಯಲ್ಲಿ ನಾನೂ ಇದನ್ನು ಕಂಡಿರುವೆನು. ಇದು ಹೀಗೇಕಾಗಿರುವದೆಂಬದನ್ನು ತಿಳಿಯುವ ಸಲುವಾಗಿಯೇ ನಾನು ನಿಮ್ಮನ್ನಿಲ್ಲಿಗೆ ಕರೆಸಿರುವೆನು?" ಎಂಬ ಜೇಲರನ ಮಾತಿಗೆ ಪಂತನು ಮುಗುಳು ನಗೆಯಿಂದ:— ಕೊನೆಗೆ ನನ್ನಿಂದಲೇ ನಿಮಗೆ ಇದರ ನಿಜಸಂಗತಿಯು ತಿಳಿದೀತು. ಅದಿರಲಿ. ಈ ಕೊಲೆಯನ್ನು ಮಾಡಿದವರಾರು?

ಜೇಲರ:— ಅದೇ ಮುಖ್ಯ ವಿಷಯ. ಅದು ತಿಳಿದಿದ್ದರೆ ನಿಮ್ಮನ್ನು ಇಷ್ಟು ಅವಸರದಿಂದ ಕರೆಯಿಸುತ್ತಿದ್ದನೆಲ್ಲಿ? ಅದನ್ನು ಗೊತ್ತುಹಚ್ಚುವದಕ್ಕಾಗಿಯೇ ನಿಮ್ಮ ಸಹಾಯುವನ್ನಪೇಕ್ಷಿಸುವೆನು.

ಪಂತ:—ಹಾಗೆಯೇ ಆಗಲಿ; ಆದರೆ ನೀವು ಈ ಶವವನ್ನೆಲ್ಲಿ ಕಂಡಿರಿ?

ಜೇಲರ:—ನಾನು ಇದನ್ನು ಇಲ್ಲಿಯೇ-ಈ ಕಾರಾಗೃಹದಲ್ಲಿಯೇ-ಈಗಿದ್ದ ಸ್ಥಿತಿಯಲ್ಲೇ ಕಂಡೆನು ಅದು ಹೇಗೆಂದರೆ,—ನಿನ್ನೆ ರಾತ್ರಿಯ

೩ನೇ ಪ್ರಹರದಲ್ಲಿ ಒಬ್ಬ ಪರದೇಶಿಯು ಈ ಹೊಸಸಂದುಕವನ್ನು ಹೊತ್ತು ಕೊಂಡು ನಮ್ಮ ಈ ಠೇಲಿನ ಮುಂದೆ ಬಂದನು. ಇಂಥ ಅಪರಾತ್ರಿಯಲ್ಲಿ ಇಷ್ಟು ದೊಡ್ಡ ಹಾಗು ಹೊಸ ಸಂದುಕವನ್ನು ಹೊತ್ತುಕೊಂಡು ಹೋಗುತ್ತಿರುವದನ್ನು ಕಂಡು ನಮ್ಮ ಪಹರೆಯುವನು ನನಗೀಸಂಗತಿಯನ್ನು ತಿಳಿಸಿದನು. ಕೂಡಲೆ ನಾನು ಅವನನ್ನು ಹಿಡತರಿಸಿದೆನು. ಬಳಿಕ ನಾನು ಆ ತಲೆಹೊರೆಯುವನಿಗೆ— ಈ ಸಂದುಕವು ಯಾರದು? ಇದರ ಬೀಗದ ಕೈ ನಿನ್ನ ಬಳಿಯಲ್ಲಿದೆಯೋ ಇಲ್ಲವೊ ಮುಂತಾದುದನ್ನು ವಿಚಾರಿಸಿದೆನು. "ಈ ಸಂದುಕವು ನನ್ನದೇ ಎಂದೂ ಇದರ ಕೀಲೀಕೈ ಮಾತ್ರ ಈಗ ಬರುವಾಗ ದಾರಿಯಲ್ಲಿ ಕಳೆದುಹೋಯಿತೆಂದೂ" ಅವನು ತಿಳಿಸಿದನು. ಅವನು ಕಳ್ಳನೆಂದು ತಿಳಿದು ಅವನ ತಲೆಯ ಮೇಲಿನ ಆ ಸಂದುಕವನ್ನು ಇಲ್ಲಿ ಇಳಿಸಿಟ್ಟೆನಲ್ಲದೆ, ಅವನನ್ನು ಪಹರೆಯುವನ ಸ್ವಾದೀನ ಪಡಿಸಿದೆನು. ಆಗ ಆ ಪ್ರಾಣಿಯು ಅಂದದ್ದೇನಂದರೆ——ನಾನು ಇದನ್ನು ನನ್ನ ಒಡೆಯನ ಅಪ್ಪಣೆಯ ಪ್ರಕಾರ ಪಂತರ ಕಡೆಗೆ ಒಯ್ಯುತ್ತಿರುವೆನು, ಎಂದನು.

ಹಾಗಾದರೆ ನಿನಗೆ ಇದನ್ನು ಕೊಟ್ಟವರಾರು? ಇದರಲ್ಲೇನಿದೆ? ಮುಂತಾದ ಹಲವು ಪ್ರಶ್ನೆಗಳನ್ನು ಆ ತಲೆಹೊರೆಯುವನಿಗೆ ಮಾಡಿದೆನು. ಅವುಗಳಿಗೊಂದೂ ಉತ್ತರವು ಅವನಿಂದ ಬರಲಿಲ್ಲ. ಆ ಮನುಷ್ಯನ ಮುಖಚರ್ಯೆಯನ್ನು ನೋಡಿ ನನಗೆ ಬಹು ಸಂದೇಹವುಂಟಾಯಿತು; ಅದರಿಂದ ನಾನು ಅವನನ್ನು ಆಗಲೆ ತಮ್ಮಕಡೆಗೆ ಕಳುಹದೆ ಇಲ್ಲಿಯೇ ಪಹರೆಯಲ್ಲಿ ಇರಿಸಿದ್ದೆನು. ಆದರೂ ಅವನು ತಮ್ಮ ಕಡೆಗೆ ಬರುವ ಮನುಷ್ಯನಾದುದರಿಂದ ಅವನ ಮೇಲೆ ನಾನಾಗಲಿ, ನನ್ನ ಹಸ್ತಕರಾಗಲಿ ಅಷ್ಟೊಂದು ಕಟಾಕ್ಷವನ್ನಿಟ್ಟಿರಲಿಲ್ಲ. ಕೇವಲ ಆತನ ತಲೆಯಮೇಲಿನ ಈ ಪೆಟ್ಟಿಗೆಯನ್ನಷ್ಟು ಇಲ್ಲಿ ಇರಿಸಿಕೊಂಡು, ಹೊರಗಿನ ವ್ಹರಾಂಡದಲ್ಲಿ ಅವನಿಗೆ ಕೂಡ್ರ ಹೇಳಿದ್ದೆವು. ಬೆಳಗಿನಝಾವದಲ್ಲಿ ಎದ್ದು ನೋಡುತ್ತೇವೆ, ಆ ಮನುಷ್ಯನು ಅಲ್ಲಿ ಇರಲಿಲ್ಲ. ಠೇಲಿನಲ್ಲೆಲ್ಲ ಹುಡುಕಿದೆವು ಎಲ್ಲಿಯೂ ಆತನ ಸುಳುವು ಹತ್ತಲಿಲ್ಲ. ಮನುಷ್ಯನು ಹೋದರೆ ಹೋಗಲಿ, ಈ ಸಂದುಕವನ್ನಾದರೂ ತಮ್ಮ ಬಿಡಾರಕ್ಕೆ ಕಳಿಸಬೇಕೆಂದು ಒಬ್ಬ ಆಳಿನ ತಲೆಯಮೇಲೆ ಹೊರಿಸಹೊಟ್ಟಲು ಇದರ ಕೆಳಭಾಗವೆಲ್ಲ ರಕ್ತಮಯವಾದದ್ದು ಕಂಡುಬಂದಿತು. ಕೂಡಲೆ ನಾವು ಅತ್ತಕಡೆಗೆ ಚೆನ್ನಾಗಿ ದಿಟ್ಟಿಸಿ ನೋಡಲು ಅಲ್ಲಿಯೇ ಒತ್ತ

ಟ್ಟಿಗೆ ಈ ಸಂದುಕದ ಬೀಗದಕೈಯು ದಾರದಿಂದ ಕಟ್ಟಲ್ಪಟ್ಟಿತ್ತು. ಆ ಕೂಡಲೆ ನಾವು ಇದರ ಬೀಗತೆಗೆದು ನೋಡಿ ದಂಗುಬಟ್ಟೆವು.

ಪಂತನು ಭುಜಂಗರಾಯುನನ್ನು ಮತ್ತೆ ಮಾತಾಡಗೊಡದೆ:—ಯಾವನಿಂದ ನೀವು ಈ ಸಂದುಕವನ್ನು ಪಡೆದಿರೋ ಅವನ ಮುಖಲಕ್ಷಣವು ಹೇಗಿತ್ತು? ವಯಸ್ಸೆಷ್ಟಿರಬಹುದು? ಶರೀರವು ಹೇಗಿತ್ತು? ಮುಂತಾದುದನ್ನು ಮೊದಲು ನನಗೆ ಹೇಳಿರಿ, ಎಂದನು.

ಅದಕ್ಕೆ ಜೇಲರನು:—ಆ ಮನುಷ್ಯನು ಸರಾಸರಿ 35 ವರ್ಷದವನಾಗಬಹುದು. ಅವನ ದೇಹವು ಪುಷ್ಟವೂ, ಅತಿ ಕಪ್ಪುಬಣ್ಣದ್ದೂ ಆಗಿತ್ತು. ಮುಖವು ಮಹಾ ಭಯಾನಕವು; ಸರಾಸರಿ 6 ಫೂಟ ಎತ್ತರ ಇರಬಹುದು. ಆ ಅಪರಾತ್ರಿಯಲ್ಲಿ ಅವನನ್ನು ಮನುಷ್ಯನೆಂದು ನಾವು ಮೊದಲು ತಿಳಿದಿದ್ದೇ ಇಲ್ಲ. ಅವನ ಮೂಗು ಬಲು ಅಗಲ, ಕಣ್ಣುಗುಲಗಂಜಿಯಂತೆ ತೀರ ಚಿಕ್ಕವು. ಎರಡೂ ತುಟಿಗಳು ಬಹು ಉದ್ದವಾಗಿದ್ದುದರಿಂದ ಅವುಗಳ ಮುಂಭಾಗಗಳು ಒಣಗಿದ ಎಲೆಗಳಂತೆ ತಿರುಗಿ ಮುಡಚಿದ್ದವು.

ಜೇಲರನು ಮೇಲೆ ಹೇಳಿದಂತೆ ಆ ಸಂದುಕ ತಂದವನ ವರ್ಣನೆ ಮಾಡುತ್ತಿರುವದನ್ನು ಪಂತನು ಕಿವಿಯಿಂದ ಕೇಳಿಕೊಳ್ಳುತ್ತಿದ್ದರೂ, ಅತ್ತ ಕಡೆಗೆ ಹೆಚ್ಚಾಗಿ ಲಕ್ಷ್ಯಗೊಡದವನಂತೆ ಅವನು ಆ ಮೃತಬಾಲಿಕೆಯ ಮುಖವನ್ನು ದಿಟ್ಟಿಸಿ ನೋಡುವದರಲ್ಲಿ ತಲ್ಲೀನನಾಗಿದ್ದನು.

ಹೀಗೆ ಪಂತನೂ ಜೇಲರನೂ ಆ ಕಾರಾಗೃಹದ ಒಂದು ಕೋಣೆಯಲ್ಲಿ ನಿಂತು ಆ ಬಾಲಿಕೆಯ ಮೃತದೇಹವನ್ನು ನಿರೀಕ್ಷಿಸುತ್ತ ಮಾತನಾಡುತ್ತಿರುವಾಗ, ಒಬ್ಬ ಪಹರೆಯುವನು ಹೊರಗಿನಿಂದ ಆ ಕೋಣೆಯ ಬಾಗಿಲುತಟ್ಟಿ ಜೇಲರನನ್ನು ಕೂಗಿದನು. ಕೂಡಲೆ ಭುಜಂಗರಾಯನು ಬಾಗಿಲ ತೆರೆಯಲು, ಆ ಪಹರೆಯುವನು ಅವನ ಕೈಗೊಂದು ಪತ್ರವನ್ನು ಕೊಟ್ಟನು. ರಾಯನು ಅದನ್ನು ಓದಿನೋಡಿ ಪಂತನ ಕಡೆಗೆ ಕೊಟ್ಟು:—ಪಂತರೇ, ನೋಡಿರಿ. ಈ ಕೊಲೆಯ ಗೂಢವು ಮತ್ತೂ ಹೆಚ್ಚುತ್ತ ನಡೆದಿದೆ ನೋಡಿರಿ. ಕೊಲೆಗಾರನು ಯಾವನೇ ಇರಲಿ, ಅವನು ಸರ್ವಸಾಮಾನ್ಯ ಪ್ರಾಣಿಯಾಗಿರುವದಿಲ್ಲ.

ಹಾಗಿರದಿದ್ದರೆ ಅವನಿಂದ ಇಷ್ಟು ಸಾಹಸ, ಇಷ್ಟು ಧೈರ್ಯಗಳು ಹೇಗೆ ಹೊರಬೀಳುತ್ತಿದ್ದವು? ತಾನು ಕೊಲೆಮಾಡಿದ ಈ ಬಾಲಿಕೆಯ

ಶವವನ್ನು ತಾನಾಗಿ ಈ ಜೇಲಖಾನೆಗೆ ಕಳಿಸಿದ್ದು ಅವನಲ್ಲಿಯ ಮೇಲಿನ ಗುಣಗಳನ್ನು ಚೆನ್ನಾಗಿ ವ್ಯಕ್ತಪಡಿಸುವದಿಲ್ಲವೆ?" ಎಂದಂದು ಪಂತನೂ ಆ ಪತ್ರವನ್ನು ನಿರೀಕ್ಷಿಸಲಾರಂಭಿಸಿದನು. ಆ ಪತ್ರದ ಸಂಗತಿಯು ಈ ಪ್ರಕಾರವಾಗಿದ್ದಿತು:—

"ಜೇಲರ-ಭುಜಂಗರಾಯರೇ;

ನಾನು ನಿಮ್ಮನ್ನು ಬಲ್ಲೆನು; ನೀವಾದರೂ ನನ್ನನ್ನು ಚೆನ್ನಾಗಿ ಬಲ್ಲಿರಿ. ಹೀಗಿದ್ದರೂ ಕೂಡ ನನ್ನನ್ನು ಪತ್ತೆಹಚ್ಚುವ ಹಂಚಿಕೆಯು ಸಿಗುವಂತಿದ್ದರೆ, ನೀವು ಈ ಪ್ರಕಾರದ ಬಂದಿಗೃಹರಕ್ಷಕನ-ಜೇಲರನ ಚಾಕರಿಗೆ ನಿಲ್ಲುತ್ತಿರ ಲಿಲ್ಲ. ನನ್ನಂತೆ ನೀವೂ ಯಾವುದೊಂದು ಸರ್ವತಂತ್ರಸ್ವತಂತ್ರ ಉದ್ಯೋಗವನ್ನು ಕೈಕೊಳ್ಳುತ್ತಿದ್ದಿರಿ; ಅದಿರಲಿ. ನೀವು ಆ ಪೆಟ್ಟಿಗೆಯಲ್ಲಿ ಕಂಡ ಬಾಲಿಕೆಯನ್ನು ನಾನೇ ಆ ಪ್ರಕಾರ ಕೊಲೆಮಾಡಿರುತ್ತೇನೆ. ಆ ಬಾಲಿಕೆಯು ಯಾರು? ಅವಳನ್ನು ಯಾಕೆ ಕೊಂದಿರುವದು? ನಾನು ಯಾರು? ನಾನೇ ಆಗಲಿ, ಮತ್ತಾರೇ ಆಗಲಿ ಅವಳನ್ನೇಕೆ ಕೊಂದಿರುವೆವು? ಇವುಗಳಲ್ಲೊಂ-ದರ ಪತ್ತೆಯೂ ನಿಮಗೆ ಈ ಜನ್ಮದಲ್ಲಿ ಆಗಲಾರದು. ಈ ಕಾರ್ಯದಲ್ಲಿ ನೀವು ನಿಮ್ಮ ಪ್ರಿಯಮಿತ್ರನಾದ ಪಂತನ ಸಹಾಯವನ್ನು ಪಡೆದೇಪಡೆಯುವಿರೆಂದು ನನ್ನ ಭಾವನೆಯು: ಆದರೆ ಆ ಒಬ್ಬ ಪಂತನೇ ಏಕೆ, ಅಂಥ ಹತ್ತೆಂಟುಜನ ಮಂಗೋಪಂತರಿಂದಲೂ ಈ ಕೊಲೆಯು ಪತ್ತೆಹತ್ತಲಾರದು. ಈಗಿನ ಈ ಕೊಲೆಯಾದ ಬಾಲಿಕೆಯುಗೂಡಿ ನನ್ನಿಂದ ಈ ವರೆಗೆ ಇಪ್ಪತ್ಮೂರು ಜನರು ಹಿಂಸಿಸಲ್ಪಟ್ಟಿರುವರು. ಯಾವ ಸ್ಥಳದಲ್ಲಿ, ಯಾವ ಬಗೆಯಿಂದ, ಯಾವ ಉದ್ದೇಶದಿಂದ ನಾನೀ ಕೊಲೆಗಳನ್ನು ಇಷ್ಟು ಬೇಮಾಲೂಮ್ ರೀತಿಯಿಂದ ಮಾಡುತ್ತಿರುವೆನೆಂಬದು ನನ್ನ ಹೊರತು ಪ್ರತ್ಯಕ್ಷ ಅಂತಕನಿಗಾದರೂ ಗೊತ್ತಿದೆಯೋ ಇಲ್ಲವೋ ಹೇಳಲಾರೆನು.

ರಾಯರೇ, ಈ ಬಾರಿ ಮುಗಿಯುವಷ್ಟರಲ್ಲಿ ನನ್ನ ಕೊಲೆಗಳ ಸಂಖ್ಯೆಯನ್ನು ಇಪ್ಪತ್ತೈದಕ್ಕೆ ಒಯ್ದೇತಿರುವೆನೆಂಬ ಭರವಸೆಯುಳ್ಳವನಾಗಿರುತ್ತೇನೆ. ಪಂತನ ಕೊಲೆಗೈದು ೨೪ನೇ ಸಂಖ್ಯೆಯನ್ನು ಪೂರ್ತಿಗೊಳಿಸುವೆನು; ಕಡೆಗೆ ರಾಯರೇ, ನಿಮ್ಮನ್ನೇ ಕೊಂದು ನನ್ನ ಸಂಕಲ್ಪಿತ ೨೫ರ-ಕಾಲುಶತ ಕೊಲೆಗಳ ಸಂಖ್ಯೆಯನ್ನು ಮುಗಿಸುತ್ತೇನೆ. ಆದ್ದರಿಂದ ರಾಯರೇ, ಮೊದಲು ನಿಮ್ಮ ಮಿತ್ರ ಪಂತನನ್ನು ಎಚ್ಚರಗೊಳಿಸಿರಿ; ಮತ್ತು

ನೀವೂ ಸಾವಧರಾಗಿರ್ರಿ. ನಿಮ್ಮಂಥ ೨-೩ ಜನ ಸುದಕ್ಷ ಜನರನ್ನು ವಧಿಸ ದಿದ್ದರೆ ನನ್ನ ಕರಾಮತಿಯನ್ನಾದರೂ ಯಾರು ಮನ್ನಿಸುವರು?

ನೀವು ನನ್ನ ಈ ಪತ್ರವನ್ನು ಓದುತ್ತಿರುವಾಗ ನಿಮ್ಮ ಮುಖ ಭಾವವು ಹೇಗಾಗುತ್ತದೆಂಬದನ್ನು ನೋಡಬೇಕೆಂಬ ಉತ್ಕಟೇಚ್ಛೆಯು ನನಗುಂಟು; ಆದರೆ ಒಂದು ಜರೂರಿಯ ಕೆಲಸಕ್ಕಾಗಿ ಹೊರಟಿರುವದರಿಂದ ಈಗ ನಾನು ನಿಮ್ಮ ಸಮ್ಮುಖದಲ್ಲಿ ನಿಲ್ಲುವಂತಿಲ್ಲ. ಅದರಿಂದ ನನ್ನ ಆ ಇಚ್ಛೆಯು ಈಡೇರದಂತಾಗಿದೆ.

ಇನ್ನು ಉಳಿದಿರುವ ನಿಮ್ಮ ಒಂದೆರಡು ದಿನಗಳ ಆಯುಷ್ಯದಲ್ಲಿ ನೀವು ಆ ಬಾಲಿಕೆಯ ಕೊಲೆಯ ಶೋಧಹಚ್ಚುವ ಒಣಗೊಂದಲದ ಹವ್ಯಾಸ ವನ್ನೇಕೆ ಮಾಡುವಿರಿ? ಈ ವಾರದ ಕೊನೆಗೆ ನಿಮ್ಮೆಲ್ಲರ ಕೊಲೆಯ ಶೋಧದ ಕೆಲಸವನ್ನು ಯಾರು ಕೈಕೊಳ್ಳುವರೋ ಕೈಕೊಳ್ಳಲಿ!

ಭುಜಂಗರಾಯರೇ, ಇನ್ನು ನಿಮಗೆ ವಿಶೇಷ ತಿಳಿಸುವದೇನಿದೆ? ಅವ ಕಾಶವು ಉಳಿದಿಲ್ಲ ನಿಮ್ಮ ಎಲ್ಲ ಸಿದ್ಧತೆಯನ್ನು ತೀವ್ರ ಮಾಡಿಕೊಳ್ಳಿರಿ.

ನಿಮ್ಮ ಗುರುತಿನ ಕೊಲೆಗಾರ."

ಪಂತನು ಓದಿದ ಬಳಿಕ ಆ ಪತ್ರವನ್ನು ಭುಜಂಗರಾಯನ ಕೈಗೆ ಮರಳಿ ಕೊಟ್ಟನು; ಅವನು ಬಾಯಿಂದ ಪಿಟ್ಟೆಂದುಸುರಲಿಲ್ಲ.

ಆಗ ಜೇಲರನು:—ಪಂತರೇ, ನೀವು ಇಂಥ ಎದೆಗಾರ ಕೊಲೆಗಾರ ನನ್ನೆಂದಾದರೂ ಕಂಡಿದ್ದಿರಾ?

ಪಂತ:—ಇಲ್ಲ; ಅವನು ಸಾಮಾನ್ಯ ಮನುಷ್ಯನಾಗಿರುವದಿಲ್ಲ ಇವ ನನ್ನು ಯಾವ ಬಗೆಯಿಂದಾದರೂ ಕೂಡಲೆ ಕೈದು ಮಾಡಲಿಕ್ಕೆ ಬೇಕು. ಅವನ ಪತ್ರದಿಂದಲೇ ಅವನು ನಮಗೂ, ನಾವು ಅವನಿಗೂ ಗುರುತಿನವ ರಾಗಿದ್ದೇವೆಂಬದು ತಿಳಿಯುತ್ತದೆ. ಅವನು ಇಷ್ಟು ನಮ್ಮ ಪರಿಚಯದವ ನಿದ್ದರೂ, ಇಂಥ ಸಾಹಸಕ್ಕೊಳಗಾದದ್ದು ಆಶ್ಚರ್ಯವೇ ಸರಿ.

ಜೇಲರ:—ನನ್ನ ಪರಿಚಯದವರಲ್ಲಿ ಇಂಥ ನೀಚ ಮನುಷ್ಯನಾವ ನಿರುವನೆಂಬದು ನನಗೆ ತಿಳಿಯದಾಗಿದೆ. ಅವನು ಇನ್ನು ಒಂದೆರಡು ದಿನ ಗಳಲ್ಲಿ ನಮ್ಮಗಳ ಕೊಲೆಮಾಡುವನಂತೆ! ಇಷ್ಟು ವೈರತ್ವವುಳ್ಳ ನಮ್ಮ ಶತ್ರುನಾರಿರಬೇಕು?

ಪಂತ:—ನಮ್ಮ-ನಿಮ್ಮಗಳಿಗೆ ಹಿತಶತ್ರುಗಳಾರಿರುವರೆನ್ನುವಿರಿ?

ಅನೇಕ ಜನರಿರುವರು. ಪ್ರತಿಯೊಬ್ಬ ಕಳ್ಳನೂ, ಪ್ರತಿಯೊಬ್ಬ ಕೊಲೆಗಡ ಕನೂ, ಪ್ರತಿಯೊಬ್ಬ ದರವಡೆಖೋರನೂ, ಪ್ರತಿಯೊಬ್ಬ ಮೋಸಗಾರನೂ ನಮ್ಮ ಕಡುವೈರಿಯಾಗಿರುವನು. ಇಷ್ಟೆಲ್ಲ ಜನ ಶತ್ರುಗಳ ಶತ್ರುತ್ವವನ್ನು ನಾವು ಹೆಜ್ಜೆಹೆಜ್ಜೆಗೆ ಕಟ್ಟಿಕೊಳ್ಳುತ್ತಿರುತ್ತೇವೆ. ಅದು ಹೇಗೆಯೇ ಇರಲಿ, ಈ ಬಾಲಿಕೆಯನ್ನು ಖೂನಿಮಾಡಿದ ನೀಚನನ್ನು ನಾವೀಗ ಪತ್ತೆಹಚ್ಚಲೇ ಬೇಕು. ಸ್ವಲ್ಪ ವಿಲಂಬವೂ ತಕ್ಕದ್ದಲ್ಲ.

ಹೀಗೆಂದು ಪಂತನು ಆ ಪೆಟ್ಟಿಗೆಯನ್ನು ಮತ್ತೆ ಸೂಕ್ಷ್ಮದೃಷ್ಟಿ ಯಿಂದ ಅವಲೋಕಿಸಿ, ಅದರೊಳಗಿಂದ ಒಂದು ಕರೇ ಬನಾತಿನ ಲಂಡಅಂಗಿ ಹಾಗು ಅದೇಬಣ್ಣದ ಒಂದು ಮುರಕಬೆತ್ತ(ಕೋಲು)ಇವುಗಳನ್ನು ಹೊರಗೆ ತೆಗೆದನು. ಆ ಲಂಡಅಂಗಿಗೆ ಆ ಶವದ ರಕ್ತವು ಹೆಚ್ಚಾಗಿ ಒರಿಸಲ್ಪಟ್ಟಿದ್ದ ರಿಂದ ಅದರ ಕಪ್ಪುಬಣ್ಣವು ಮಾಯವಾಗಿ ಅದು ನಾಪೀಪುಡೀಬಣ್ಣ ವನ್ನು ಧರಿಸಿತ್ತು. ಪಂತನು ಆ ಅಂಗಿಯನ್ನು ತಿರುವಿತಿರುವಿ ನೋಡಿದನು. ಬಳಿಕ ಅವನು:—ಕೊಲೆಗಾರನು ಇದೇ ಅಂಗಿಯನ್ನು ಹಾಕಿಕೊಂಡು ಈ ಕೊಲೆಯನ್ನು ಮಾಡಿದನೆಂಬದು ಚೆನ್ನಾಗಿ ವ್ಯಕ್ತವಾಗುತ್ತದೆ: ಮತ್ತು ಆತನೇ ತನ್ನ ಕೆಲಸವಾದ ಬಳಿಕ ಇದನ್ನು ಈ ಪೆಟ್ಟಿಗೆಯಲ್ಲಿ ಬೇಕಂತ ತುರಕಿರುತ್ತಾನೆಂದು ಗೊತ್ತಾಗುತ್ತದೆ. ಈ ಕೈಬೆತ್ತದಿಂದ ಆತನ ನಿಲು ವಿಕೆಯಾದರೂ ಸಹಜವಾಗಿ ತಿಳಿಯುಬರುತ್ತದೆ. ಅವನು ೫||ಫೂಟಗಿಂತ ಹೆಚ್ಚು ಎತ್ತರದ ಮನುಷ್ಯನಿಲ್ಲ.

ಜೇಲರ:—ನೀವು ಅವನ ಎತ್ತರವನ್ನು ಹೇಗೆ ತರ್ಕಿಸಿದಿರಿ?

ಪಂತ:—ಈ ಕೈಬೆತ್ತವು ಆ ಕೊಲೆಗಾರನದೇ ಆಗಿದ್ದರೆ ಅವನು ೫|| ಫೂಟೇ ಎತ್ತರಿರಲಿಕ್ಕೆ ಸಾಕು. ಈ ಕೋಲಿನ ಎತ್ತರದ ಮಾನದಿಂದ ಇದನ್ನು ಉಪಯೋಗಿಸುವವನ ಎತ್ತರವು ಸಹಜವಾಗಿ ಗೊತ್ತಾಗುತ್ತದೆ. ಅವನು ೫|| ಫೂಟಗಿಂತ ೪-೬ ಇಂಚು ಹೆಚ್ಚು ಎತ್ತರ ಇಲ್ಲವೆ ಕುಳ್ಳನಾಗಿ ದ್ದರೆ ಅವನ ಕೈಯೊಳಗಿನ ಬೆತ್ತವಾದರೂ ಅದೇ ಮಾನದಿಂದ ಸಣ್ಣ ದೊಡ್ಡ ದಾಗಿರುತ್ತಿತ್ತು. ಈ ಲಂಡಅಂಗಿಯ ಆಕೃತಿಯ ಮೇಲಿಂದ ಅವನ ಎತ್ತರ ವಾದರೂ ೫||ಫೂಟೇ ಇರಲಿಕ್ಕೆಬೇಕು. ಇಷ್ಟಲ್ಲದೆ ಈ ಅಂಗಿಯಿಂದ ಅವನು ವಿಶಾಲ ಹೃದಯದವನೂ, ಹಪಣೆಯಾದ ನಡುಕಟ್ಟಿನವನೂ, ಕುತ್ತಿಗೆಯು ಶಿರವು ತುಸದಪ್ಪಾದವನೂ ಇರುವನೆಂದು ಗೊತ್ತಾಗುವದು,

ಭುಜಂಗರಾಯನು ಪಂತನ ಮಾತುಗಳನ್ನು ಕೇಳಿ ವಿಸ್ಮಿತನಾದನು. ಆದರೂ ಅವನು ಚೇಷ್ಟೆಗಾಗಿ ಪಂತನನ್ನು ಕುರಿತು—: ಇಷ್ಟೆಲ್ಲ ಕೊಲೆಗಡಕನ ಶರೀರದ ಅಳತೆ-ಮಾಪುಗಳು ದೊರೆತ ಬಳಿಕ ಅವನ ಮೈಬಣ್ಣವಾದರೂ ನಿಮಗೆ ಗೊತ್ತಾಗದಿರಲಿಕ್ಕಿಲ್ಲವಷ್ಟೇ? ಎನ್ನಲು,

ಕೂಡಲೆ ಪಂತನು:—ರಾಯರೇ, ಅದನ್ನಾದರೂ ನಾನು ಈಗಲೇ ನಿಮಗೆ ತಿಳಿಸಬಲ್ಲೆನು. ಆ ಕೊಲೆಗಡಕನ ಅಂಗಿಯ ಕಪ್ಪುಬಣ್ಣ, ಕೋಲಿನ ಕಪ್ಪುಬಣ್ಣಗಳ ಮೇಲಿಂದ ಅವನು ಶುದ್ಧ ಬಂಗಾರದಂತೆ ಮೈಬಣ್ಣದವನಾಗಿರಲಿಕ್ಕೆ ಬೇಕು. ಯಾಕೆಂದರೆ ಲೋಕದಲ್ಲಿಯ ಪ್ರತಿಯೊಬ್ಬ ಮನುಷ್ಯನಿಗೆ ಸರ್ವಸಾಧಾರಣವಾಗಿ ತನ್ನ ಮೈಬಣ್ಣದ ವಸ್ತ್ರ-ಒಡವೆಗಳು ಹೆಚ್ಚಾಗಿ ಸೇರುತ್ತಿರುವದಿಲ್ಲ. ಸ್ವರ್ಣವರ್ಣದ ಹೆಂಗಳೆಯರಿಗೆ ಕರೇಚಂದ್ರಕಾಳಿಯ ಸೀರೆಯೂ, ಸಾದುಗಪ್ಪಿನವರಿಗೆ ಬಿಳೇ ಪತ್ತಲಗಳೂ ಸೇರುವವು. ಇದರಂತೆ ಗಂಡಸರಿಗಾದರೂ ಕಪ್ಪು ಮೈಬಣ್ಣದವರಿಗೆ ಬಿಳೇ ಬಟ್ಟೆಗಳೂ, ನಸುಗೆಂಪಿನವರಿಗೆ ಕರೇ ಇಲ್ಲವೆ ಇತರ ಬಣ್ಣದ ಅರಿವೆಗಳೂ ಹೆಚ್ಚಾಗಿ ಸೇರುವವು.

ರಾಯರು:—ಹಾಗಾದರೆ ಆತನ ವಯಸ್ಸೆಷ್ಟು?

ಪಂತ:—ಅವನ ಅಂಗಿಯ ಅಳತೆ-ಮಾಪುಗಳ ಮೇಲಿಂದ ಅವನು ೨೦ಕ್ಕೆ ಕಡಿಮೆಯಿಲ್ಲ, ೪೫ಕ್ಕೆ ಹೆಚ್ಚಿಲ್ಲದ ಪ್ರೌಢ ವಯಸ್ಸಿನವನಿರಬೇಕು. ರಾಯರೇ, ನನ್ನ ಈ ಎಲ್ಲ ಅನುಮಾನಗಳು ಈಗ ನಿಮಗೆ ಚೇಷ್ಟೆಯ ವಿಷಯಗಳಾಗಿ ತೋರುತ್ತಿದ್ದರೂ, ಆ ಕೊಲೆಗಡಕನು ಸಿಕ್ಕಾಗ ಅವನ ನಿಲುವಿಕೆ, ಮೈಬಣ್ಣ, ವಿಶಾಲಹೃದಯ, ವಯಸ್ಸು ಮುಂತಾದವುಗಳು ನನ್ನ ಈಗಿನ ಅನುಮಾನದಂತೆ ಇರುವವೋ, ಇಲ್ಲವೋ ಎಂಬದನ್ನು ಕಂಡುಕೊಳ್ಳಬಹುದು, ಎಂದು ಹೇಳಿ, ಅಲ್ಲಿಂದ ಮನೆಗೆ ಹಿಂದಿರುಗಿದನು.

## ೪ ಇವನೇ ಅವನು.



ಕನ್ನಡಜಿಲ್ಲೆಯೊಳಗಿನ ಪ್ರಸಿದ್ಧ ಧಬಧಬೆಯಾದ ಗೆರೆಸಪ್ಪೆಯಿಂದ ೧-೨ ಮೈಲುಗಳ ಮೇಲಿರುವ ನಿಬಿಡವಾದ ಅರಣ್ಯವನ್ನು ಎಷ್ಟೋ ಜನರು ಅರಿತಿರುವರು. ಈಗ ಆ ಪ್ರಾಂತದಲ್ಲೆಲ್ಲ ಲೈನದಾರಿಗಳಾಗಿ ಅಲ್ಲಿಯ ಪ್ರವಾಸವು ಘುಟಕಾ, ಮೋಟಾರ ಮುಂತಾದ ವಾಹನಗಳಿಂದ ಸುಕರವಾಗಿರುತ್ತದೆ; ಆದರೆ ನಾವು ಯಾವ ಕಾಲದ ಸಂಗತಿಯನ್ನು ಕುರಿತು ವರ್ಣಿಸುತ್ತಿರುವೆವೋ ಆಗ ಅಲ್ಲಿ ಬಹಳ ದಟ್ಟವಾದ ಅರಣ್ಯವಿದ್ದಿತು. ಒಬ್ಬಿಬ್ಬರೇಕೆ, ನಾಲ್ಕಾರು ಜನ ಪ್ರವಾಸಿಗರು ಕೂಡಿ ಮಧ್ಯಾಹ್ನದ ಬಿಸಿಲಲ್ಲಿ ನಿರ್ಧಾಸ್ತವಾಗಿ ಹೋಗುವದೆಂದರೆ ಶಕ್ಯವಿರಲಿಲ್ಲ. ಅದೇ ಸ್ಥಳದಲ್ಲಿಯ ಒಂದು ಗುಡ್ಡದ ಹೊದರಿನಲ್ಲಿ ದಾರಿಬಡಿಯುವವರ ಹಾವಳಿಯು ಆಗ ಮಿತಿ ಮೀರಿದ್ದಿತು.

ಗೆರೆಸಪ್ಪೆಯ ಉತ್ತರದಿಕ್ಕಿನಲ್ಲಿ ಒಂದು ಒಂದೂವರೆ ಮೈಲಿನ ಮೇಲೆ ಆ ನಿಬಿಡವಾದ ಕಾಡಿನಲ್ಲಿ ಒಂದು ಮುರುಕ ಆದರೆ ವಿಸ್ತೃತವಾದ ಚಪ್ಪರವಿದ್ದಿತು. ಅದಕ್ಕೆ ಆಗ್ಗೆ ಆ ಪ್ರಾಂತದವರು "ಕಳ್ಳರ ಬೀಡು" ಎಂದೆಂದು ಕರೆಯುತ್ತಿದ್ದರು. ಆ ಚಪ್ಪರದ ಸುತ್ತಲೂ ಗಗನಚುಂಬಿತಗಳಾದ ಅಳ್ಳೀ-ಆಲದಮರಗಳಿದ್ದವು. ಅದರಿಂದ ಆ ಚಪ್ಪರದ ಇರವು ಅದಕ್ಕೆ ತೀರ ಹತ್ತರದಲ್ಲಿ ಹೋಗದ ಹೊರತು ಗೊತ್ತಾಗುತ್ತಿರಲಿಲ್ಲ. ಆ ವಿಸ್ತೃತವಾದ ಚಪ್ಪರದ ಹಲಕೆಲವು ಭಾಗವು ಮುರುಕಳಿಗೆ ಬಂದಿತ್ತು; ಆದರೆ ಒತ್ತಟ್ಟಿಗಿನ ಕೆಲ ಒಳಭಾಗವು ರಾಜವಾಡೆಯಂತೆ ಬಹಳ ಭವ್ಯವಾಗಿದ್ದಿತು. ಆ ಚಪ್ಪರದಲ್ಲಿ ಸತತವಾಗಿ ಯಾರೂ ವಾಸಿಸದ್ದರಿಂದ ಅದು ಭೀಕರವಾಗಿಯೂ ಜನವಸತಿಗೆ ಅವಲಕ್ಷಣವಾಗಿಯೂ ತೋರುತ್ತಿದ್ದಿತು.

ಮೇಲೆ ವಿವರಿಸಿದ ಚಪ್ಪರದ ಅರಮನೆಯಂತಿರುವ ಭಾಗದಲ್ಲಿಯ ಒಂದು ಕೋಣೆಯಲ್ಲಿ ಒಬ್ಬ ಗೌರಕಾಯದ ಬಾಲಿಕೆಯು-ಅದೇ ತಾರುಣ್ಯದಲ್ಲಿ ಕಾಲಿಡುತ್ತಿದ್ದ ನವಯುವತಿಯು, ಒಂದು ಮೂಲೆಯಲ್ಲಿ ಕುಳಿತು ಕಣ್ಣೀರು ಹಾಕುತ್ತಿದ್ದಳು. ಮಂಜುಗಟ್ಟಿದ ಲತಾಪತ್ರದಂತೆ ಅವಳ

ಮುಖವು ಮಲಿನವಾಗಿತ್ತು; ಅವಳ ಲಾವಣ್ಯಯುಕ್ತ ದೇಹವು ಸೊರಗಿ ಸೊರಗಿ ಕಪ್ಪಿಟ್ಟಿತ್ತು; ಕೃಷ್ಣವರ್ಣದ ದೀರ್ಘವಾದ ಕೇಶಪಾಶವು ರುಕ್ಷವೂ, ಮಲಿನವೂ, ವಿಶೃಂಖಲವೂ ಆಗಿದ್ದಿತು; ಬಾಲಿಕೆಯು ಆಗಾಗ್ಗೆ ದೀರ್ಘಶ್ವಾಸದಿಂದ ನಿಟ್ಟುಸಿರುಗರೆಯುತ್ತಿದ್ದಳು. ಆಕೆಯು ಶೋಕದಿಂದ ಅಷ್ಟು ಮಲಿನವಾಗಿ ತೋರುತ್ತಿದ್ದರೂ ಅವಳ ನೀಲಿಬಣ್ಣದ ವಿಶಾಲಚಕ್ಷು ಗಳೂ, ಸಂಪಿಗೆಯ ಹೂವಿನಂತಹ ಮೂಗೂ ಆಕೆಯ ಮುಖದ ಸೌಂದರ್ಯ ವನ್ನು ಚೆನ್ನಾಗಿ ಎತ್ತಿ ಹಿಡಿದಿದ್ದವು. ಯಾವ ಕೋಣೆಯಲ್ಲಿ ಕುಳಿತು ಅವಳು ಶೋಕಿಸುತ್ತಿದ್ದಳೋ ಆ ಕೋಣೆಯ ಬಾಗಿಲಕಿಟಕಿಗಳು ಹೊರಗಿನಿಂದ ಮುಚ್ಚಲ್ಪಟ್ಟಿದ್ದವು. ಆದರಿಂದ ಅವಳೀಗ ಕೇವಲ ಬಂದಿನಿಯಾಗಿದ್ದಳು.

ಎಷ್ಟೋ ಹೊತ್ತಿನವರೆಗೆ ಒಂದೇಸವನೆ ಅತ್ತು ಅತ್ತು ತನ್ನ ದುಃಖದ ಕೆಲಭಾಗವನ್ನು ಕಣ್ಣೀರು ಸುರಿಸಿ ಕಡಿಮೆಮಾಡಿಕೊಂಡಬಳಿಕ ಆ ಯುವತಿ ಯು ಆ ಕೋಣೆಯ ಪಶ್ಚಿಮದಿಕ್ಕಿನಕಡೆಗಿದ್ದ ಒಂದು ಜೀರಗಿಂಡಿಯ ಬಳಿಗೆ ಹೋಗಿ ನಿಂತಳು. ಆ ಖಿಂಡಿಯೊಳಗಿಂದ ವೇಗದಿಂದ ಪ್ರವಹಿಸುತ್ತಿರುವ ಗಾಳಿಯು ಮೊದಲೇ ರುಕ್ಷವೂ, ವಿಶೃಂಖಲವೂ ಆಗಿದ್ದ ಅವಳ ಕೇಶಪಾಶ ವನ್ನು ಅತ್ತಿತ್ತ ಚದರಿಸಹತ್ತಿತು. ಅವುಗಳಲ್ಲಿಯ ಎಷ್ಟೋ ಕೂದಲುಗಳು ಅವಳ ಕಿವಿ, ಮೂಗು, ಕಣ್ಣು ಇವುಗಳಮೇಲೆ ಬಂದು ಅಲ್ಲಲ್ಲಿಯ ಕಣ್ಣೀರು- ಬಿವರುಗಳಲ್ಲಿ ಸಿಕ್ಕು ಮುಖಕ್ಕೆ ಅಂಟಿಕೊಂಡವು. ಇದರಿಂದ ಅವಳ ಮುಖ ಕಾಂತಿಯು ಮತ್ತಿಷ್ಟು ಮ್ಲಾನವಾಯಿತು. ಆದರೆ ಬಾಲಿಕೆಯ ಲಕ್ಷ್ಯವು ತನ್ನ ಮೋರೆಯಮೇಲೆ ಹಾರಿಹಾರಿ ಬರುತ್ತಲಿರುವ ಆ ಕೂದಲುಗಳ ಕಡೆಗೆ ಕೊಂಚವೂ ಇರದ್ದರಿಂದ ಅವಳು ಅವುಗಳನ್ನು ಸರಿಸಿ ಸರಿಪಡಿಸುವ ಹವ್ಯಾಸ ವನ್ನು ಮಾಡುತ್ತಿರಲಿಲ್ಲ. ಅವಳು ಒಂದೇಸವನೆ ಜೀರಗಿಂಡಿಯೊಳಗಿಂದ ಹೊರಗಿನ ಪ್ರದೇಶವನ್ನು ದಿಟ್ಟಿಸಿ ನೋಡುವದರಲ್ಲಿ ತತ್ಪರಳಾಗಿದ್ದಳು. ಆಗ ಸಾಯಂಕಾಲದ ವೇಳೆಯಾದ್ದರಿಂದ ಕೆಲಹೊತ್ತಿನಲ್ಲಿಯೇ ಸೂರ್ಯನ ಮಧುರಬಿಂಬವು ಅವಳ ಕಣ್ಣೆದುರಿಗೆ ಬಂದು ನಿಂತಿತು. ಆದರೆ ಅವಳ ಲಕ್ಷ್ಯವು ಆಗಿನಕಾಲದ ಆ ಸೃಷ್ಟಿಶೋಭೆಯನ್ನು ನೋಡುವದರ ಕಡೆಗಿದ್ದರೆ ತಾನೆ ಅವಳಿಗೆ ಅದರಿಂದ ಸೊಗಸಾಗಬೇಕು? ಅವಳು ಯಾವದೋ ಒಂದು ವ್ಯಕ್ತಿಯ ಆಗಮನದ ಕಡೆಗೆ ಕಣ್ಣು ಕೆಕ್ಕರಿಸಿ-ಕೆಕ್ಕರಿಸಿ ನೋಡುತ್ತ ನಿಂತುಕೊಂಡಿದ್ದಳು.

ಹೊತ್ತು ಮುಣುಗಿ ಕ್ರಮಕ್ರಮವಾಗಿ ಕತ್ತಲೆಯು ಹೆಚ್ಚಾಗಲಾರಂಭಿಸಿತು; ಆದರೂ ಆ ಬಾಲಿಕೆಯು ಆ ಖಿಂಡಿಯೊಳಗೆ ನೋಡುವ ತನ್ನ ದೃಷ್ಟಿಯನ್ನು ತಿರುಗಿಸಲೇ ಇಲ್ಲ. ಹೊರಗೆ ಚನ್ನಾಗಿ ಕತ್ತಲೆಬೀಳುವ ವರೆಗೂ ಅವಳು ಆ ಖಿಂಡಿಯೊಳಗಿಂದ ಒಂದೇಸವನೆ ನೋಡಿ, ಬಳಿಕ ಅವಳು ತನ್ನ ದೃಷ್ಟಿಯನ್ನು ತಿರುಗಿಸಿದಳು. ಈಗ ಅವಳು ತುಸ ಚಿಂತಾವಿಮುಕ್ತಳಾದಂತೆ ತೋರಹತ್ತಿದಳು. ಈ ವರೆಗಿನ ಅವಳ ಮುಖದ ಮೇಲಿನ ಮ್ಲಾನ ಹಾಗು ಉದಾಸಕಳೆಯು ಕಡಿಮೆಯಾಗಿ, ಅಲ್ಲಿ ತುಸ ಚಾಂಚಲ್ಯವು ಕಾಣತೊಡಗಿತು. ಇಂದಿನ ಕುತ್ತದಿಂದಾದರೂ ಪಾರಾದೆನಲ್ಲ! ಎಂಬ ಭಾವನೆಯಿಂದ ಅವಳು ಈ ವರೆಗೆ ಒಂದೇಸವನೆ ನಿಂತಲ್ಲಿಂದ ಹಿಂದಿರುಗ ಹತ್ತಿದಳು. ಇಷ್ಟರಲ್ಲಿ ಆ ಖಿಂಡಿಯೊಳಗಿಂದ—ನಿಬಿಡವಾಗುತ್ತ ನಡೆದಿರುವ ಕತ್ತಲೆಯಲ್ಲಿ ಮತ್ತೆ ಏನೋ ಕಾಣಹತ್ತಿತು. ಅದರಿಂದ ಆ ನವಯುವತಿಯು ಎದೆನಡುಗಿ ಮೈತುಂಬ ರೋಮಾಂಚನಗಳೆದ್ದವು! ಗಂಟಲಾರಿ, ಉಸಿರು ಕೂಡ ಕಟ್ಟಾಯಿತು. ಆ ಕೂಡಲೆ ಅವಳು ವಿದ್ಯುದ್ವೇಗದಿಂದ ನಿಂತಸ್ಥಳದಿಂದ ಹೊರಟು ಮೊದಲಿನ ಮೂಲೆಯನ್ನು ಸೇರಿ, ಅವಿತುಕೊಂಡು ನಿಂತಳು. ಕೆಲಹೊತ್ತಿನಲ್ಲಿಯೇ ಅವಳ ಮೈಯೆಲ್ಲ ಬೆವತು ಕೈಕಾಲುಗಳು ಲಟಪಟನೆ ನಡುಗಲಾರಂಭಿಸಿದವು.

ಕ್ಷಿಪ್ರದಲ್ಲಿಯೇ ಆ ಕೋಣೆಯ ಬಾಗಿಲವು ತೆರೆಯಲ್ಪಟ್ಟಿತು. ಒಬ್ಬ ಮನುಷ್ಯನು ಅಲ್ಲಿಗೆ ಬಂದನು. ಆ ಯುವತಿಯ ಶಯನಕ್ಕಾಗಿ ಅಲ್ಲೊಂದು ಹೊರಸಿನಂತಹ ಮಂಚವಿಡಲ್ಪಟ್ಟಿತ್ತು. ಬಂದ ವ್ಯಕ್ತಿಯು ಆ ಮಂಚದ ಮೇಲೆ ಕುಳಿತನು. ಬಾಲಿಕೆಯಾದರೂ ಈ ವರೆಗೆ ಆ ಮಂಚದ ಕಾಲ ಬಳಿಯ ಮೂಲೆಯಲ್ಲೇ ನಿಂತುಕೊಂಡಿದ್ದಳು. ಆ ಮನುಷ್ಯನು ಸಮೀಪಕ್ಕೆ ಬಂದೊಡನೆ ಬಾಲಿಕೆಯು ಮತ್ತಷ್ಟು ಹಿಂದೆ ಸರಿದು ನಿಂತಳು. ಆ ಆಗಂತುಕನ ವಯಸ್ಸು ೪೦ ವರ್ಷಗಳಿಗೆ ಕಡಿಮೆಯಿರಲಿಲ್ಲ; ಆದರೆ ಅವನ ಶರೀರ ಸೌಷ್ಠವದಿಂದ ಅವನು ೩೦ಕ್ಕೆ ಮೀರಿರಲಿಕ್ಕಿಲ್ಲವೆಂದು ಅವನನ್ನು ನೋಡಿದವರಿಗೆ ಅನಿಸುತ್ತಿತ್ತು. ಅವನು ಪುಷ್ಟಕಾಯದವನಾಗಿದ್ದನು. ಅವನ ಮೈಕೈಗಳೆಲ್ಲ ಯೋಗ್ಯ ಪ್ರಮಾಣದಿಂದ ತುಂಬಿಕೊಂಡಿದ್ದವು. [illegible]ಯುವು ವಿಶಾಲವಾಗಿದ್ದಿತು. ಅವನನ್ನು ನೋಡಿದರೆ ಇವನೊಳ್ಳೆ [illegible]ಳಿತುವಂತನಾಗಿರುವನೆಂದು ತಟ್ಟನೆ ಹೊಳೆಯುತ್ತಿತ್ತು. ಆತನ ಮೈ ಬಲವಳ

ಶುದ್ಧ ಬಂಗಾರದಂತಿತ್ತು. ಬಳಿಕ ಆಗಂತುಕನು ಆ ಬಾಲಿಕೆಯನ್ನು ಕುರಿತು—ಅಂಬಿಕೆ, ಇನ್ನೆಷ್ಟು ದಿನ ಈ ಯಾತನೆಗಳನ್ನು ಭೋಗಿಸುವೆ? ಇನ್ನಾದರೂ ನನ್ನ ಮಾತಿಗೆ ಒಡಂಬಡು; ಇಲ್ಲಿನ್ನಬೇಡ. ನಿನ್ನ ಸಲುವಾಗಿ ಇಷ್ಟು ಕಷ್ಟಬಡುತ್ತಿರುವ ನನ್ನ ಬಗ್ಗೆ ನಿನ್ನಲ್ಲಿ ಸ್ವಲ್ಪವೂ ದಯೆಯುಂಟಾಗುವದಿಲ್ಲವೆ? ಎಂದಂದು ಉತ್ತರದ ಅಪೇಕ್ಷೆಗಾಗಿ ಸುಮ್ಮನಾದನು; ಆದರೆ ಆ ಬಾಲಿಕೆಯು-ನವಯುವತಿಯಾದ ಅಂಬಿಕೆಯು ಒಂದು ತುಟಿ ಎರಡು ಮಾಡಲಿಲ್ಲ; ಅವನ ಕಡೆಗೆ ಕಣ್ಣೆತ್ತಿ ಕೂಡ ನೋಡದೆ, ಸುಮ್ಮನೆ ನಿಂತುಬಿಟ್ಟಳು.

ಆಗಂತುಕನು ಪುನಃ ಅನ್ನುತ್ತಾನೆ:—ಅಂಬಿಕೆ, ನಿನ್ನ ಹೃದ್ಗತವನ್ನು ತಿಳಿಸು. ಇಷ್ಟುದೂರ ದಾರಿನಡೆದು ಬಂದ ನಾನು ನಿನ್ನ ಒಂದೆರಡು ಮಿಷ್ಟ ಭಾಷಣಗಳನ್ನು ಕೇಳಲಿಕ್ಕೂ ಅಯೋಗ್ಯನಾಗಿರುವೆನೇ?

ಆಗ ಅಂಬಿಕೆಯು ನಿಶ್ಚಯದ ದನಿಯಿಂದ:—ನಾನು ಈಗಲೂ ಹೇಳುತ್ತೇನೆ, ಈ ದೇಹದಲ್ಲಿ ಪ್ರಾಣವಿರುವವರೆಗೂ ನಾನು ನಿನ್ನ ಮಾತಿಗೆ ಒಡಂಬಡುವದಿಲ್ಲ. ನಿನ್ನನ್ನು ಲಗ್ನವಾಗಿ, ನೂರಾರುಜನ ದಾಸದಾಸಿಯರಿಂದ ಸೇವೆಗೊಂಡು ಅತುಲ ಐಶ್ವರ್ಯವನ್ನು ಭೋಗಿಸುವದಕ್ಕಿಂತ, ಈ ಘೋರಾರಣ್ಯದಲ್ಲಿ ಕಡೆತನಕ ಬಂದಿನಿಯಾಗಿರುವದೇ ನನಗೆ ಹೆಚ್ಚು ಸುಖಕರವಾಗಿ ತೋರುತ್ತದೆ.

ಆಗಂತುಕನು ಕೆಲಹೊತ್ತು ಸುಮ್ಮನಿದ್ದು ಬಳಿಕ ತಿರಸ್ಕಾರದಿಂದ—ಈ ಬಂದಿಖಾನೆಯಲ್ಲೇ ಸತ್ತುಹೋಗು; ಆದರೆ ನೀನು ನನ್ನ ಮಾತಿಗೆ ಸಮ್ಮತಿಸದ ವಿನಃ ನಿನ್ನ ಬಿಡುಗಡೆಯಾಗದೆಂಬದನ್ನು ಚೆನ್ನಾಗಿ ನೆನಪಿಡು. ನೀನು ನನ್ನ ವಿಷಯವಾಗಿ ಎಷ್ಟು ಕಠಿಣಹೃದಯದವಳಾಗಿರುವೆಯೋ ನಾನಾದರೂ ನಿನಗಿಂತ ಕಠಿಣ-ವಜ್ರಹೃದಯದವನಾಗಿ ನಿನ್ನನ್ನು ಇಂದಿನಿಂದ ಹೆಚ್ಚುಹೆಚ್ಚು ಪೀಡಿಸಹತ್ತುವೆನು. ಈ ಮೊದಲಿನಂತೆ ನಾನು ಇನ್ನು ನಿನ್ನೊಡನೆ ವಿನಯದಿಂದ, ಪ್ರೇಮುಲತನದಿಂದ ನಡಕೊಳ್ಳಲಿಕ್ಕಿಲ್ಲ. ಯಾವ ರೀತಿಯಿಂದಲೇ ಆಗಲಿ, ನಾನು ನನ್ನ ಮನೀಷೆಯನ್ನು ಪೂರ್ತಿಗೊಳಿಸೇತೀರುವೆನು ನನ್ನ ಮಾತು ಕೇಳಿ ನನ್ನ ಪಟ್ಟದರಸಿಯಾಗಿ ಯಾವ ಸುಖೋಪಭೋಗಗಳನ್ನು ಅನುಭವಿಸಲಿಕ್ಕೆ ಸಮ್ಮತಿಸುವದಿಲ್ಲವೋ, ಇನ್ನು ಮುಂದಿನ ಬಲ ಪ್ರಯತ್ನಗಳಿಂದ ನನ್ನ ಉಪಪತ್ನಿಯಾಗಿಯಾದರೂ ನನ್ನಿಂದ ದೊರೆನಿಂತಹ ಸುಖವನ್ನು ಭೋಗಿಸಲಿಕ್ಕೆ ತತ್ಪರಳಾದೀ. ಅಂಬಿಕೆ, ನೀನು ಆ ನಿನ್ನ

ಪ್ರಿತಿಪಾತ್ರ ಉಡಾಳ ಪೋರ ಭೀಮನನ್ನು ಎಲ್ಲಿಯು ವರೆಗೆ ಮರೆಯುವ ದಿಲ್ಲವೋ, ಅಲ್ಲಿಯು ವರೆಗೆ ನನ್ನ ಹಿತವಚನಗಳು ನಿನಗೆ ರುಚಿಸಲಾರವು. ಒಳ್ಳೇದು, ತುಸದಿನಗಳಲ್ಲಿಯೇ ಆತನ ರುಂಡವು ಇಲ್ಲಿಯೇ—ಈ ಕೋಣೆ ಯಲ್ಲೇ ಬಂದು ನಿನ್ನ ಕಾಲಕೆಳಗೆ ಬಿದ್ದಬಳಿಕ ನಿನ್ನ ಕಣ್ಣು ತೆರೆದಾವು, ಎಂದಂದು ಆ ಆಗಂತುಕನು ಆ ಬಾಲಿಕೆಯು ಕಡೆಗೆ ಕೆಂಗಣ್ಣಿನಿಂದ ನೋ- ಡುತ್ತ ಕರಕರನೆ ಹಲ್ಲುಕಡಿಯು ಹತ್ತಿದನು. ಅವನ ಆಗಿನ ಹಾವಭಾವ ಗಳನ್ನೂ, ಮುಖಲಕ್ಷಣಗಳನ್ನೂ ಕಂಡು ಆಕೆಯು ಮತ್ತಿಷ್ಟು ನಡುಗಲಾ ರಂಭಿಸಿದಳು.

ಕೆಲನಿಮಿಷಗಳ ನಂತರ ಭೀತಿಗ್ರಸ್ತಳಾದ ಅಂಬಿಕೆಯು ನಿಂತಸ್ಥಳ ದಿಂದ ಆ ಆಗಂತುಕನ ಎದುರಿಗೆ ಬಂದು ಮೊಣಕಾಲೂರಿ ಕುಳಿತು ಗಟ್ಟಿ ದನಿಯಿಂದ ಅಳುತ್ತ:—ಕೇಶವರಾಯಾ, ನಾನು ತಂದೆತಾಯಿಗಳಿಲ್ಲದ ಪರ ದೇಶಿ ಹುಡುಗಿಯು; ನನ್ನ ದುಃಖವನ್ನೂ, ಪ್ರಸ್ತುತದ ಯಾತನೆಯನ್ನೂ ಕಂಡು ನಿನ್ನಲ್ಲಿ ಎಳ್ಳಷ್ಟಾದರೂ ದಯೆಯುಂಟಾಗುವದಿಲ್ಲವೆ? ನೀನು ನಮ್ಮ ಚಿಕ್ಕ ಪ್ಪನ ಜೀವದ ಗೆಳೆಯನಲ್ಲವೆ? ನನ್ನ ಚಿಕ್ಕಪ್ಪನಿಂದ ನೀನು ಅಗಣಿತ ಹಣ ತಿಂದಿರುವದಿಲ್ಲವೆ? ನಾನು ನಿನ್ನ ಆಶ್ರಯದಾತೃವಿನ ಅಣ್ಣನ ಮಗಳಲ್ಲವೆ? ನನ್ನನ್ನು ನೀನು ಹೀಗೆ ಸೆರೆಯಲ್ಲಿಟ್ಟು ಗೋಳಾಡಿಸಬಹುದೇ? ಈಗೊಂದು ವರ್ಷದಿಂದ ನೀನು ನಮ್ಮ ಕಕ್ಕನ ಕಡೆಗೆ ಬರಹೋಗುತ್ತಿದ್ದೆ. ನನ್ನನ್ನೂ ನನ್ನ ಚಿಕ್ಕ ತಂಗಿ, ಅಂಬಾಲಿಕೆಯನ್ನೂ ನೀನು ಹೆಚ್ಚಾಗಿ ಪ್ರೀತಿಸುತ್ತಿದ್ದೆ. ಆ ಪ್ರೀತಿಯು ಪರಿವರ್ತನವು ಈ ಬಗೆಯ ದುರ್ವ್ಯವಹಾರದಲ್ಲಿ ಪರಿಣಮಿ ಸೀತೆಂಬದು ನನಗೇನು ಗೊತ್ತು? ನಮ್ಮ ಕಕ್ಕನು ನಮ್ಮನ್ನು ಹೇಗೆ ಪ್ರೀತಿ ಸುತ್ತಿದ್ದನೋ ನೀನಾದರೂ ಅದೇ ಬಗೆಯಿಂದ ಪ್ರೀತಿಸುತ್ತಿರುವೆಯೆಂದು ನಾವು ತಿಳಿದಿದ್ದೆವು. ಆದರಿಂದ ನಾವು ನಿನ್ನಲ್ಲಿ ನಮ್ಮ ಹಡೆದ ತಂದೆಯು ಷ್ಟು ಭಕ್ತಿ ವಿಶ್ವಾಸಗಳನ್ನಿಟ್ಟಿದ್ದೆವು. ಈಗಲೂ ಅಷ್ಟು ಭಕ್ತಿವಿಶ್ವಾಸಗಳ ನ್ನಿಟ್ಟೇ ನಿನ್ನಲ್ಲಿ ದಯಾಯಾಚನೆಯನ್ನು ಮಾಡುತ್ತಿರುವೆನು. ಕೇಶವ ರಾಯಾ, ನನ್ನನ್ನು ಬಿಟ್ಟುಬಿಡು. ನನ್ನನ್ನು ನಮ್ಮ ಮನೆಗೆ ಕಳಿಸಿಕೊಡು. ನನ್ನ ಜೀವಹೋದರೂ ನಿನ್ನ ಈ ವರ್ತನದ ಒಂದಕ್ಷರವನ್ನು ಕೂಡ ನಾನು ಹೊರಗೆಡಹುವದಿಲ್ಲ. ಇಕೋ ವಚನವನ್ನು! ಎಂದು ಬಗೆಬಗೆ ಯಾಗಿ ಪ್ರಾರ್ಥಿಸಿದಳು.

ಅಂಬಿಕೆಯ ಆ ಪ್ರಕಾರದ ಕರುಣಾಪೂರ್ಣನುಡಿಗಳ ಕಡೆಗೆ ಪಾಪಾಂತಃಕರಣಿಯೂ, ನರಹಂತಕನೂ ಆಗಿದ್ದ ಕೇಶವನು ಕಿವಿಗೊಡಲಿಲ್ಲ; ಇಷ್ಟೇ ಅಲ್ಲ ಅವನು ತನ್ನ ಅಭೀಷ್ಟಚಿಂತನೆಗಾಗಿ ಆ ಕೂಡಲೆ ಪ್ರಯತ್ನಿಸಹತ್ತಿದನು. ಅವನು ಅಂಬಿಕೆಯ ಕಣ್ಣುಗಳನ್ನು ತನ್ನ ಎರಡೂ ಕೈಗಳಿಂದ ಒಮ್ಮೆಲೆ ಮುಚ್ಚಿ, ಅವಳನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಳ್ಳುವ ಪ್ರಯತ್ನ ಮಾಡಿದನು. ಮರಿಹಾಕಿದ ಹುಲಿಯಂತೆ ಅವಳು ಕ್ರೋಧ ಸಂತಪ್ತಳಾಗಿ ಅವನ ಕೈಯಿಂದ ಕೊಸರಿಕೊಂಡು ದೂರಸರಿದು ನಿಂತಳು. ಅವಳ ಮುಖದ ಮೇಲಿನ ಈ ಮೊದಲಿನ ಮಾಲಿನ್ಯವೂ ಚಾಂಚಲ್ಯವೂ ದೈನ್ಯವೂ ಒಮ್ಮೆಲೆ ಅಳಿದು, ಸಿಟ್ಟಿನಿಂದ ಸಕಲಲೋಕಗಳನ್ನೂ ಸಂಹರಿಸಲು ಹಾತೊರೆಯಹತ್ತಿದ್ದ ಚಂಡಿಕೆಯಂತೆ ಅವಳು ತೋರಲಾರಂಭಿಸಿದಳು. ಆಗ ಅವಳು ಕೇಶವರಾಯನನ್ನು ಕುರಿತು—ಮೂರ್ಖಾ, ಪಿಶಾಚಿಯೇ, ನಿನ್ನ ಮೋರೆನೋಡುವದೂ ಕೂಡ ಪಾಪಕರವು. ಈಗ ಇಲ್ಲಿಂದ ಸುಮ್ಮನೆ ಹೊರಟು ಹೋಗು. ಆ ಮೇಲೆ ನಿನ್ನ ಮನಸ್ಸಿಗೆ ಬಂದಂತೆ ಮಾಡುಪಿಯಂತೆ. ನೀನು ತೋರಿಸುತ್ತಿರುವ ಬೆದರಿಕೆಗೆ ಇನ್ನು ನಾನು ಎಳ್ಳಷ್ಟೂ ಅಂಜುವದಿಲ್ಲ. ನಿನ್ನಂತಹ ನೀಚನ, ನರಪಿಶಾಚಿಯ ಬಳಿಗೆ ದಯಾಯಾಚನೆ ಮಾಡುವದಕ್ಕಿಂತ ಮರಣಾಂತ್ಯ ಕಷ್ಟಗಳನ್ನನುಭವಿಸಿ ಸಾಯುವದೇ ಲೇಸು, ಎಂದು ಗರ್ಜಿಸಿದಳು.

ಅಂಬಿಕೆಯ ಆಗಿನ ಮುಖಭಾವವನ್ನು ಕಂಡು ಕೇಶವರಾಯನು ತುಸ ವಿಸ್ಮಿತನೂ ಭಯಭೀತನೂ ಸ್ತಂಭಿತನೂ ಆದನು. ಆದರೂ ಆ ಪಾಪಿಯು ತನ್ನ ಅಸ್ಖಲಿತ ಸಂಕಲ್ಪದಿಂದ ಮತ್ತೆ ಅವಳ ಕಡೆಗೆ ಮುಂದುವರಿದನು. ಕೂಡಲೆ ಹುಲಿಯಬಾಯಿಂದ ತಪ್ಪಿಸಿಕೊಂಡ ಚಿಗರಿಯ ಮರಿಯಂತೆ ಅಂಬಿಕೆಯು ಓಡುತ್ತೋಡುತ್ತ ಕೋಣೆಯಿಂದ ಹೊರಬಿದ್ದಳು. ಕೇಶವರಾಯನು ಅವಳನ್ನು ಹಿಡಿಯುವ ಸಲುವಾಗಿ ಕುಳಿತಲ್ಲಿಂದ ಬಾಗಿಲದ ಕಡೆಗೆ ಧಾವಿಸಿ ಬಂದನು. ಹೊರಬದಿಯಲ್ಲಿ ಮತ್ತೊಬ್ಬ ಪ್ರೌಢವಯಸ್ಸಿನ ಹೆಣ್ಣುಮಗಳು ನಿಂತುಕೊಂಡಿದ್ದಳು. ಕೇಶವನು ಇನ್ನು ಹೊರಬೀಳತಕ್ಕವನು. ಅಷ್ಟರಲ್ಲಿ ಆ ಆಗಂತುಕ ಹೆಂಗಸು ಅವನನ್ನು ಒಳದೂಡಿದಳು, ಹಾಗು ಆ ಕೋಣೆಯ ಕದವನ್ನು ಇಕ್ಕಿ ಹೊರಗಿನಿಂದ ಚಿಲಕ ಹಾಕಿದಳು. ಕೇಶವನು ಆ ಆಗಂತುಕ ಸ್ತ್ರೀಯನ್ನು ನೋಡಿದ

ಕೂಡಲೆ ಹತವೀರ್ಯನೂ, ಕಿಂಕರ್ತವ್ಯವಿಮೂಢನೂ ಆಗಿದ್ದನು. ಅದ ರಿಂದ ಆಕೆಗೆ ಬಾಗಿಲವನ್ನಿಕ್ಕಿಕೊಳ್ಳುವ ತನ್ನ ಕೆಲಸಕ್ಕೆ ಅವನಿಂದ ಸ್ವಲ್ಪವೂ ವ್ಯತ್ಯಯವುಂಟಾಗಲಿಲ್ಲ. ತದನಂತರ ಅವಳು ಅಂಬಿಕೆಯ ಕೈಹಿಡಿದು ಆವ ಳವನ್ನು ಬೇರೆ ಕಡೆಗೆ ಕರೆದೊಯ್ಯಲಾರಂಭಿಸಿದಳು. ಆ ಆಗಂತುಕ ಸ್ತ್ರೀಯನ್ನು ಕಂಡು ಅಂಬಿಕೆಯು ಕೇಶವರಾಯನಿಗಿಂತಲೂ ಹೆಚ್ಚು ಬೆರಗಾದಳು.

ವಾಚಕರೇ, ಅಂಬಿಕೆಯನ್ನು ಸೆರೆಯಿಟ್ಟಿದ್ದ ಆ ವ್ಯಕ್ತಿಯು ಯಾರಿರ ಬಹುದೆಂದು ನೀವು ತರ್ಕಿಸುತ್ತಿರಬಹುದಲ್ಲವೆ? ಅವನ ನಿಜವಾದ ಹೆಸರು- ದೆಶೆಗಳಾವವೂ ನಿಮ್ಮಂತೆ ನಮಗೂ ಗೊತ್ತಿರದಿದ್ದರೂ, ನಮ್ಮ ಪ್ರಸ್ತುತ ಕಾದಂಬರಿಯ ನಾಯಕನೂ, ಮನೋರಮೆಯನ್ನು ಅಧಃಪತನಗೊಳಿಸಿ ದವನೂ ಇವನೇ ಅವನೆಂದು ನಿರ್ಬಾಧವಾಗಿ ತಿಳಿಸುವೆವು. ಅದರಂತೆ ಅಂಬಿಕೆಯನ್ನು ಕೇಶವರಾಯನ ಜಾಲದಿಂದ ಆಯತಕಾಲಕ್ಕೆ ಬಿಡಿಸಿ ಬೇರೆ ಕಡೆಗೆ ಕರೆದೊಯ್ದ ಆ ಆಗಂತುಕ ಹೆಂಗಸಾದರೂ ನಮ್ಮ ಆ ಹುಚ್ಚ ಮನೋರಮೆಯೇ ಆಗಿರುವಳೆಂಬುದನ್ನು ವಾಚಕರಿಗೆ ಪ್ರತ್ಯೇಕವಾಗಿ ತಿಳಿ ಸುವ ಕಾರಣವಿಲ್ಲ.

---

## ೫ ಸಂಗಡಿಗನ ಸಹಾಯ.

ಮನೋರಮೇ-ಮನೋರಮೆ, ಸುಮ್ಮನೆ ನಾವಿಗೇಕೆ ಡಾಗುತ್ತೀ? ತೆರೆ, ಬೇಗನೆ ಬಾಗಿಲ ತೆರೆದುಬಿಡು, ಎಂದು ಕೋಣೆಯೊಳಗೆ ಸಿಕ್ಕುಬಿದ್ದಿದ್ದ ಕೇಶವರಾಯನು ಗಟಿಗಟ್ಟಿಯಾಗಿ ಕೂಗಹತ್ತಿದನು: ಹಾಗು ಬಾಗಿಲಮೇಲೆ ಧಡಧಡೆಂದು ಕೈಬಡೆದು ಸಪ್ಪಳ ಮಾಡಹತ್ತಿದನು. ಅತ್ತೀಕಟ್ಟಿಗೆಯ ಭದ್ರವಾದ ಆ ಬಾಗಿಲಕ್ಕೆ ಅವನು ಎಷ್ಟು ಕಸುವಿನಿಂದೊದ್ದರೂ, ಅದು ಜುಮ್ಮೆನ್ನಲಿಲ್ಲ. ಆ ನಿರಾಶ್ರಿತ ಬಾಲಿಕೆಯ ಪಕ್ಷವನ್ನು ವಹಿಸಿದ್ದ ಆ ಕದವು ಭೀಮಜಟ್ಟಿಯಂತೆ ಅಡ್ಡನಿಂತು ಕೇಶವರಾಯನ ಪಾಪಲಾಲಸೆಗೆ ಆತಂಕಮಾಡುತಲಿತ್ತು. ಮೋಹಿನಿಯು ಪಶ್ಚಿಮದಿಕ್ಕಿನ ಆ ಜೀರಗಿಂಡಿಯ ಹತ್ತರ ನಿಂತು ಖೊಖೊಕ್ಕೆಂದು ನಗುತ್ತಿದ್ದಳು ಮಾತ್ರ. ಕೆಲಕ್ಷಣಗಳನಂತರ

ಅವಳು:—ನನ್ನ ಸಾವಿನ ಸಲುವಾಗಿ ನೀನು ಮತ್ತೆ ಮತ್ತೆ ಚಿಂತಿಸುವದೇಕೆ? ಸದ್ಯಕ್ಕೆ ನಿನ್ನ ಮರಣದ ವಿಷಯವಾಗಿ ನೀನು ಆಲೋಚಿಸಹತ್ತು. ಇಲ್ಲಿ ನೀನು ಸುಖವಾಗಿ ಸಾಯಲಾರೆ. ಅನ್ನ-ನೀರಿಲ್ಲದೆ, ನಿನ್ನ ಈವರೆಗಿನ ದುಷ್ಕೃತ್ಯಗಳಿಗೆ ತಕ್ಕದಾದ ರೀತಿಯಿಂದ ನಿನಗೆ ಮರಣ ಪ್ರಾಪ್ತವಾಗುವದು. ನಿನ್ನ ಈ ಬಗೆಯ ಮರಣವನ್ನು ನೋಡುವ ಇಚ್ಛೆಯಿಂದಲೇ ನಾನಿನ್ನೂ ಸತ್ತಿರುವದಿಲ್ಲ, ಎಂದಳು; ಹಾಗು ಕೇಶವನು ತಾನು ಆ ಕೋಣೆಯನ್ನು ಸೇರುವಾಗ ಅದಕ್ಕೆ ಹಾಕಿದ್ದ ಕೀಲಿ-ಕೀಲೀಕೈಗಳನ್ನು ಚಿಲಕದಲ್ಲಿಯೇ ಬಿಟ್ಟುಬಂದಿದ್ದನಾದ್ದರಿಂದ ಅನಾಯಾಸವಾಗಿ ಸಿಕ್ಕ ಅವುಗಳನ್ನುಪಯೋಗಿಸಿ ಆ ಬಾಗಿಲಕ್ಕೆ ಭದ್ರವಾಗಿ ಕೀಲಿಯನ್ನು ಜಡಿದಳು.

ಬಾಗಿಲಿಗೆ ಕೀಲಿಹಾಕಿದ ಸಪ್ಪಳವನ್ನು ಕೇಳಿ ಕೇಶವನು ಪುನಃ ಮನೋರಮೆಯನ್ನುದ್ದೇಶಿಸಿ:—ಮನೋರಮೆ, ಬಾಗಿಲ ತೆರೆದುಬಿಡು. ಸುಮ್ಮನೆ ಏಕೆ ಸಾಯುವೆ?

ಖೊಳ್ಳೆಂದು ನಕ್ಕು ಮನೋರಮೆಯು:—ಯಾಕೋ ಬೊಣಪಾ, ಯಾರನ್ನಂಜಿಸುವೆ? ಮರಣಸಂಬಂಧದ ನನ್ನ ಭಾವನೆಯು ಇನ್ನೂ ನಿನಗೆ ತಿಳಿದಂತೆ ಕಾಣುವದಿಲ್ಲ.

"ಮನೋರಮೇ, ನಿನ್ನ ಈಗಿನ ಹುಡುಗಾಟಿಕೆಯಿಂದ ನನಗೆಷ್ಟು ಹಾನಿಯುಂಟಾಗುತ್ತದೆಂಬದು ನಿನಗೇನು ಗೊತ್ತು?"

"ನಿನ್ನ ಆ ಪರಿ ಹಾನಿಯಿಂದ ನನಗೆಷ್ಟು ಲಾಭವಾಗುವದೆಂಬದನ್ನು ನೀನು ಅರಿಯೆಯೇ ಅರಿಯೆ."

"ಈಗಿನ ನಿನ್ನ ಉದ್ಧಟಾಚರಣೆಗಾಗಿ ನಾನೆಂದೂ ನಿನ್ನನ್ನು ಕ್ಷಮಿಸಲಾರೆನು."

"ನಿನ್ನಂಥ ಮೂರ್ಖನ ಬಳಿಗೆ ಆದಾರು ಕ್ಷಮೆ ಬೇಡಬರುವರು?"

ಹೀಗೆಂದು ಮನೋರಮೆಯು ಅಂಬಿಕೆಯನ್ನು ಸಂಗಡ ಕರಕೊಂಡು ಅಲ್ಲಿಂದ ಹೊರಟು ಆ ಭೀಕರವಾದ ಅರಣ್ಯವನ್ನು ಸೇರಿದಳು. ಕೆಲ ದೂರ ಹೋದಬಳಿಕ ಅವರೀರ್ವರೂ ಒಂದು ನಿಬಿಡವಾದ ಆಲದಮರದ ತಂಪಿ ನೆರಳಿನಲ್ಲಿ ನಿಂತುಕೊಂಡರು. ಕೆಲಕ್ಷಣಗಳಲ್ಲಿ ಅಂಬಿಕೆಯ ಮುಖದಿಂದ ಅವಳ ದುರವಸ್ಥೆಯನ್ನೆಲ್ಲ ಮನೋರಮೆಯು ತಿಳಿದುಕೊಂಡಳು. ಬಳಿಕ ಅವಳು—ತಂಗೀ, ಆದದ್ದಾಯಿತು. ಇನ್ನೇನು ಮಾಡಬೇಕೆಂದಿರುವೆ?

ನೀನಿನ್ನು ನಿನ್ನ ಮನೆಗೆ ಮರಳಿ ಹೋಗುವ ಬಗೆ ಹೇಗೆ? ನಿನ್ನ ಊರಾದ ಬನವಾಸಿಯು ಇಲ್ಲಿಂದ ಏನಿಲ್ಲೆಂದರೂ ೩೦-೪೫ ಮೈಲಾಗಬಹುದು. ಅಷ್ಟು ದೂರದ ಪ್ರವಾಸವನ್ನು ನೀನೊಬ್ಬಳೇ ಈ ರಾತ್ರಿಯಲ್ಲಿ ಕ್ರಮಿಸಲಾರೆ. ಮೇಲಾಗಿ ದಾರಿಯಲ್ಲಿ ಈ ದಸ್ಯುವಿನ ಸಹಚರರು ನಿನ್ನನ್ನು ಮತ್ತೆ ಪ್ರತಿ ಬಂಧಿಸಬಹುದಾಗಿದೆ. ಆದ್ದರಿಂದ ನೀನೀಗ ನಿಮ್ಮೂರಿಗೆ ಹೋಗುವ ಆಲೋಚನೆಯನ್ನು ಬಿಟ್ಟುಗೊಡು ಈ ಬಳಿಯ ಮೈಸೂರ ಸೀಮೆಯಲ್ಲಿ ನಿನ್ನ ಆಪ್ತರಾರಾದರೂ ಇದ್ದರೆ ಕೆಲದಿನಗಳವರೆಗೆ ಅಲ್ಲಿಯೇ ಹುದುಗಿ ಕೊಂಡಿರು.

ಅಂಬಿಕೆಯು ನಿಟ್ಟುಸಿರುಗರೆದು—ಇಲ್ಲಾರಿರುವರು? ಇಲ್ಲಿ ನಮ್ಮ ಆಪ್ತ-ಋಣಾನುಬಂಧಿಕರಾರೂ ಇರುವಂತೆ ನನಗೆ ಸ್ಮರಿಸುವದಿಲ್ಲ. ಆದರೂ ಇಲ್ಲಿಂದ ಸಮೀಪದಲ್ಲಿಯ ಒಂದು ಹಳ್ಳಿಯಲ್ಲಿ ನಮ್ಮ ಪುರೋಹಿತನೊಬ್ಬ ನಿರಬಹುದಾಗಿದೆ. ಅವನ ಬಳಿಗೆ ಹೋದರೆ ಅವನು ನನಗೆ ಆಶ್ರಯವನ್ನು ಕೊಟ್ಟೇಕೊಡುವನು.

ನಿಮ್ಮ ಆ ಪುರೋಹಿತನನ್ನು ನಾನು ಬಲ್ಲೆನು. ಅವನ ಹೆಸರು ನಾರಾಯಣಶಾಸ್ತ್ರಿಯೆಂದಲ್ಲವೇ? ಅವನ ಊರು ಇಲ್ಲಿಂದ ನೆಟ್ಟಗೆ ದಕ್ಷಿಣ ದಿಕ್ಕಿಗೆ ೫-೬ ಮೈಲಿನ ಮೇಲಿರುತ್ತದೆ. ಈಗ ಮುಗಿಲೆಲ್ಲ ಮೋಡಗಳಿಂದ ಕೂಡಿದೆ. ಇನ್ನೂ ಮಳೆಬೀಳಹತ್ತಿರುವದಿಲ್ಲ ತುಸಹೊತ್ತಿನಲ್ಲಿ ಬರಬಹು ದಾಗಿದೆ. ಅದರಿಂದ ನಿನಗೆ ದಾರಿಯಲ್ಲಿ ಬಹಳ ತೊಂದರೆಯಾದೀತು. ನೀನು ಅಲ್ಲಿಗೆ ಹೋಗುವ ಮನಸ್ಸನ್ನೇ ಮಾಡಿದ್ದರೆ ನಾನು ನಿನಗೆ ಆ ಊರ ದಾರಿ ತೋರಿಸುವೆನು ಆ ದಾರಿಯನ್ನು ಬಿಡದೆ ಹೋದರೆ ನೀನು ಯಾವ ವಿಪತ್ತಿಗೂ ಗುರಿಯಾಗದೆ ನೆಟ್ಟಗೆ ನಾರಾಯಣಶಾಸ್ತ್ರಿಗಳ ಮನೆಯನ್ನು ಸೇರುವೆ, ಎಂಬ ಮನೋರಮೆಯ ಮಾತಿಗೆ ಅಂಬಿಕೆಯು—ಅಕ್ಕಾ, ಈ ಅಪರಾತ್ರಿಯಲ್ಲಿ ನೀನೆಲ್ಲಿಗೆ ಹೋಗುವೆ? ನಾನೂ ನೀನೂ ಕೂಡಿಯೇ ಅಲ್ಲಿಗೆ ಹೋಗೋಣ. ಬೆಳಗಾದ ಮೇಲೆ ನೀನು ಬೇಕಾದಲ್ಲಿಗೆ ಹೋಗುವಿಯಂತೆ, ಎಂದು ಹೇಳಿದಳು.

ಮನೋರಮೆ—ಛೇ-ಛೇ! ನನ್ನ ಇರವಿನ ಬಗ್ಗೆ ನೀನು ಚಿಂತಿಸ ಬೇಡ. ನಾನು ಎಲ್ಲಿ ಕೂಡ್ರುವೆನೋ ಅದೇ ನನ್ನ ಬಿಡಾರವು. ಅದಿರಲಿ, ನೀನಿನ್ನು ಹೊರಡು.

ಅಂಬಿಕೆ—ಅಕ್ಕಾ, ನಿನಗಾರೂ ಇಲ್ಲವೆ?

ಮನೋರಮೆ—ಅದೇಕೆ? ನನ್ನ ಗಂಡನಿರುವನು.

ಅಂಬಿಕೆ:—ಅವನು ನಿನ್ನನ್ನು ಹುಡುಕುವದಿಲ್ಲವೆ? ಅವನೆಲ್ಲಿರುವನು?

ಮನೋರಮೆ:—ಆ ತರದ ಸಂಬಂಧವು ನನ್ನ ಅವನಲ್ಲಿ ಉಳಿದಿಲ್ಲ. ನಿನ್ನನ್ನು ಸೆರೆಯಲ್ಲಿಟ್ಟು, ಪಾರ್ಶ್ವಭಾಗಿನಿಯನ್ನಾಗಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದ ಆ ಅಧಮ- ಕೇಶವರಾಯನೇ ನನ್ನ ಪತಿಯು.

ಅಂಬಿಕೆಯು ವಿಸ್ಮಯವಿಸ್ಫಾರಿತ ನೇತ್ರಗಳಿಂದ ಮನೋರಮೆಯ ಕಡೆಗೆ ನೋಡುತ್ತ—ಅವನೇ? ಆ ನೀಚನೇ ನಿನ್ನ ಗಂಡನೇನು?

ಮನೋರಮೆಯು ತನ್ನ ಕೈಯೊಳಗಿನ ನಿಡಿದಾದ ಚೂರಿಯನ್ನು ಅಂಬಿಕೆಗೆ ತೋರಿಸಿ—ಅಂಥ ಗಂಡನಿರುವನೆಂದೇ ಈ ಚೂರಿಯನ್ನು ಯಾವಾಗಲೂ ಹತ್ತಿರಿಟ್ಟುಕೊಂಡು ಸಂಚರಿಸುತ್ತಿರುವೆನು. ಈ ಜನ್ಮದಲ್ಲಿ ನಾನು ಅವನಿಂದ ಯಾವ ಸುಖವನ್ನೂ ಪಡೆಯದಿದ್ದರೂ,—ಅವನ ಸಹವಾಸದಿಂದ ಕುಲಕಲಂಕಿನಿಯೆಂದು ಜನರಿಂದ ಅನಿಸಿಕೊಳ್ಳುತ್ತಿದ್ದರೂ—ಮುಂದಿನಜನ್ಮದಲ್ಲಾದರೂ ಅವನಿಂದ ಸುಖ ಹೊಂದಲಿಕ್ಕಿಲ್ಲೆಂದು ಅದಾರು ಹೇಳುವರು? ನಾನು ಈ ಲೋಕವನ್ನು ಬಿಟ್ಟು ತೆರಳುವಾಗ ಈ ನನ್ನ ಕೈಗತ್ತಿಯನ್ನು ಅವನ ಹೃದಯದಲ್ಲಿ ಆಮೂಲವಾಗಿ ಚುಚ್ಚಿ, ಅವನ ರಕ್ತದಿಂದ ಪರಿಪ್ಲುತವಾದ ಇದನ್ನು ನನ್ನ ಹೃದಯದಲ್ಲಿ ಚುಚ್ಚಿಕೊಳ್ಳುತ್ತೇನೆ; ಹಾಗು ಅವನೊಡನೆ ಸ್ವರ್ಗಲೋಕವನ್ನು ಸೇರಿ ಚಿರಸುಖಿಯಾಗುತ್ತೇನೆ. ತಂಗೀ, ನೀನು ಅದನ್ನೆಲ್ಲ ಕಟ್ಟಿಕೊಂಡು ಮಾಡುವದೇನು? ಈಗ ನೀನು ನಿನ್ನ ದಾರಿಯನ್ನು ಹಿಡಿ. ನಿನ್ನನ್ನು ದಾರಿಗೆ ಹಚ್ಚಿ ಬೇಗನೆ ನಾನು ಬೇರೆ ಕಡೆಗೆ ತೆರಳಬೇಕಾಗಿದೆ, ಎಂದಳು.

ಬಳಿಕ ಅವರೀರ್ವರೂ ಆ ಕಾನಿನೊಳಗಿಂದ ಬೇರೆ ಮಾರ್ಗವಾಗಿ ಹೊರಗೆ ಬಂದರು. ಮನೋರಮೆಯು ದಕ್ಷಿಣದಿಕ್ಕಿಗೆ ನಡೆದಳು. ಅಂಬಿಕೆಯು ಅವಳನ್ನು ಹಿಂಬಾಲಿಸಿದಳು. ಕೆಲಕ್ಷಣಗಳ ತರುವಾಯ ಅವರಿಗೊಂದು ಕಾಲದಾರಿಯು ಹತ್ತಿತು. ಕೂಡಲೆ ಮನೋರಮೆಯು—ಅಂಬಿಕೆ, ಇದೇ ದಾರಿ ಹಿಡಿದು, ಉತ್ತರದಿಂದ ಸಾಗು. ತಾಸೆರಡುತಾಸು ದಾರಿಕ್ರಮಿಸಿ ಈ ವಿಶಾಲವಾದ ಬೈಲನ್ನು ದಾಟಿದೆಯೆಂದರೆ ನಿನಗೊಂದು ಹಳ್ಳಿಹತ್ತುವದು. ಆ ಹಳ್ಳಿಯನ್ನು ಸೇರಿ ನಾರಾಯಣಶಾಸ್ತ್ರಿಗಳ ಶೋಧ

ಮಾಡಿದರೆ ನಿನಗೆ ಅವರ ಮನೆಯ ಪತ್ತೆ ಹತ್ತುವದು. ಹೊರಡು ಇನ್ನು ವಿಲಂಬಮಾಡಬೇಡ, ಎಂದು ಹೇಳಿ ಅಂಬಿಕೆಯನ್ನು ದಾರಿಗೆ ಹಚ್ಚಿ ತಾನು ಹಿಂದಿರುಗಿ ಬೇರೆ ಕಡೆಗೆ ನಡೆದಳು.

ವಾಚಕರೇ, ಈ ಕಾದಂಬರಿಯ ಮೊದಲನೇ ಪ್ರಕರಣದಲ್ಲಿ ವಿವರಿಸಿದ ಬಾಲಿಕೆಯೇ ಅಂಬಿಕೆಯೆಂದೂ ಅವಳೇ ಆ ಘನವಾದ ಮಳೆಯಲ್ಲಿ ಏಕಾಕಿನಿಯಾಗಿ ಅಷ್ಟು ಶೀಘ್ರಗತಿಯಿಂದ ಸಾಗಿದ್ದಳೆಂದೂ, ನಿಮಗೆ ಬೇರೆ ತಿಳಿಸುವ ಕಾರಣವಿಲ್ಲ.

* * * * *

ಇತ್ತ ಕೇಶವನಿಗೆ ಹೊರಬೀಳಲಿಕ್ಕೆ ಬೇರೆ ಮಾರ್ಗವೇ ಸಿಗದಾಗಲು ಆ ಕಾರಾಗೃಹ ಸದೃಶವಾದ ಮನೆಯಲ್ಲಿ ಸುಮ್ಮನೆ ಕುಳಿತು ಬಿಟ್ಟನು. ಕ್ರಮವಾಗಿ ಕತ್ತಲೆಯು ಹೆಚ್ಚಾಗಿ ಸುತ್ತಲಿನ ಅಡವಿಯೊಳಗಿನ ಹುಳ-ಹುಪ್ಪಡಿಗಳ ಝಿರ್‌ಜಿಟ್ಟೆಂಬ ಸಪ್ಪಳವೂ, ಹಿಂಸ್ರಮೃಗಗಳ ಕೂಗಾಟವೂ ಕಿವಿಗೆ ಬೀಳಹತ್ತಿತು. ಆಕಾಶದಲ್ಲಂತೂ ಕಾರ್ಮೋಡಗಳ ರಹದಾರಿಯು ಉತ್ತರದಿಂದ ಸಾಗಹತ್ತಿದ್ದರಿಂದ ಆ ವಿಶಾಲವಾದ ಹುಲ್ಲುಚಪ್ಪರದ ಕಿಂಡಿಗಳೊಳಗಿಂದ ಕಾಣುತ್ತಿದ್ದ ನಕ್ಷತ್ರಗಳೊಂದೂ ಆಗ ಕಾಣದಾದವು.

ಕೇಶವರಾಯನು ಹೀಗೆ ಅಲ್ಲಿ ಚಿಂತಾಕ್ರಾಂತನಾಗಿ ಸೆರೆಸಿಕ್ಕಿರಲು, ತುಸ ಹೊತ್ತಿನಲ್ಲಿ ಆ ಕತ್ತಲುಕೋಣೆಯ ಹೊರಬವಿಗೆ ಮತ್ತೊಂದು ವ್ಯಕ್ತಿಯು ಎತ್ತಿಂದಲೋ ಬಂದು—ಅಂಬಿಕೆ-ಅಂಬಿಕೆ, ಎಂದು ಮೆಲ್ಲನೆ ಕೂಗಹತ್ತಿತು.

ಆ ಹೊರಗಿನ ವ್ಯಕ್ತಿಯು ಕೂಗುವ ದನಿಯನ್ನು ಕೇಳಿ ಕೇಶವರಾಯನಿಗೆ ಒಳ್ಳೇ ಧೈರ್ಯವುಂಟಾಗಲು, ಅವನು—ಯಾರವರು, ಗೋಪೀಚಂದನೇನು? ಇಲ್ಲಿ ಅಂಬಿಕೆಯಿಲ್ಲ. ನಾನಿರುವೆನು. ಇಲ್ಲಿ ನನ್ನ ಸರ್ವನಾಶವಾಗಿ ಹೋಗಿದೆ, ಎಂದೆನ್ನುತ್ತ ಆ ಕೋಣೆಯ ಬಾಗಿಲ ಒಳಬದಿಗೆ ಬಂದು ನಿಂತು ಒಂದು ದೀರ್ಘವಾದ ನಿಟ್ಟುಸಿರುಗರೆದನು.

ಗೋಪೀಚಂದ:—ತಾವು ಒಳಗೇಕೆ ಕುಳಿತಿರುವಿರಿ? ತಮ್ಮನ್ನು ಹುಡುಕುವದಕ್ಕಾಗಿಯೇ ನಾನು ತಿರುಗುತ್ತಿರುವೆನು: ಬಾಗಿಲ ತೆರೆಯಿರಿ. ನಿಮಗೆ ಹೇಳತಕ್ಕ ವಿಷಯಗಳು ಹಲವಿರುತ್ತವೆ.

ಬಾಗಿಲವು ಹೊರಗಿಂದಲೇ ಇಕ್ಕಲ್ಪಟ್ಟದೆ. ಬೇಗನೆ ತೆರೆ.

ಆ ಕಾರ್ಗತ್ತಲೆಯಲ್ಲಿ ಕೈಯಾಡಿಸುತ್ತ ಗೋಪೀಚಂದನು ಚಿಲಕವನ್ನು ಹುಡುಕಹತ್ತಿದನು. ಚಿಲಕದಮೇಲೆ ಕೀಲೀಹಾಕಿದ್ದದು ಅವನಿಗೆ ಗೊತ್ತಾಯಿತು. ಆಗ ಅವನು—ವೈದ್ಯರಾಜರೇ, ಇದಕ್ಕೆ ಬೀಗ ಹಾಕಿರುವದರಿಂದ ತೆರೆಯುವ ಬಗೆ ಹೇಗೆ? ನಿಮ್ಮಲ್ಲಿ ಕೈ ಇರಬಹುದಾಗಿದೆ; ಕೊಡಿರಿ ತೆರೆಯುವೆನು.

ಕೀಲಿಯಕೈ ನನ್ನಲ್ಲಿರುವದಿಲ್ಲ. ಹೇಗಾದರೂ ಮಾಡಿ ಬೇಗನೆ ಬೀಗವನ್ನು ಮುರಿದು ಬಾಗಿಲ ತೆರೆ.

ಕಡು ಆಶ್ಚರ್ಯದಿಂದ ಗೋಪೀಚಂದನು—ವೈದ್ಯರಾಜರೇ, ಇದೇನಿದು? ನಿಮ್ಮ ಮಾತಿನ ಇತ್ಯರ್ಥವೇ ನನಗಾಗದು.

ಕೇಶವ:—ಅದೇನೇ ಇರಲಿ. ಈಗ ನನ್ನ ಸರ್ವ ನಾಶವಾಗಿದೆ. ಹಕ್ಕಿಯು ಹಾರಿಹೋಗಿದೆ. ಇದರಿಂದ ನನಗೆ ಇಪ್ಪತ್ತೈದು ಸಹಸ್ರದ ಹಾನಿಯಾಗಿದೆ. ಮೊದಲು ಬಾಗಿಲ ತೆರೆ, ಹಿಂದಿನಿಂದ ಸಕಲವೂ ತಿಳಿಯುವದು.

ಗೋಪೀಚಂದನು ಆ ಕೀಲಿ ಮುರಿಯಲಿಕ್ಕೆ ಬಹು ಪ್ರಯತ್ನಿಸಿದನು. ಸಾಧ್ಯವಾಗದಾಗಲು, ಅವನು ಎಲ್ಲಿಂದಲೋ ಒಂದು ನಿಡಿದಾದ ಹಾರಿಯನ್ನು ತಂದು ಚಿಲಕಗಳ ಗೊಣಸುಗಳಲ್ಲಿ ಹಾಕಿ ಮೀಟಿದನು. ಕೂಡಲೆ ಆ ಗೊಣಸು ಇಬ್ಭಾಗವಾಯಿತು. ಬಾಗಿಲವು ತೆರೆಯಲ್ಪಟ್ಟಿತು. ಗೋಪೀಚಂದನು ಒಳಹೊಕ್ಕು ಕೇಶವರಾಯನ ಎದುರಿಗೆಹೋಗಿ ನಿಂತುಕೊಂಡನು.

ಬಳಿಕ ಕೇಶವರಾಯನು ಮನೋರಮೆಯ ಕಾಟದಿಂದ ಅಂಬಿಕೆಯು ಕೈಬಿಟ್ಟ ಸಂಗತಿಯನ್ನು ತನ್ನ ಆ ಸಂಗಡಿಗನಿಗೆ ತಿಳಿಸಿದನು. ಆಗ ಗೋಪೀಚಂದನು—ಆಕೆಯು ಹೊರಟು ಹೋಗಿ ಎಷ್ಟು ವೇಳೆಯಾಯಿತು? ಎಂದು ಪ್ರಶ್ನೆಮಾಡಿದ್ದಕ್ಕೆ "ಅವಳು ಹೋಗಿ ಒಂದು ತಾಸಾಗಿರಬಹುದು. ಹೇಗಾದರೂ ಮಾಡಿ ಅವಳನ್ನು ಮತ್ತೆ ಹಿಡಿತರಲೇಬೇಕು. ಆಕೆಯು ಸಿಗದಿದ್ದರೆ ನನ್ನ ಜಾಲವೆಲ್ಲ ಬಯಲಾಗುವದು. ಮೂರ್ಖಾ, ನೀನು ಈ ಮೊದಲೇ ಬಂದಿದ್ದರೆ ಇಷ್ಟು ಅನರ್ಥವೆಲ್ಲಾಗುತ್ತಿತ್ತು? ನಿನಗೆ ಮರಳಿ ಬರಲಿಕ್ಕೆ ಇಷ್ಟು ವಿಲಂಬವೇಕಾಯಿತು? ನಿನ್ನ ಈ ಅಜಾಗರೂಕತೆಯಿಂದ ನನಗೀಗ ೨೫ ಸಹಸ್ರದ ಹಾನಿ ತಟ್ಟಿತು. ನೀನು ಆಕೆಯನ್ನು ಹುಡುಕಿ ತರದಿದ್ದರೆ ನಿನ್ನ ಶಿರವು ಧಡದ ಮೇಲೆ ಉಳಿಯಲಾರದೆಂಬದನ್ನು ಲಕ್ಷ್ಯದಲ್ಲಿಟ್ಟುಕೋ" ಎಂದು ಕೇಶವರಾಯನು ಸಿಟ್ಟಿನಿಂದ ನುಡಿದನು.

ಇದನ್ನು ಕೇಳಿ ಗೋಪೀಚಂದನೂ ಸಿಟ್ಟಿಗೆದ್ದು--ಹಕ್ಕಿಯೋಡಿಹೋದ ದ್ದರಲ್ಲಿ ನನ್ನದೇನು ತಪ್ಪು?

ಅದು ನಿನ್ನ ತಪ್ಪಾಗಿರದಿದ್ದರೂ, ನೀನು ಬೇಗನೆ ಬಾರದ್ದಕ್ಕೆ ಆ ಹಕ್ಕಿಯು ಓಡಿಹೋಗಲಿಕ್ಕೆ ಅನುವು ದೊರೆಯಿತು.

ನಾನು ಮೂರರೂಸಂಜೆಗೇ ಇಲ್ಲಿಗೆ ಬರತಕ್ಕವನು; ಆದರೆ ಬನವಾಸಿ ಯಿಂದ ೨೫ ಮೈಲು ದಾರಿಯನ್ನು ನಡೆದು ಬರುವದು ಸಾಮಾನ್ಯ ಮಾತಲ್ಲ. ನಾನು ಸಿದ್ಧದೇವಪುರದ ಬಳಿಯ ನಿಮ್ಮ ಮನೆಗೆ ಹೋಗಿ ಬಂದೆನು. ಅದ ರಿಂದಲೂ ತುಸ ವಿಲಂಬವಾಯಿತು. ಅಲ್ಲಿ ನೀವು ಭೇಟಿಯಾಗದ್ದರಿಂದ ಸಮೀಪದ ಹಳ್ಳಿಯ ಆ ನಿಮ್ಮ ಬೇರೆ ಮನೆಗೆ ಹೋದೆನು. ಅಲ್ಲಿಯೂ ಸಿಗ ಲಿಲ್ಲ. ಅತ್ತಿತ್ತ ಹುಡುಕಿ ಹುಡುಕಿ ಬೇಸತ್ತು ಕಡೆಗೆ ಇಲ್ಲಿಗೆ ಬಂದೆನು. ಇಷ್ಟು ದಾರಿ ನಡೆದು ಬಂದು ನಿಮ್ಮ ಇಚ್ಛೆಯಂತೆ ನಡೆದರೂ ನನ್ನದೇ ತಪ್ಪೇನು?

ಅದಿರಲಿ ಗೋಪೀಚಂದಾ, ನಾನು ನಿನ್ನನ್ನು ಯಾವ ಕೆಲಸಕ್ಕೆ ಕಳಿಸಿ ದ್ದೆನೋ ಅದೇನಾಯಿತು, ಮೊದಲು ಹೇಳು.

ನಾನು ಅವರಿಗೆ ಭೆಟ್ಟಿಯಾಗಿ ನೀವು ಕೊಟ್ಟ ಜೀನಸನ್ನು ಒಪ್ಪಿಸಿ ದೆನು. ಅದನ್ನು ಕಂಡು ಅವರು ಅಷ್ಟೊಂದು ಪ್ರಸನ್ನವಾಗಲಿಲ್ಲ.

ಹಣದ ವಿಷಯವೇನಾಯಿತು?

ಆ ಬಗ್ಗೆಯೂ ಗೊಂದಲವೇ ಉಂಟಾಯಿತು ನಿಮಗೆ ಒಪ್ಪಿಸಿದ ಎರಡೂ ಕೆಲಸಗಳನ್ನು ಕೊನೆಗಾಣಿಸಿದ ನಂತರವೇ ಅವರು ಹಣ ಕೊಡುವ ರಂತೆ. ಅಲ್ಲಿಯವರೆಗೆ ಒಂದು ಪೈ ಕೂಡ ದೊರೆಯಬಾರದಂತೆ. ಎರಡೂ ಕೆಲಸಗಳಿಗೆ ಕೂಡಿ ೨೫ ರ ಮಾತಾಗಿದೆಯಂತೆ. ಒಂದಕ್ಕೆ ಈಗ ಕೆಲವು ಕೊಟ್ಟರೆ ಇನ್ನೊಂದನ್ನು ಮಾಡದಿದ್ದರೆ ಮಾಡುವದೇನೆಂದು ಅನ್ನುತ್ತಾರೆ.

ಹಾಗಾದರೆ ಇಷ್ಟು ಶ್ರಮ ಇಷ್ಟು ಸಾಹಸಗಳನ್ನು ಮಾಡಿದ್ದೆಲ್ಲ ವ್ಯರ್ಥವೇ ಆಯಿತೇ? ಆದರೆ ಗೋಪೀಚಂದಾ, ಈ ವೈದ್ಯರಾಜನು ಸಾ- ಮಾನ್ಯ ಪ್ರಾಣಿಯಲ್ಲೆಂಬದನ್ನು ನಿನಗೆ ಬಿಚ್ಚಿ ಹೇಳುವ ಕಾರಣವಿಲ್ಲ, ಎಂದಂದು ಕೇಶವರಾಯನು ಕ್ಷಣಕಾಲ ಸುಮ್ಮನೆ ಕುಳಿತು ಬಳಿಕ— ಗೋಪೀಚಂದಾ, ಇಂದು ನೀನು ಬಹಳ ದಣಿದಿರುವದೇನೋ ನಿಜ; ಆದರೆ ಈ ಸಮಯದಲ್ಲಿ ಅದನ್ನೆಲ್ಲ ನೋಡುವ ಹಾಗಿಲ್ಲ. ಬೇಗನೆ ಹೋಗಿ ಅಂಬಿಕೆ

ಯನ್ನು ಹಿಡಿದುಕೊಂಡು ಬಾ. ಜೀವದಿಂದ ತರುವದಾಗದಿದ್ದರೆ ಅವಳ ಕೊಲೆಮಾಡಿಯಾದರೂ ಆಕೆಯ ದೇಹವನ್ನು ಹೊತ್ತುಕೊಂಡು ಬಾ. ಆಕೆಯನ್ನು ತರದಿದ್ದರೆ ನಾನೀಗ ೨೫ ಸಹಸ್ರಕ್ಕೆ ಎರವಾಗಬೇಕಾಗುತ್ತದೆ ನೋಡು. ನಾನೂ ನನ್ನ ಆ ಚಿರಶತ್ರುವಾಗಿರುವ ಮನೋರಮೆಯನ್ನು ಶೋಧಿಸಿ ಕೊಲೆ ಮಾಡುವೆನು. ಇಂದು ಆಕೆಯಿಂದಲೇ ನನಗೀ ದುರವಸ್ಥೆಯು ಪ್ರಾಪ್ತವಾಗಿರುತ್ತದೆ, ಎಂದೆನ್ನುವಷ್ಟರಲ್ಲಿ ಹೊರಗಿನ ಸಮೀಪದ ಅಡವಿಯೊಳಗಿಂದ ಎತ್ತಿಂದಲೋ,

"ವಿನಾಯಕಾ, ನಿನ್ನ ಚಿರಶತ್ರುವಾದ ನನ್ನನ್ನು ಹುಡುಕಲಿಕ್ಕೆ ಶ್ರಮ ಪಡುವ ಕಾರಣವಿಲ್ಲ. ನಾನು ಇಲ್ಲಿಯೇ ಇರುತ್ತೇನೆ. ನಿನ್ನನ್ನಗಲಿ ನಾನು ಒಂದು ಕ್ಷಣವೂ ಬೇರೆ ಕಡೆಗಿರುವದಿಲ್ಲ. ಸದಾಸರ್ವದಾ ನಿನ್ನ ಸಂಧಾನ ದಲ್ಲಿಯೇ ಇರುತ್ತೇನೆ. ನಾನು ದೂರದಲ್ಲಿದ್ದರೆ ನಿನ್ನ ವೈರಿಯಾದರೂ ಯಾಕಾಗಬೇಕು?" ಎಂದು ಸ್ತ್ರೀಕಂಠದಿಂದ ಹೊರಟ ಧ್ವನಿಯು ಕೇಳಿಸಿತು.

ಈ ಕಥಾನಕದ ಎರಡನೇ ಪ್ರಕರಣದಲ್ಲಿ ಹೇಳಿದ ಮನೋರಮೆಯು ಮನೋರಮುತ್ತವನ್ನು ನಾಶಮಾಡಿದ್ದ ವಿನಾಯಕನೂ, ಅಂಬಿಕೆಯನ್ನು ಭ್ರಷ್ಟಗೊಳಿಸಲು ಪ್ರಯತ್ನಿಸಿದ್ದ ಕೇಶವರಾಯನೂ, ಗೋಪೀಚಂದನಿಂದ ಸಂಬೋಧಿಸಲ್ಪಡುತ್ತಿದ್ದ ವೈದ್ಯರಾಜನೂ ಒಬ್ಬ ವ್ಯಕ್ತಿಯೇ ಆಗಿದ್ದನು.

ಕಂಠಸ್ವರದಿಂದ ಇವಳು ಮನೋರಮೆಯೇ ಎಂಬದನ್ನು ಕೇಶವ ರಾಯನು ಅರಿತುಕೊಂಡನು; ಆದರೆ ಸುತ್ತಲೂ ಭೀಕರವಾದ ಅಂಧಕಾರ, ಭಯಂಕರವಾದ ಅರಣ್ಯ; ಮೇಲಾಗಿ ಸರವುಗಟ್ಟಿ ಮಳೆ ಬೀಳಹತ್ತಿದೆ. ಇಂಥ ಸ್ಥಿತಿಯಲ್ಲಿ ಮನೋರಮೆಯು ಯಾವ ದಿಕ್ಕಿನಲ್ಲಿ ಎಷ್ಟು ದೂರಿರುವ ಳೆಂಬದು ಅವನಿಗೆ ತೋಚದಾಯಿತು. ಆದರಿಂದ ನಿರುಪಾಯನಾಗಿ ಅವನು ಕೆಲ ಹೊತ್ತಿನವರೆಗೆ ನಿಂತಲ್ಲಿಯೇ ನಿಂತುಬಿಟ್ಟನು.

"ನನ್ನನ್ನು ಹುಡುಕಲಾರದವನಾಗಿರುವೆಯಷ್ಟೇ; ಇಗೋ ನಿನ್ನೆದುರಿಗೇ ನಾನು ಬಂದಿರುತ್ತೇನೆ ಏನು ಮಾಡಬೇಕೆಂದಿರುವೆಯೋ ಮಾಡು" ಎಂದೆನ್ನುತ್ತ ಪಾರ್ಶ್ವದ ಅರಣ್ಯದೊಳಗಿಂದ ಹೊರಬಿದ್ದು, ಮನೋರಮೆಯು ಕೇಶವರಾಯನ ಸಮ್ಮುಖದಲ್ಲಿ ಬಂದು ನಿಂತಳು. ಆಗ ಕ್ರೋಧಸಂತಪ್ತ ವಾದ ಸಿಂಹದಂತೆ ಗರ್ಜಿಸಿ ಕೇಶವನು ಅವಳನ್ನು ಹಿಡಿಯಹೋದನು; ಆದರೆ ಮನೋರಮೆಯು ಪುನಃ ಆ ಕಾಡಿನಲ್ಲಿ ಎತ್ತೋ ಮಾಯವಾದ್ದ

ರಿಂದ ಅವನ ಕೈಗೆ ಸಿಗಲಿಲ್ಲ. ಆ ಕಾಡಿನಲ್ಲಿ ಕೇಶವರಾಯನೂ, ಗೋಪೀಚಂದನೂ ಮನೋರಮೆಯನ್ನು ಬಹಳವಾಗಿ ಶೋಧಿಸಿದರು. ಪುನಃ ಅವರಿಗೆ ಅವಳ ಸುಳುವೇ ಹತ್ತಲಿಲ್ಲ

ನಂತರ ಕೇಶವನು ಗೋಪೀಚಂದನನ್ನು ಕುರಿತು—ಒಂದು ಕೆಲಸಕ್ಕಾಗಿ ಇಬ್ಬರು ತೊಡಗುವದು ಸರಿಯಲ್ಲ. ನೀನು ಹೇಗಾದರೂ ಮಾಡಿ ಅಂಬಿಕೆಯನ್ನು ಹಿಡಿದುಕೊಂಡು ಬಾ. ನಾನು ಈ ಪಿಶಾಚಿಸದೃಶಳಾದ ಮನೋರಮೆಯನ್ನು ಕೊಲ್ಲದೆ ಇಂದು ಬೇರೆ ಕೆಲಸಕ್ಕೇ ಕೈ ಹಾಕುವದಿಲ್ಲ. ಹೂ, ನಡೆ; ಎಂದು ಗರ್ಜಿಸಲು, ಗೋಪೀಚಂದನು ಆ ನಿಬಿಡವಾದ ಕತ್ತಲೆಯಲ್ಲಿ ಅಂಬಿಕೆಯ ಶೋಧಕ್ಕಾಗಿ ತೆರಳಿದನು.

ಈ ಕಾದಂಬರಿಯ ಮೊದಲನೇ ಪ್ರಕರಣದಲ್ಲಿ ಬಲವಂತಾದಿಗಳಿಗೆ ಕಾಣಿಸಿಕೊಂಡ ದಸ್ಯುಸದೃಶನಾದ ಪುರುಷನೇ ಈ ಗೋಪೀಚಂದನು. ಕೇಶವನ ಸಹಾಯಕನಾದ ಈ ಸಂಗಡಿಗನೇ ತನ್ನ ಕೈಯಲ್ಲಿ ನಿಡಿದಾದ ಕತ್ತಿಯನ್ನು ಹಿಡಿದುಕೊಂಡು ಆ ಹಳ್ಳಿಯ ದಕ್ಷಿಣದಿಕ್ಕಿನ ಕಡೆಯ ಸರೋವರದ ದಂಡೆಹಿಡಿದು ನಾರಾಯಣಶಾಸ್ತ್ರಿಗಳ ಮನೆಗೆ ಧಾವಿಸುತ್ತ ನಡೆದಿದ್ದ ಅಂಬಿಕೆಯನ್ನು ಹಿಂಬಾಲಿಸಿ ನಡೆದವನು.

---

## ೬ ಅನುಸಂಧಾನ.

ವಾಚಕರೇ, ಕೇಶವರಾಯ, ಗೋಪೀಚಂದ, ಮನೋರಮೆಯರ ಮುಂದಿನ ಸಂಗತಿಯನ್ನು ತಿಳಿಯುವ ಮೊದಲು, ಆ ಹಳ್ಳಿಯ ಸರೋವರದ ಬದಿಯ ಅರಣ್ಯದಲ್ಲಿ ಬಲವಂತಾದಿಗಳಿಗೆ ದೊರೆತಿದ್ದ ರಕ್ತಪೂರ್ಣ ಅರಿವೆ, ಚೂರಿ, ಬೆಳ್ಳಿಯ ಅಕಡಾಗಳ ಸಂಗತಿಯೇನೆಂಬದನ್ನು ಮೊದಲು ತಿಳಿಯುವಾ.

ಮರುದಿನ ಬೆಳಗಾಗುತ್ತಲೆ ಆ ಸುದ್ದಿಯು ಆ ಹಳ್ಳಿಯೊಳಗಿನ ಪ್ರತಿಯೊಬ್ಬನ ಬಾಯಲ್ಲಿ ಗಣಿತಶ್ರೇಢಿಯಂತೆ ವಿಸ್ತೃತವೂ, ಕೇಳಲು ಅತಿ ಭಯಾನಕವೂ ಆಗಿ ಪರಿಣಮಿಸಿತು. ಕಡೆಗೆ ಆ ವರ್ತಮಾನವು ಗ್ರಾಮಸ್ಥರ ಮುಖಾಂತರ ಸಮೀಪದ ಸಿದ್ಧದೇವಪುರದ ಪೋಲೀಸ ಅಮಲ್‌ದಾರರಿಗೂ ಗೊತ್ತಾಯಿತು. ಕೂಡಲೆ ಪೋಲೀಸರ ಮುರುವತ್ತಿನಿಂದ ನಮ್ಮ ಪಂತನು

ಆ ಪ್ರಕರಣದ ಶೋಧಕ್ಕಾಗಿ ಆ ಹಳ್ಳಿಗೆ ಹೋದನು. ಅವನ ಸಂಗಡ ಜೇಲರ ಭುಜಂಗರಾಯರೂ ಹತ್ತೆಂಟುಜನ ಸಶಸ್ತ್ರಪೋಲೀಸರೂ ಹೊರಟರು.

ಆ ಹಳ್ಳಿಗೆ ಹೋಗಿ ಪಂತನು ಆ ರಕ್ತವಸ್ತ್ರ ಮೊದಲಾದವುಗಳನ್ನು ಎಲ್ಲಕ್ಕೂ ಮೊದಲು ನೋಡಿದ್ದ ಬಲವಂತಶೇಣ್ವಿಯೇ ಮೊದಲಾದವರ ಜವಾಬುಗಳನ್ನು ಬರೆದುಕೊಂಡನು. ಅವರು ತಾವು ಕಂಡದ್ದನ್ನು ಕಂಡಂತೆಯೇ ಸ್ಪಷ್ಟವಾಗಿ ತಿಳಿಸಿದರು. ಅದರಿಂದ ಅವರಿಗೆ ಯಾವ ತರದ ತೊಂದರೆಯಾಗಲಿ, ಪಂತನಿಗೆ ಯಾವ ತರದ ಸಂಶಯವಾಗಲಿ ಉಂಟಾಗಲಿಲ್ಲ. ಎಲ್ಲಿ ಸಂಶಯಗ್ರಸ್ತ ಹಾಗು ಸುಳ್ಳಿನ ವಿಷಯಗಳು ಹೊರಡುವವೋ ಅಲ್ಲಿಯೇ ಅಲ್ಲವೆ ಮಹಾತೊಂದರೆಗಳುತ್ಪನ್ನವಾಗುವದು? ಆದರೆ ನಾರಾಯಣ ಶಾಸ್ತ್ರಿಗಳ ಜವಾಬು ಅಷ್ಟೊಂದು ಸರಳವಾಗಲಿಲ್ಲ. ಅದರಿಂದಲೇ ಪಂತಾದಿಗಳಿಗೆ ಹೆಚ್ಚು ಸಂಶಯವುಂಟಾಗಲು, ಅವರು ಶಾಸ್ತ್ರಿಗಳನ್ನು ಕುರಿತು—

ಶಾಸ್ತ್ರಿಗಳೇ, ನೀವು ನಿನ್ನಿನ ಅಂಥ ಅಂಧಕಾರದ, ಘನವಾದ ಮಳೆಯ ಅಪರಾತ್ರಿಯಲ್ಲಿ ಅದೆಲ್ಲಿಗೆ ಹೊರಟಿದ್ದಿರಿ? ಎಂದು ಪ್ರಶ್ನಮಾಡಿದರು.

ನಾರಾ:—ನಾನು ನಿನ್ನೆ ರಾತ್ರಿ ಅಗತ್ಯದ ಕೆಲಸಕ್ಕಾಗಿ ಸಮೀಪದ ಹಳ್ಳಿಯಲ್ಲಿರುವ ನಮ್ಮ ತಂಗಿಯ ಮನೆಗೆ ಹೋಗಿದ್ದೆನು.

ಪಂತ:—ಅಲ್ಲಿಂದ ಮರಳಿ ಬರುವಾಗ ನೀವೇ ಈ ರಕ್ತಪೂರ್ಣ ಅರಿವೆ ಮುಂತಾದವುಗಳನ್ನು ಎಲ್ಲಕ್ಕೂ ಮೊದಲು ನೋಡಿದಿರಷ್ಟೇ? ಅಥವಾ ನಿಮ್ಮಗೂಡ ಬಂದಿದ್ದ ಮತ್ತಾರಾದರೂ ಇವನ್ನು ನಿಮಗೆ ತೋರಿಸಿದರೋ?

ನಾರಾ:—ನನ್ನ ಕೂಡ ಆಗ ಮತ್ತಾರೂ ಬಂದಿರಲಿಲ್ಲ. ನಾನೇ ಇವನ್ನು ನೋಡಿದೆನು.

ಪಂತ:—ಅದರಲಿ, ನೀವು ಇವನ್ನು ನೋಡುವ ಮೊದಲು, ಆ ಕಾಡಿಗೆ ಹೋಗಿದ್ದಿರಾ?

ನಾರಾ:—ಇಲ್ಲ. ಸರಳ ಮಾರ್ಗವನ್ನು ಬಿಟ್ಟು ನಾನು ಆ ಅಡವಿಯಲ್ಲೇಕೆ ಹೋಗಬೇಕು?

ಪಂತ:—ಹಾಗಾದರೆ ಆ ನಿಬಿಡವಾದ ಕತ್ತಲೆಯಲ್ಲಿ ದಾರಿಯಿಂದ ಅಷ್ಟು ದೂರ ಕಾನಿನಲ್ಲಿದ್ದ ಈ ಪದಾರ್ಥಗಳು ನಿಮಗೆ ಆಗ ಹೇಗೆ ಕಂಡವು?

ನಾರಾ:—ಆಗ ಆಗಾಗ್ಗೆ ಮಿಂಚುತ್ತಿದ್ದಿಲ್ಲವೇ? ಆ ಮಿಂಚಿನ ಬೆಳಕಿನಲ್ಲಿ ಕಂಡವು.

ಪಂತ:—ಆ ಮಿಂಚಿನ ಪ್ರಕಾಶದಲ್ಲಿ ನಿಮಗವು ಕಂಡವೆಂದು ತಿಳಿದರೂ ಬಲವಂತಾದಿಗಳಿಗೆ ಅವನ್ನು ತೋರಿಸುವ ಮೊದಲು ನೀವು ಅವುಗಳ ಬಳಿಗೊಮ್ಮೆ ಹೋಗಿದ್ದಿರಷ್ಟೇ?

ನಾರಾ:—(ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಸುಮ್ಮನೆ ವಿಚಾರಗ್ರಸ್ತನಾದನು.)

ಪಂತ:—ಶಾಸ್ತ್ರಿಗಳೇ, ಈ ನನ್ನ ಪ್ರಶ್ನೆಯಲ್ಲಿ ವಿಚಾರಮಾಡತಕ್ಕಂಥ ಗಹನ ವಿಷಯವೇನಿದೆ? ನಡೆದ ಸಂಗತಿಯನ್ನು ಯಥಾರ್ಥವಾಗಿ ಹೇಳಬಾರದಿರಾ?

ನಾರಾ:—ಇಲ್ಲ. ಹಾಗೇನೂ ಇಲ್ಲ, ಎಂದೆನ್ನುತ್ತ ಸಿಟಿಗುಟ್ಟಹತ್ತಿದನು.

ಪಂತ:—ಶಾಸ್ತ್ರಿಗಳೇ, ನಿಮಗೆ ಏನಿಲ್ಲೆಂದರೂ ಈಗ ೫೦ರ ಮೇಲೆ ವಯಸ್ಸಾಗಿದೆ, ಈ ಇಳಿವಯಸ್ಸಿನಲ್ಲಿ ವನಮಧ್ಯದೊಳಗೆ ದಾರಿಯಿಂದ ಬಹು ದೂರದಲ್ಲಿದ್ದ ಈ ಅರಿವೆ ಮೊದಲಾದ ಸಣ್ಣಪುಟ್ಟ ಪದಾರ್ಥಗಳು, ನಿನ್ನಿನ ಆ ಅಖಂಡವಾದ ಮಳೆಯಲ್ಲಿ ಮಿಂಚಿನ ಬೆಳಕಿನಿಂದ ಚೆನ್ನಾಗಿ ಕಾಣಿಸಿಕೊಂಡವಲ್ಲವೆ? ಬರೇ ಮಿಂಚಿನ ಪ್ರಕಾಶವೇ ಏಕೆ, ಇದರ ಹತ್ತರ ಬಿಜಲೀದೀಪವನ್ನು ಹಿಯ್ದರೂ ಈ ಅರಿವೆಯ ತುಂಡು ಕಾಣಿಸಲಾರದಾಗಿದೆ. ಇಂಥ ಸ್ಥಿತಿಯಲ್ಲಿ ಇದು ರಕ್ತಪೂರ್ಣವಾಗಿದೆಯೆಂಬದು ಆ ಮಿಂಚಿನ ಕ್ಷಣಿಕ ಪ್ರಕಾಶದಲ್ಲಿ ನಿಮಗೆ ಹೇಗೆ ಗೊತ್ತಾಯಿತು? ನಿಮ್ಮ ಮಾತಿನಲ್ಲಿ ನಿಮಗಾದರೂ ವಿಶ್ವಾಸವುಂಟಾಗುವದೋ?

ನಾರಾ:—ನನ್ನಂಥ ವೃದ್ಧ ಶಾಸ್ತ್ರಜ್ಞನು ಈ ಕ್ಷುಲ್ಲಕ ಮಾತಿನ ಬಗ್ಗೆ ಸುಳ್ಳಾಡುವೆನೆಂದು ನಿಮಗೆ ತೋರಿದ್ದೇ ಕಲಿಯ ಮಾಹಾತ್ಮ್ಯವು. ದೇವಾ, ಈ ಕಲಿಯುಗದಲ್ಲಿ ನಮ್ಮಂಥ ಸಜ್ಜನರು ಬಾಳುವ ಬಗೆ ಹೇಗೆ?

ಪಂತ:—ಶಾಸ್ತ್ರಿಗಳೇ, ಇದು ಪೋಲೀಸ ಕಚೇರಿಯು ನಿಮ್ಮ ಹುಚ್ಚುಚ್ಚಾರವನ್ನು ಕಟ್ಟಿಡಿರಿ. ಎಲ್ಲಿಯವರೆಗೆ ನಿಮ್ಮ ಮಾತುಗಳೊಳಗೆ ಅಸಂಬದ್ಧತನವೂ, ಗೋಪನ ಗೌಪ್ಯವೂ ನಮಗೆ ತೋರಿ ಬರುವವೋ ಅಲ್ಲಿಯವರೆಗೆ ನಾವು ನಿಮ್ಮ ಮಾತಿನಲ್ಲಿ ವಿಶ್ವಾಸವಿಡುವದಿಲ್ಲ ಕಂಡದ್ದನ್ನು ಸ್ಪಷ್ಟವಾಗಿ ನುಡಿಯಿರಿ. ನೀವು ನಿಜಸಂಗತಿಯನ್ನು ಹೇಳುವವರೆಗೆ ನಾವು ನಿಮ್ಮಲ್ಲಿ ಸಂಶಯ ತಾಳುವದೇ ಖಂಡಿತವು.

ಆಗ ನಾರಾಯಣಶಾಸ್ತ್ರಿಯು ಸಿಟ್ಟಿನಿಂದ;—ಪಂತರೇ, ಆ ಕೋಳಿ

ವಾಗುತಲಿತ್ತು; ಆದರೆ ಇದರ ಮೇಲೆ ಸಿಂಪಡಿಸಲ್ಪಟ್ಟ ಕರ್ತವನ್ನು ನೋಡಿ ದರೆ, ಇದು ಕೃತ್ರಿಮ ಪ್ರಮಾಣವೆಂದು ಸಹಜವಾಗಿ ತಿಳಿದುಬರುತ್ತದೆ. ಇದಲ್ಲದೆ ಆ ಬಾಲಿಕೆಯನ್ನು ಕೊಂದಂಥ ಕೊಲೆಗಾರನು ಆಕೆಯ ವಸ್ತ್ರ ವನ್ನು ಬಿಚ್ಚಿ ಒಗೆಯುವ ಕಾರಣವಿಲ್ಲ. ಬಿಚ್ಚಿ ಒಗೆದರೂ ಅದನ್ನು ಸಂ-ಪೂರ್ಣವಾಗಿ ಒಗೆಯಬಹುದಾಗಿತ್ತು. ಹೀಗೆ ಸೀರೆಯ ಒಂದು ಕಡೆಯ ಸೆರಗನ್ನೇ ತುಂಡರಿಸಿ ಚೆಲ್ಲುವ ಕಾರಣವೇನಿತ್ತು?

ಭುಜಂಗ:—ಆ ಬಾಲಿಕೆಯ ಕೊಲೆಯೇ ಆಗಿರದೆ, ಅವಳು ಜೀವಂತ ಳಿರುವಳೆಂದು ನಿಮ್ಮ ಮನೋದೇವತೆಯು ನಿಮಗೆ ಹೇಳುತ್ತಿದ್ದರೆ ನೀವು ಪಾಪ! ಆ ನಾರಾಯಣಶಾಸ್ತ್ರಿಯ ಮೇಲೆ ಅಷ್ಟೇಕೆ ಹರಿಹಾಯ್ದಿರಿ?

ಪಂತ:—ಕೊಲೆಯಾಗಿಲ್ಲೆಂದು ಯಾರಲ್ಲೂ ಸಂಶಯಪಡಬಾರದೆಂದು ನಿಮ್ಮ ಅಭಿಪ್ರಾಯವೇ? ನಾನು ಆ ಶಾಸ್ತ್ರಿಯನ್ನು ಕೊಲೆಗಾರನೆಂದು ಅನುಮಾನಿಸಿಲ್ಲ ಈ ಪ್ರಕರಣದ ಒಂದಿಲ್ಲೊಂದು ಸಂಗತಿಯು ಅವನಿಗೆ ತಿಳಿದಿದ್ದು, ಅದನ್ನು ಅವನು ಗುಪ್ತವಿರಿಸಲು ಪ್ರಯತ್ನಿಸುವನೆಂದು ನಾನು ಅವನ ಮೇಲೆ ರೇಗಿಗೆದ್ದೆನು. ಹಾಗಿಲ್ಲದಿದ್ದರೆ ಅವನಾದರೂ ಅಷ್ಟು ಮುಚ್ಚು ಮರೆ ಮಾಡುವದೇಕೆ? ಅವನು ಆ ವನದೊಳಗೆ ಒಮ್ಮೆಯೇ ಹೋದ ದ್ದೆಂದು ಹೇಳುತ್ತಾನೆ; ಆದರೆ ಅಲ್ಲಿಗೆ ಬಂದುಹೋದ ಅವನ ಹೆಜ್ಜೆಗಳ ಗುರುತಿನಿಂದ ಅವನು ಅಲ್ಲಿಗೆ ಎರಡುಸಾರೆ ಹೋಗಿ ಬಂದಂತೆ ಗೊತ್ತಾಗು ತ್ತದೆ; ಮತ್ತು ಈ ಚೂರಿಯು ಕೊಲೆಗಾರನದೆಂದೇ ಭಾವಿಸಿದರೂ ಇದಕ್ಕೆ ಆ ಬಾಲಿಕೆಯ ಒಂದು ಬಿಂದುವಿನಷ್ಟು ರಕ್ತ ಕೂಡ ಹತ್ತಿರುವದಿಲ್ಲವಲ್ಲ?

ಭುಜಂಗ—ನಿನ್ನೆ ರಾತ್ರಿಯ ಪ್ರಚಂಡ ಮಳೆಯ ಹೊಡತದಿಂದ ಅದಕ್ಕೆ ಹತ್ತಿದ್ದ ರಕ್ತವೆಲ್ಲ ತೊಳೆದು ಹೋಗಿರಬಹುದು.

ಪಂತ—ರಾಯರೇ, ನಿಮ್ಮ ಈ ಮಾತಿನಲ್ಲಿ ಎಷ್ಟು ತಥ್ಯಾಂಶವಿರುವ ದೆಂಬದನ್ನು ಇನ್ನು ಪರೀಕ್ಷಿಸೋಣ. ನೀವಂದಂತೆ ಮಳೆಯ ಹೊಡತ ದಿಂದ ಈ ಚೂರಿಯ ಯಾವ ಮಗ್ಗಲು ಮೇಲಾಗಿತ್ತೋ ಅದು ತೊಳೆದು ಹೋಗಿರಬಹುದಾಗಿದೆ; ಆದರೆ ಕೆಳಗಡೆಯಭಾಗದ ರಕ್ತವೆಲ್ಲಿಹೋಯಿತು? ಇನ್ನು ಅತ್ತಣ ರಕ್ತವೂ ಕೆಳಗಿನ ನೀರಿನ ಪ್ರವಾಹದಿಂದ ಕೊಚ್ಚಿಕೊಂಡು ಹೋಯಿತೆಂದು ಭಾವಿಸಿದರೆ, ಈ ಅರವಿಯ ಮೇಲಿನ ರಕ್ತಬಿಂದುವಿನ ಮೇಲೆ ಮಳೆಯದೊಂದೂ ಹನಿಯು ಬೀಳಬಾರದೇನು? ಇದರ ಮೇಲಿಂದ

ಈ ಚೂರಿಯು ಆ ಕೊಲೆಯ ಕಾಂಡದಲ್ಲಿ ಸಮಾವಿಷ್ಟವಾದದ್ದಲ್ಲ. ಇದನ್ನು ಬೇಕೆಂತಲೇ ಈ ರಕ್ತಲೇಪ ಅರವಿಯ ಬಳಿಯಲ್ಲಿ ತಂದು ಚೆಲ್ಲಿರುವರು. ಇನ್ನು ಈ ಬೆಳ್ಳಿಯ ಅಕಡಾಗಳ ವಿಷಯವಾಗಿ ನನಗುಂಟಾದ ಅನುಮಾನ ವನ್ನಷ್ಟು ನಿಮ್ಮ ಮುಂದಿಡುತ್ತೇನೆ. ಈ ಅಕಡಾಗಳು ಮೊನ್ನೆ ಜೇಲಿನಲ್ಲಿ ತಂದಿರಿಸಿದ್ದ ಆ ಪೆಟ್ಟಿಗೆಯೊಳಗಿನ ಬಾಲಿಕೆಯ ಹೆಣದ ಹೆಳಲಲ್ಲಿದ್ದ ಅಕಡಾ ಗಳನ್ನು ಹೆಚ್ಚಾಗಿ ಹೋಲುತ್ತಿದ್ದು, ಅವುಗಳೂ ಇವುಗಳೂ ಒಬ್ಬ ಅಗೆ ಸಾಲಿಗನ ಮಾಟಗಳೆಂದೇ ತೋರುತ್ತದೆ. ಆದುದರಿಂದ ಆ ಬಾಲಿಕೆಯ ಕೊಲೆಗೂ ಇಂದಿನ ಈ ಪ್ರಕರಣಕ್ಕೂ ಏನೋ ಸಂಬಂಧವಿರುವಂತೆ ಅನು ಮಾನವುಂಟಾಗುತ್ತದೆ. ಇಗೋ ನೋಡಿರಿ, ಆ ಪೆಟ್ಟಿಗೆಯೊಳಗಿನ ಬಾಲಿ ಕೆಯ ಶವದ ಹೆಳಲೊಳಗಿನ ಅಕಡಾಗಳನ್ನು. ನಾನು ಅಂದೇ ಇವನ್ನು ಮಾದರಿಗಾಗಿ ನನ್ನಲ್ಲಿ ತೆಗೆದಿಟ್ಟಿದ್ದೆನು. ಅವಕ್ಕೂ ಇವಕ್ಕೂ ಎಷ್ಟು ಸಾಮ್ಯವಿದೆಯೆಂಬದನ್ನು ನೀವೇ ಹೋಲಿಸಿ ನೋಡಿಕೊಳ್ಳಿರಿ, ಎಂದೆಂದು ತನ್ನ ಬಕ್ಕಣದೊಳಗಿನ ಮತ್ತೆ ಎರಡು ಬೆಳ್ಳಿಯ ಅಕಡಾಗಳನ್ನು ತೆಗೆದು ಭುಜಂಗರಾಯನ ಎದುರಿಗೆ ಇಟ್ಟನು.

ಭುಜಂಗರಾಯನು ಚೆನ್ನಾಗಿ ಪರೀಕ್ಷಿಸಿ ನೋಡಿ:—ಪಂತರೇ, ನಿಮ್ಮ ಅನುಮಾನವು ಯಥಾರ್ಥವಾದದ್ದು.

ಬಳಿಕ ಪಂತನು ತನ್ನ ನೋಟಬುಕ್ಕಿನೊಳಗಿನ ಒಂದು ಅರಿವೆಯ ಚಿಕ್ಕ ತುಂಡನ್ನು ಹೊರಗೆ ತೆಗೆದು ಭುಜಂಗರಾಯನ ಕೈಗೆ ಕೊಟ್ಟು—ಈ ಅರಿವೆಯ ತುಂಡನ್ನು ನಾನು ಜೇಲಿನಲ್ಲಿಯ ಪೆಟ್ಟಿಗೆಯೊಳಗಿನ ಬಾಲಿಕೆಯ ಶವದ ಸೀರೆಯ ಹರಕ ಸೆರಗಿನಿಂದ ತೆಗೆದುಕೊಂಡಿದ್ದೆನು. ಈ ತುಂಡೂ ಈಗ ಸಿಕ್ಕಿರುವ ಈ ರಕ್ತಲೇಪಿತ ತುಂಡೂ ಒಂದೇ ಸೀರೆಯಿಂದ ತೆಗೆದವೋ ಅಲ್ಲವೋ ಎಂಬದನ್ನು ಚೆನ್ನಾಗಿ ಪರೀಕ್ಷಿಸಿ ಹೇಳಿರಿ.

ಜೇಲರ ಭುಜಂಗರಾಯನು ಪಂತನ ವಿಚಕ್ಷಣ ಬುದ್ಧಿಗೆ ತಲೆದೂಗಿ ದನು; ಹಾಗು ಅಲ್ಲಿ ತಂದಿಡಲ್ಪಟ್ಟಿದ್ದ ಆ ಚೂರಿ, ರಕ್ತಪೂರ್ಣ ಅರಿವೆ ಅಕಡಾ ಮುಂತಾದ ಸಾಮಾನುಗಳನ್ನು ಸಶಸ್ತ್ರ ಪೋಲೀಸರ ಪಹರೆಯ ಜೇಲಖಾನೆಗೆ ಕಳಿಸಿ, ತಾನು ಪಂತನೊಡನೆ ಬಿಡಾರದ ಕಡೆಗೆ ತಿರಳಿದನು



## ೭ ಛದ್ಮವೇಷ.

ಮರುದಿನ ಮಧ್ಯಾಹ್ನದಲ್ಲಿ ಪಂತನು ಒಬ್ಬನೇ ತನ್ನ ಮನೆಯಿಂದ ಹೊರಬಿದ್ದನು. ಅವನು ಮತ್ತೆಲ್ಲಿಗೂ ಹೋಗದೆ ಆ ಹಳ್ಳಿಯ ನಾರಾಯಣ ಶಾಸ್ತ್ರಿಯ ಮನೆಗೆ ನಡೆದನು. ಆಚೇ ಕೇರಿಯ ನಾರಾಯಣಶಾಸ್ತ್ರಿಯ ಮನೆಯು ಅಷ್ಟೊಂದು ವಿಸ್ತೃತವಾದದ್ದಲ್ಲ. ಅದರಲ್ಲಿ ನಾಲ್ಕಾರೇ ಚಿಕ್ಕ ಚಿಕ್ಕ ಕೋಣೆಗಳಿದ್ದವು. ಅದು ಹಳೆಯ ಮನೆಯಾಗಿದ್ದುದರಿಂದ ಆ ಮಲೆನಾಡಿನಲ್ಲಿ ಅದಕ್ಕೆ ಅಲ್ಲಲ್ಲಿ ಸೌಳು ಹಿಡಿದಿತ್ತು. ಸುತ್ತಲೂ ಮನೆಗೆ ಹೊಂದಿ ನಾನಾಬಗೆಯ ವೃಕ್ಷಗಳಿದ್ದುದರಿಂದ ಅವುಗಳ ಹರಿ ಟೊಂಗೆಗಳೆಲ್ಲ ಆ ಮನೆಯ ಚಪ್ಪರವನ್ನೇ ಆಕ್ರಮಿಸಿಬಿಟ್ಟಿದ್ದವು. ಪಂತನು ಶಾಸ್ತ್ರಿಯ ಮನೆಯ ಆ ಸ್ಥಿತಿಯನ್ನು ದೃಷ್ಟಿಸಿ ನೋಡುತ್ತಿರುವಾಗ ಆ ಮನೆಯ ಒಂದು ಕಡೆಯ ಕಿಟಕಿಯು ತೆರೆಯಲ್ಪಟ್ಟಿತು; ಹಾಗು ಅದರೊಳಗಿಂದೊಬ್ಬ ಸ್ತ್ರೀಯು ಮೆಲ್ಲಗೆ ಹೊರಗೆ ಹಣಿಕಿ ನೋಡಿದಳು. ಹೊರಗೆ ಯಾವನೋ ಅಪರಿಚಿತನಿರುವನೆಂಬದನ್ನು ತಿಳಿದು ಅವಳು ಮತ್ತೆ ಕಿಟಕಿಯ ಕದವನ್ನಿಕ್ಕಿಬಿಟ್ಟಳು. ಇಷ್ಟೆಲ್ಲ ಅವಳ ಚಲನವಲನವು ಮಿಂಚಿನ ದೃಶ್ಯಕ್ಕಿಂತಲೂ ತೀವ್ರವಾಗಿ ಪರಿಣಮಿಸಿತು.

ಪಂತನು ಒಳ್ಳೇ ಚಾಣಾಕ್ಷನಾದುದರಿಂದ ಅವನು ಆ ಅಲ್ಪಾವಧಿಯಲ್ಲೇ ಆ ಸ್ತ್ರೀಯನ್ನೊಮ್ಮೆ ದೃಷ್ಟಿಸಿದನು. ಆ ಸ್ತ್ರೀಯು ವೃದ್ಧಳಾಗಲಿ, ಪ್ರೌಢಳಾಗಲಿ ಆಗಿರದೆ ಯಾವಳೊಬ್ಬ ನವಯುವತಿಯೆಂಬದು ಅವನಿಗೆ ಗೊತ್ತಾಯಿತು. ಇಷ್ಟೇ ಅಲ್ಲ; ಅವಳು ಸಾಮಾನ್ಯಳಾಗಿರದೆ ಒಳ್ಳೇ ಸುಂದರಳಾಗಿದ್ದಳೆಂಬದೂ ಅವನಿಗೆ ತಿಳಿಯಬಂತು; ಆದರೆ ಅವಳು ಎಷ್ಟು ಸುಂದರ, ಎಷ್ಟು ತರುಣಳಾಗಿದ್ದಳೋ ಅಷ್ಟೊಂದು ತೇಜಸ್ವಿನಿಯಾಗಿರಲಿಲ್ಲ. ಅವಳ ಮುಖವು ಯಾವ ಚಿಂತೆಯಿಂದಲೋ ಬಾಡಿ ಬೆಂಡಾಗಿದ್ದಿತು. ಅವಳನ್ನು ಮತ್ತೊಮ್ಮೆ ನೋಡಲಿಕ್ಕೆ ದೊರೆಯುವದೇನೋ ಎಂದು ಪಂತನು ಅಲ್ಲಿಯೇ ಕೆಲ ಹೊತ್ತಿನವರೆಗೆ ನಿಂತನು; ನಿರಾಶೆಯಾಯಿತು. ಆಗ ಅವನು ಮನಸ್ಸಿನಲ್ಲಿ ಈ ತರುಣಿಯಾರು? ಇದ್ದರೆ ಇವಳು ನಾರಾಯಣಶಾಸ್ತ್ರಿಯ ಮಗಳಾಗಿರಬೇಕು; ಆದರೆ ನಾರಾಯಣಶಾಸ್ತ್ರಿಯು ನಿಸ್ಸಂತಾನನೆಂದೂ,

ಓಬ್ಬ ದಿನಹೋದ ಹೆಂಡತಿಯು ಹೊರತು ಇವನಿಗೆ ಮತ್ತಾರೂ ಇಲ್ಲೆಂದ್ಬೂ ಬಲವಂತಶೇಣ್ವಿಯೇ ಮೊದಲಾದವರು ಹೇಳಿರುವರು. ಅದರಿಂದ ಇವಳು ಅವನ ಮಗಳಲ್ಲ. ಇನ್ನು ಎಷ್ಟೋ ಜನ ವೃದ್ಧಬ್ರಾಹ್ಮಣರು ಕುಲಗೌರವ ಕ್ಕಾಗಿ ಮತ್ತೆ ಮತ್ತೆ ಲಗ್ನವಾಗುವದುಂಟು. ಆ ಬಗೆಯಾಗಿ ಈಕೆಯು ನಾರಾಯಣಶಾಸ್ತ್ರಿಯು ಲಗ್ನವಾದ ೩ನೇ ಇಲ್ಲವೆ ೪ನೇ ಹೆಂಡತಿಯಾಗಿರ ಲಿಕ್ಕಿಲ್ಲವಷ್ಟೇ?

ಈ ಪ್ರಕಾರವಾಗಿ ಪಂತನು ನಿಂತಲ್ಲಿಯೇ ನಿಂತುಕೊಂಡು ಆಲೋಚಿ ಸುತ್ತಿರುವಷ್ಟರಲ್ಲಿ, ಆ ಕಿಟಕಿಯ ಬಾಗಿಲವು ಮತ್ತೆ ತೆರೆಯಿತು. ಒಳಗಿ ನಿಂದ ಓಬ್ಬ ಬಿಳೀ ಕೂದಲ ಮುದುಕಿಯು ಬೊಕ್‌ಬೊಕ್ಕೆಂದು ಕೆಮ್ಮಿ ಹೊರಗೆ ಉಗುಳಿದಳು. ಅವಳನ್ನು ನೋಡಿ ಇವಳೇ ನಾರಾಯಣಶಾಸ್ತ್ರಿಯ ಹೆಂಡತಿಯೆಂದು ಪಂತನ ಖಾತ್ರಿಯಾಯಿತು; ಹಾಗಾದರೆ ಆ ಮೊದಲಿ ನವಳು ಶಾಸ್ತ್ರಿಗೆ ಏನಾಗಬೇಕು? ಎಂಬ ಗೂಢವುಂಟಾಯಿತು.

ಇಲ್ಲಿ ಹೀಗೆ ಕಳ್ಳನಹಾಗೆ ಬಹಳ ಹೊತ್ತಿನ ವರೆಗೆ ನಿಂತುಕೊಂಡಿರು ವದು ಸಂಭಾವಿತರ ಲಕ್ಷಣವಲ್ಲೆಂದು ಭಾವಿಸಿ ಪಂತನು ಅಲ್ಲಿಂದ ಆ ಮನೆಯ ತಲೆಬಾಗಿಲ ಕಡೆಗೆ ನಡೆದನು. ನಾರಾಯಣಶಾಸ್ತ್ರಿಗೆ ಭೇಟಿಯಾಗುವ ಸಲುವಾಗಿಯೇ ಅವನು ಅಲ್ಲಿಗೆ ಬಂದಿದ್ದನಾದ್ದರಿಂದ ಅತ್ತ ಹೋಗಿ ನೋಡು ತ್ತಾನೆ, ತಲೆಬಾಗಿಲವೂ ಅತ್ತಣ ಕಿಟಕಿಗಳೂ ಭದ್ರವಾಗಿ ಇಕ್ಕಲ್ಪಟ್ಟದ್ದವು. ಅವನು ಅಲ್ಲಿಯ ಓಂದು ಕಿಟಕಿಯ ಹತ್ತರ.ಹೋಗಿ ಒಳಗೆ ಯಾರಾದರೂ ಇರುವರೇನೆಂದು ಹಣಿಕಿ ನೋಡುವಷ್ಟರಲ್ಲಿ ಒಳಗೆ ಯಾರೋ ಅಸ್ಫುಟವಾಗಿ ಕಿವಿಮಾತುಗಳನ್ನಾಡುತ್ತಿರುವ ಸಂಶಯವು ಅವನಿಗುಂಟಾಯಿತು. ಆಗ ಅವನು ಸ್ವಲ್ಪವೂ ಸಪ್ಪಳ ಮಾಡದೆ ಆ ಕಿಟಕಿಗೆ ಆವಿತುಕೊಂಡು ಕುಳಿತು ಓಳಗಿನ ಸಂಭಾಷಣವನ್ನು ಕೇಳಿಕೊಳ್ಳಹತ್ತಿದನು. ಆ ಸಂಭಾಷಣದ ಕೆಲ ಭಾಗವು ಕಿವಿಗೆ ಬಿದ್ದೊಡನೆಯೇ ಇಲ್ಲಿ ಮತ್ತೇನೋ ಅನರ್ಥ ನಡೆಯತಕ್ಕದ್ದ ದೆಂದು ಅವನ ಖಾತ್ರಿಯಾಯಿತು. ಆ ಕೂಡಲೆ ಅವನು ಮೆಲ್ಲಗೆ ಎದ್ದು ನಿಂತು ಆ ಕಿಟಕಿಯೊಳಗಿಂದ ಒಳಗೆ ದಿಟ್ಟಿಸಿ ನೋಡಿದನು. ಒಳಗಿನ ಓಂದು ಮೂಲೆಯಲ್ಲಿ ಕಿಟಕಿಯ ಕಡೆಗೆ ಬೆನ್ನುಮಾಡಿ ಇಬ್ಬರು ಜನರು ಕುಳಿತಿ ದ್ದರು. ಅವರಲ್ಲೊಬ್ಬನು ಆ ಮನೆಯ ಯಜಮಾನನೆಂಬದು ಪಂತನಿಗೆ ಕೂಡಲೆ ಗುರುತುಹತ್ತಿತು; ಇನ್ನೊಬ್ಬನಾರೆಂಬದು ಆಗ ಗೊತ್ತಾಗಲಿಲ್ಲ.

ಹೀಗೆ ಅವರ ಆ ಗುಪ್ತ ಸಂಭಾಷಣವು ಒಂದು ತಾಸಿನವರೆಗೂ ನಡೆಯಿತು. ಅವರ ಕಿವಿಮಾತುಗಳು ತೀರಲು ಅವರು ಎದ್ದು ನಿಂತರು. ಆಗ ಹೊರಗೆ ಮೂರೂಸಂಜೆಯಾಗಿ ಅಲ್ಲಲ್ಲಿ ಕತ್ತಲು ಬೀಳಲಾರಂಭಿಸಿತ್ತು. ಬಳಿಕ ಒಳಗೆ ದೀಪಹಚ್ಚಿದರು. ಆ ದೀಪದ ಬೆಳಕಿನಲ್ಲಿ ಆ ಅಪರಿಚಿತನ ಮುಖಚರ್ಯೆಯು ಪಂತನಿಗೆ ಕಾಣಿಸಿತು. ಆತನ ಆ ಭಯಾನಕ ಮುಖವನ್ನು ಕಂಡು ಪಂತನಂತಹ ಕಡು ಸಾಹಸಿಯು ಕೂಡ ಕೆಲಕ್ಷಣಗಳವರೆಗೆ ಅಂಜಿದನು. ನಂತರ ನಾರಾಯಣಶಾಸ್ತ್ರಿಯು ಮತ್ತೆ ಕೆಳಗೆ ಕುಳಿತು ಒಂದು ಪತ್ರವನ್ನು ಬರೆಯತೊಡಗಿದನು. ಈ ಪತ್ರದಲ್ಲಿ ಇವರು ಈವರೆಗೆ ಆಲೋಚಿಸಿದ ಸಂಗತಿಗಳ ಸಾರವಿರುವದೆಂದು ಪಂತನು ಊಹಿಸಿದನು.

ಪತ್ರಬರೆಯುವದಾದ ಬಳಿಕ ಶಾಸ್ತ್ರಿಯು ಅದನ್ನು ಆ ಸಂಗಡಿಗನ ಕೈಗೆ ಕೊಟ್ಟನು. ಅವನು ಅದನ್ನು ಮಡಚಿ ತನ್ನ ಪಾಕೇಟಿನಲ್ಲಿರಿಸಿದನು. ಇನ್ನು ಇವರು ಹೊರಬೀಳುವರೆಂಬದು ತಿಳಿದ ಕೂಡಲೆ ಪಂತನು ನಿಂತಲ್ಲಿಂದ ಹಿಂದೆ ಸರಿದು ಸಮೀಪದ ಒಂದು ದೊಡ್ಡ ಆಲದಮರದ ಹೊದರನ್ನು ಸೇರಿಕೊಂಡನು. ಇಷ್ಟರಲ್ಲಿ ಆ ಒಳಗಿನ ಅಪರಿಚಿತನು ಹೊರಗೆ ಬಂದು, ಕ್ಷಣಹೊತ್ತು ಬಾಗಿಲಲ್ಲಿ ನಿಂತು, ಸುತ್ತಲೂ ದಿಟ್ಟಿಸಿ ನೋಡಿ, ನಾರಾಯಣಶಾಸ್ತ್ರಿಗಳಿಗೆ ಹೋಗಿಬರುವೆನೆಂದು ಮೆಲ್ಲನೆ ತಿಳಿಸಿ ದಾರೀ ಹಿಡಿದನು. ಶಾಸ್ತ್ರಿಯು ಬಾಗಿಲವನ್ನಿಕ್ಕಿಕೊಂಡು ಒಳಗ ಹೋದನು. ಅನಂತರ ಪಂತನು ಆ ಅಪರಿಚಿತ ವ್ಯಕ್ತಿಯನ್ನನುಸರಿಸಿ ನಡೆದನು. ಆ ಮನುಷ್ಯನು ಒಳ್ಳೇ ಒತ್ತರದಿಂದ ನಡೆಯುತ್ತಿದ್ದು, ಪಂತನಿಗಿಂತ ಬಹುದೂರ ಹೋದನು

ಆಗ ಪಂತನು ಅವನನ್ನು ದಾರಿಯಲ್ಲಿ ತಡೆದು ನಿಲ್ಲಿಸುವದಕ್ಕಾಗಿ ಒಂದು ಯುಕ್ತಿಯನ್ನು ಯೋಜಿಸಿದನು. ಅವನು ಅಡವಿಯ ಕೊರಚರಂತೆ ದನಿತೆಗೆದು—ಎಪ್ಪಾ, ಧಣೇರ, ನನ್ನ ಹಡದಪ್ಪಾ, ರಾಯರೇ, ದೇವರೂ ನಾನು ಬಡವ, ಎಪ್ಪಾ ಹಾಂಗ ಹೋಗಬ್ಯಾಡಿರಿ, ನಾನು ತಿರಕೊಳ್ಳೀನ್ರಿ ಏ ರಾಯರೇ, ಏ ಧಣೀ, ಎಂದು ಕೂಗಾಡಿ ರಂಭಾಟವನ್ನೆಬ್ಬಿಸಿದನು.

ಒತ್ತರದಿಂದ ನಡೆದಿದ್ದ ಆ ಅಪರಿಚಿತನು ಇವನ ಕೂಗಾಟಕ್ಕೆ ಸ್ವಲ್ಪವಾದರೂ ಲಕ್ಷ್ಯಕೊಟ್ಟು ಹಿಂದಿರುಗದಿದ್ದರೂ, ತನ್ನ ನಡಿಗೆಯ ವೇಗವನ್ನು ಕಡಿಮೆ ಮಾಡಿ—ಯಾಕೋ, ಯಾರು ನೀನು? ಏನೆನ್ನುತ್ತೀ? ಎಂದು ಪ್ರಶ್ನೆ ಮಾಡಿದನು.

ಕೂಡಲೆ ಪಂತನು ಮತ್ತಷ್ಟು ಗೊಗ್ಗರದನಿಯಿಂದ—ಎಪ್ಪಾ ನನಗೇನೂ ಬ್ಯಾಡರೀ ಧಣೇರ ನಿಮ್ಮ ಹಂತ್ಯಾಕ ನಾನೇನೂ ಬೇಡೋದಿಲ್ಲರೀ ತಾವು ದೊಡ್ಡೋರು-ರಾಯರು.-ನಾನು ಬಡವ-ನಾನು ಬಡವ, ಎಂದು ಅನ್ನುತ್ತ ಓಡುತ್ತೋಡುತ್ತ ಆ ವ್ಯಕ್ತಿಯ ಬಳಿಗೆ ಬಂದನು.

ಅವನ ಆ ಕೂಗಾಟವನ್ನು ಕೇಳಿ ಆ ಅಪರಿಚಿತನು ರೇಗಿಗೆದ್ದು,—ಎಲೇ ಮೂರ್ಖ, ಓಗೆಂದರೇನು? ನಿನಗೇನು ಬೇಕಾಗಿದೆಯೆಂಬದನ್ನು ಸ್ಪಷ್ಟವಾಗಿ ಹೇಳಬಾರದೇ? ಎಂದು ಕಣ್ಣು ಕೆಕ್ಕರಿಸಿ ನುಡಿಯುತ್ತಿರಲು, ಪಂತನು ತೀರ ಅವನ ಹತ್ತಿರ ಹೋಗಿ ಅವನ ಮೋರೆಯನ್ನೊಮ್ಮೆ ದಿಟ್ಟಿಸಿ ನೋಡಿದನು. ಕೊರಚನ ಆ ವಿಲಕ್ಷಣ ಪ್ರಕಾರವನ್ನು ಕಂಡು ಆ ಅಪರಿಚಿತನು ಒಮ್ಮೆ ಗಹಗಹಿಸಿ ನಕ್ಕನು ಬಳಿಕ ಅವನು ಪಂತನನ್ನು ಕುರಿತು—ಎಲೇ ಕೊರಚಾ, ನೀನು ಹುಚ್ಚನಂತೆ ಕಾಣುತ್ತೀ, ನಿನಗೇನು ಬೇಕು ಬೇಡು; ಎನ್ನಲು,

ವೃದ್ಧಕೊರಚನ ವೇಷ ಧರಿಸಿದ್ದ ಪಂತನು ಒಳ್ಳೇ ಸಂತುಷ್ಟನಾದಂತೆ ನಟಿಸಿ—ಎಪ್ಪಾ ನಿಮ್ಮಂಥ ಕರ್ನನ ತುಂಡನ್ನು ನಾನಿದುವರೆಗೂ ಕಂಡಿದ್ದಿಲ್ಲ. ದೇವರೂ ಆದಿರಲಿ ಬಿಡಿರಿ. ಇಂದ ಮತ್ತೆತ್ತ ಹೊಂಟಿರಿ? ನಿನ್ನೆ ಒಬ್ಬರನ್ನು ಕೊಂಡದ್ದು ಸಾಲಲಿಲ್ಲೇನು? ಈಗ ಮತ್ತ್ಯಾರ ಹೊಟ್ಟ್ಯಾಗ ಚೂರಿ ಚುಚ್ಚಾಕ ಹೊಂಟ್ರಿ? ಎಂದಂದು ಬೊಳ್ಳೆಂದು ನಕ್ಕನು.

ಅಪರಿಚಿತ—ಕೊರಚಾ, ನೀನು ಏನೆನ್ನುವಿಯೋ ನನಗೆ ತಿಳಿಯದು.

ಪಂತ—ಧಣೀ, ನಿನಗೆ ತಿಳ್ಯೋದಿಲ್ಲ ಅಂದರ್‍ಯಾಂಗೆ? ಎಲ್ಲಾನು ಬೇಶ್ಶ ತಿಳೀತೈತೆ; ಆದರೆ ಗಸಗ್ಗನ ಹೇಳಾಕವಲ್ಲಿರಿ. ಹೌದಲ್ಲೋದೇವರೂ. ನಿನ್ನೆ ನೀನು ಎಂತಾ ದೊಡ್ಡ ಕೂನು ಮಾಡಿಬಿಟ್ಟೆಲ್ಲ. ಭಲೆ, ವಸ್ತಾದಿ ಅನಬೇಕು ನಿನಗೆ! ಒಬ್ಬ್ಯಾಂವಗೂ ಪತ್ತೆ ಹಚ್ಚಗೊಡಲಿಲ್ಲ ನೋಡು. ಪಾಪ್ಪರಿ-ಪಾಪ್ಪಾ.

ಅಪರಿಚಿತ—ಛೀ-ಛೀ. ನನಗೇನೂ ಗೊತ್ತಿಲ್ಲ. ನಾನು ನಿನ್ನೆ ಇತ್ತ ಬಂದೇ ಇಲ್ಲ—ನೀನು ಕೊರಚನಲ್ಲ— ಗುಪ್ತಪೋಲೀಸ—ಡಿಟೆಕ್ಟಿವ್ಹನಂತೆ ಕಾಣುತ್ತೀದಿ

ಪಂತ—ನನಗದೇನೂ ಅನ್ನಾಕ ಬರಾಕಿಲ್ಲರೀ. ನಾನಂಥಪನಿರದಿದ್ದರೆ ಹೀಂಗೆ ಈ ಕಾಡಿನಲ್ಲಿ ನಿಮ್ಮನ್ಯಾಕ ತರುಬಿ ಕೇಳುತ್ತಿದ್ನೆರಿ ಧಣೇರ?

ನಿನ್ನೀದು ನಿಮುಗೆಲ್ಲ ಗೊತ್ತೈತರೀಪಾ. ನೀವು ಒಡನುಡ್ಯಾಕವಲ್ಲಿರಲ್ಲ?

ಅಪರಿಚಿತ:—ಛೀ-ಛೀ, ನೀನಾಡೀ ಇರು ನಿನ್ನಿನ ಸಂಗತಿಯೇ ನನಗೆ ತಿಳಿಯದು

ಪಂತ:—ಹಾಂಗ್ಯಾಂಗೆ ಆದೀತರೀ? ನಿನ್ನೆ ರಾತ್ರಿ ನೀವು ಆ ಶ್ಯಾಣ್ಯೆ ಬಾಲಪ್ಪನ ಅಂಗಡಿಗೆ ಮಳ್ಯಾಗ ಬಂದಿದ್ದಿಲ್ರೆ? ನಿಮ್ಮ ಕೈಯಾಗ ಚೂರಿ ಇದ್ದಿದ್ದಿಲ್ರೆ?

ಅಪರಿಚಿತ:---ನನಗೆ ಬಲವಂತ ಶೇಣ್ವಿ ಮುಂತಾದವರಾರದೂ ಗೊತ್ತಿಲ್ಲ.

ಪಂತ:—ನೀನು ಹೇಳದಿದ್ದರೂ ನನಗವನು ನಿನ್ನ ಬಗ್ಗೆ ಎಲ್ಲಾ ತಿಳಿಸಿರುತ್ತಾನೆ ಇಷ್ಟೇ ಅಲ್ಲ, ನಿಮ್ಮ ಆ ಖೂನಿನ ಸಂಗತಿಕೂಡ ಗೊತ್ತಿದೆ ನೀನು ಈಗ ಆ ಮೃತಬಾಲಿಕೆಯ ಶವವನ್ನು ಹುಡುಕುತ್ತಿರುವಿಯಷ್ಟೇ? ನನ್ನ ಮಾತು ಕೇಳಿದರೆ ನಾನು ನಿನಗದನ್ನು ತೋರಿಸೇನು ಸಹ.

ಅಪರಿಚಿತ:—ನಿನ್ನ ಅದಾವ ಮಾತು ಕೇಳಬೇಕು?

ಪಂತ:—ಆ ಹೆಣವನ್ನು ಒಯ್ದು ಕೊಟ್ಟರೆ ನಿನಗೆ ಬಹು ದೊಡ್ಡ ಇನಾಮು ದೊರೆಯುವದಲ್ಲವೆ?

ಅಪರಿಚಿತ:—ಹಾಗಿಲ್ಲದಿದ್ದರೆ ನಿನ್ನೆ ರಾತ್ರಿಯಿಂದ ಇದುವರೆಗೆ ಅನ್ನ-ನೀರಿಲ್ಲದೆ ಹೀಗೆ ಒಂದೇಸವನೆ ಎಡತಾಕುತ್ತಿದ್ದೆನೇಕೆ?

ಪಂತ:—ನಾನು ಆ ಹೆಣದ ಪತ್ತೆಹಚ್ಚಿಕೊಟ್ಟರೆ ನಿನಗೆ ಸಿಗಬಹುದಾದ ಇನಾಮಿನ ಅರ್ಧಹಣವನ್ನು ನನಗೆ ಕೊಡುವೆಯಾ?

ಅಪರಿಚಿತ:—ನಿನ್ನಂಥ ಸಾಮಾನ್ಯನಿಂದ ಅಷ್ಟು ಸಹಜವಾಗಿ ನನ್ನ ಕೆಲಸವಾದರೆ ನಾನು ಕೊಡಲಾರೆನೇ?

ಪಂತ:—ಹಾಗಾದರೆ ಮೊದಲು ಆ ಹಣವನ್ನು ನನ್ನ ಹತ್ತಿರ ತಂದಿಡು. ಬಳಿಕ ನಾನು ನಿನಗಾ ಹೆಣವನ್ನು ತೋರಿಸುತ್ತೇನೆ.

ಅಪರಿಚಿತ:—ಹಾಗೇ ಆಗಲಿ. ಇಲ್ಲಿಯೇ ಸಮೀಪದಲ್ಲಿ ನನ್ನ ಮನೆಯಿದೆ. ಅಲ್ಲಿಗೆ ಬಾ. ಹಣ ಕೊಡುವೆನು. ಹಣಸಂದಮೇಲೆಯೇ ಹೆಣವನ್ನು ತೋರಿಸುವೆಯಂತೆ, ಎಂದನು

ಪಂತನು ಕ್ಷಣಕಾಲ ಯೋಚಿಸಿ—ಸಹಹಾಗಾದರೆ, ಎಂದೆಂದು ಅವನ ಬೆನ್ನು ಹತ್ತಿ ನಡೆದನು.

ಅವರಿಬ್ಬರೂ ಮತ್ತೆ ಕೆಲದಾರಿಯನ್ನು ಕ್ರಮಿಸಿದರು. ಆಗ ಒಬ್ಬರೂ ಪಿಟ್ಟೆಂದು ಮಾತಾಡುತ್ತಿರಲಿಲ್ಲ. ೩-೪ ದೊಡ್ಡ ದೊಡ್ಡ ಹಳ್ಳಗಳನ್ನು ದಾಟಿ ಹೋದ ಬಳಿಕ ಅವರೀರ್ವರೂ ಒಂದು ಗುಡ್ಡದ ಓರೆಯಲ್ಲಿ ಬಂದರು. ಅಲ್ಲಿಂದ ಸಮೀಪದಲ್ಲೆಲ್ಲಿಯೂ ಜನವಸತಿಯಿರಲಿಲ್ಲ. ಆ ರಾತ್ರಿಯಲ್ಲಿ ಅಷ್ಟೇಕೆ ನಡುಹಗಲಲ್ಲಿಯೂ ಅಲ್ಲಿ ಯಾವನೊಬ್ಬನ ಕೊಲೆಯನ್ನು ನಿರ್ವಿಘ್ನವಾಗಿ ಮಾಡಬಹುದಾಗಿತ್ತು. ಹೀಗೆ ಅದೊಳ್ಳೇ ನಿವಾಂತಸ್ಥಾನವಾಗಿದ್ದಿತು.

ಅಂಥ ಇಕ್ಕಟ್ಟಿನ ಸ್ಥಳಕ್ಕೆ ಹೋಗಿ ಆ ಅಪರಿಚಿತನು ಏನನ್ನೋ ಹುಡುಕುವವನ ಹಾಗೆ ಇತ್ತಿಂದ ಅತ್ತ ಅತ್ತಿಂದ ಇತ್ತ ಹೀಗೆ ನಾಲ್ಕಾರು ಸಾರೆ ಅಡ್ಡಾಡಿ--ಕೊರಚಾ, ನಾನು ಇಲ್ಲಿ ಹುಗಿದಿಟ್ಟಿದ್ದ ಹಣವನ್ನು ಯಾರೋ ಎಬ್ಬಿಸಿಕೊಂಡೊಯ್ದಂತೆ ಕಾಣಿಸುತ್ತದೆ ಎಲಾ ಅವರ, ನನ್ನ ಘಾತಮಾಡಿಬಿಟ್ಟರಲ್ಲಾ? ಎಂದೆಂದು ಅಲ್ಲಿಯ ಒಂದು ತಗ್ಗಿನಲ್ಲಿ ಬಗ್ಗಿ ಬಗ್ಗಿ ನೋಡಹತ್ತಿದನು.

ಪಂತ:—ನಿನ್ನ ಜಾಲವನ್ನೆಲ್ಲ ತಿಳಿದೇ ನಾನು ನಿನ್ನ ಬೆನ್ನಹತ್ತಿರುವೆನು.

ಅಪರಿಚಿತ:—ಅದೇನೋ ನನ್ನ ಜಾಲಾ? ಎಂದೆನ್ನುತ್ತ ತನ್ನ ಮುಸುಕಿನೊಳಗಿನ ಚೂರಿಯನ್ನು ಹಿರಿದು ಪಂತನ ಮೈಮೇಲೆ ಏರಿ ಹೋದನು.

ಹೀಗಾಗೇ ಆಗುವದೆಂದು ಪಂತನು ಮೊದಲೇ ತಿಳಿದವನಾದುದರಿಂದ ಅವನು ಅಂಜಿದವನಂತೆ ನಟಿಸಿ—ಅಯ್ಯೋ ಸತ್ತೆನು-ಸತ್ತೆನು-ನನ್ನ ತಪ್ಪಾಯಿತು, ಕ್ಷಮಿಸು ಕ್ಷಮಿಸು, ಎಂದೆನ್ನುತ್ತ ಕೆಲವು ಹೆಜ್ಜೆ ಹಿಂದಕ್ಕೆ ಸರಿದನು.

ಆಗ ಆ ಅಪರಿಚಿತನು ಮತ್ತಷ್ಟು ಅವನ ಮೇಲೆ ಏರಿಬಂದು:-ಎಲೇ ನೀನು ನಿಜವಾಗಿ ಕೊರಚನಲ್ಲ; ಯಾವನೋ ಗುಪ್ತಪೋಲೀಸನಿರುವೆ; ನಿನ್ನ ಹೆಸರೇನು? ಇಲ್ಲಿಗೇಕೆ ಬಂದಿರುವೆ? ಎಂಬದನ್ನು ತಿಳಿಸದವಿನಃ ನಿನ್ನ ಜೀವ ವುಳಿಯಲಾರದು.

ಪಂತನು ನಿಂತಲ್ಲಿಯೇ ನಿಂತು:—ಚೂರಿಯನ್ನು ಚುಚ್ಚಬೇಡ; ನೀನು ಏನನ್ನು ಕೇಳುವಿಯೋ ಅದನ್ನೆಲ್ಲ ಚೆನ್ನಾಗಿ ಹೇಳುವೆನು, ಎಂದೆಂದು ಸುಮ್ಮನಾದನು.

ಅಪರಿಚಿತ:—ನೀನು ಎಲ್ಲವನ್ನೂ ಸ್ಪಷ್ಟವಾಗಿ ತಿಳಿಸಬೇಕು. ನೀನು ಯಾರು? ನಿನ್ನ ಹೆಸರೇನು? ನಿನ್ನ ವಾಸಸ್ಥಳವಾವುದು? ನಿನ್ನ ಕಸಬೇನು? ಯಾವ ಉದ್ದಿಶ್ಯವಾಗಿ ನೀನು ನನ್ನ ಬೆನ್ನಹತ್ತಿ ಬಂದಿರುವಿ?

ಪಂತ:-ನಾನೇ, ನಾನೊಬ್ಬ ಮನುಷ್ಯನು. ನನ್ನ ಹೆಸರು ಅಷ್ಟೊಂದು ಚೆನ್ನಾಗಿಲ್ಲ,-ಮಾರ್ಕೈಪ್ಪಾ. ಕೊಲೆ-ದರವಡಗಾರರ ವಾಸಸ್ಥಳವೇ ನನ್ನ ಊರು; ನಿಮ್ಮಂಥ ನೀಚರನ್ನು ಹಿಡಿದು ದಂಡಣೆಗೆ ಗುರಿಮಾಡುವದೇ ನನ್ನ ಕಸಬು; ಈಗ ನಿನ್ನ ಬೆನ್ನುಹತ್ತಿ ಇಲ್ಲಿಗೆ ಬಂದುದುದಾದರೂ ಅದಕ್ಕೇ.

ಅಪರಿಚಿತ:—ಏನಂದಿ? ನಾನು ಕೊಲೆಗಾರನೇ?.

ಪಂತ:—ಆ ಬಗ್ಗೆ ಇನ್ನು ಸಂಶಯವೇ ಇಲ್ಲ, ಹಾಗಿಲ್ಲದಿದ್ದರೆ ನಿನ್ನ ಬಳಿಯಲ್ಲಿ ಇಷ್ಟುದ್ದ ಹದನಾದ ಚೂರಿಯೇಕೆ?.

ಅಪರಿಚಿತನು ಕರಕರನೆ ಹಲ್ಲು ಕಡಿಯುತ್ತ ಆ ಚೂರಿಯನ್ನು ಪಂತನ ಎದೆಗೆ ಚುಚ್ಚಹೋದನು; ಪಂತನು ಮತ್ತೆ ಮೊದಲಿನಂತೆ ಹೆದರಿದವನ ಹಾಗೆ ನಟಿಸುತ್ತ ಕೆಲಹೆಜ್ಜೆ ಹಿಂದೆ ಸರಿದನು.

ಆಗ ಅಪರಿಚಿತನು ಮತ್ತಿಷ್ಟು ರಂಗಿಗೆದ್ದು ಕರ್ಕಶದನಿಯಿಂದ—ಎಲೇ ಹೇಡೀ, ನೀನಾರು? ಎಲ್ಲಿಯವನೆಂಬದನ್ನು ಈಗಲಾದರೂ ತಿಳಿಸಿ ನಿನ್ನ ಜೀವವುಳಿಸಿಕೋ.

ಅದಕ್ಕೆ ಪಂತನು;—ಅಣ್ಣಾ, ಅಗೋ ಅತ್ತ ಕಾಣುವ ಮಾವಿನಗಿಡ ದಾಚೆಯ ಬಾಳೆಯಗಿಡದ ಈಚೆಗೆ ಕಾಣುವ ತೆಂಗಿನಮರದ ಬಳಿಯೇ ನನ್ನ ಮನೆ, ಎಂದು ಬೊಟ್ಟುಮಾಡಿ ತೋರಿಸುತ್ತ ಆ ಅಪರಿಚಿತನ ಲಕ್ಷ್ಯ ವನ್ನು ಅತ್ತ ಕಡೆಗೆ ವೇಧಿಸಿದನು. ಅವನು ಬೊಟ್ಟು ತೋರಿಸುವ ಕಡೆಗೆ ಮಾವಿನಮರವಾಗಲಿ, ಬಾಳೆಯಗಿಡವಾಗಲಿ, ತೆಂಗಿನಮರವಾಗಲಿ ಒಂದೂ ಇರಲಿಲ್ಲ ಅದರಿಂದ ಆ ಅಪರಿಚಿತನು ಸಕ್ರೋಧದಿಂದ:—ಎಲೇ ಮೋಸ ಗಾರಾ, ಎಲ್ಲಿದೆ ನಿನ್ನ ಆ ತೆಂಗಿನಮರವು? ಎಂದು ಅತ್ತಿತ್ತ ಹೊರಳಿ ನೋ-ಡುತ್ತಿರಲು, ಪಂತನು ಆತನ ಆ ಅಸಾವಧಾನತೆಯನ್ನು ಸಾಧಿಸಿ, ಒಮ್ಮೆಲೆ ಅವನ ಕೈಯೊಳಗಿನ ಆ ನಿಡಿದಾದ ಚೂರಿಯನ್ನು ಕಸಿದನು; ಹಾಗು ಅಡ್ಡ ಗಾಲಕೊಟ್ಟು ಅವನನ್ನು ನೆಲಕ್ಕೆ ಕೆಡಹಿದನು. ಮೊದಲೇ ಅಸಾವಧನಾದ ಆ ಉದ್ದನ್ನ ದಿಂಡಿನಂತಹ ಆಳು ದೊಪ್ಪೆಂದು ಭೂಮಿಗೆ ಬಿದ್ದನು. ಕೂಡಲೇ ಪಂತನು ಅವನ ಎದೆಯ ಮೇಲೆ ಕುಳಿತು ಗಂಟಲ ಮೇಲೆ ಆ ಚೂರಿಯನ್ನು ಹಿಡಿದು ಅವನನ್ನುದ್ದೇಶಿಸಿ:—ಯಾಕೋ ಪುಂಡಾ, ಬಹಳ ಮಾತಾಡುತ್ತಿದ್ದಿ? ಈಗ ನನ್ನ ಹೆಸರು-ದೆಸೆಗಳೂ, ಉದ್ಯೋಗವೂ ಗೊತ್ತಾದವೇನು? ನಾನು ಈಗ ನಿನ್ನನ್ನು ಯಮಸದನಕ್ಕಟ್ಟಿಯೇ ನಿನ್ನ

ಎದೆಯ ಮೇಲಿಂದೇಳುತ್ತೇನೆ, ಎಂದಂದು ಆ ಚೂರಿಯನ್ನು ಅವನ ಕುತ್ತಿಗೆಯ ಶಿರದ ಮೇಲೆ ಒತ್ತಿಹತ್ತಿದನು.

ಮಾತಾಡಲಿಕ್ಕೆ ಸಹ ಬಾರದಷ್ಟು ಬಿಗುವಾಗಿ ಕುತ್ತಿಗೆಗೆ ಒತ್ತಿ ಹಿಡಿದದ್ದರಿಂದ ಆ ಅಪರಿಚಿತನು ಸುಮ್ಮನೆ ಬಿದ್ದು ಬಿಟ್ಟಿದ್ದನು. ಆಗ ಪಂತನು ಅವನ ಬಕ್ಕಣದೊಳಗಿನ ಆ ಪಾಕೇಟನ್ನು ಅವನಿಗೆ ತಿಳಿಯದ ಹಾಗೆ ತಕ್ಕೊಂಡು, ಬಳಿಕ—ಎಲೇ ನೀಚಾ, ನಿನ್ನಂಥ ಕೈಲಾಗದವನನ್ನು ಕೊಲ್ಲುವದರಲ್ಲಿ ಅರ್ಥವೇನಿದೆ? ತುಸ ದಿವಸಗಳಲ್ಲಿಯೇ ನಿನ್ನನ್ನು ಹಿಡಿದು ಜೇಲಖಾನೆಗೆ ಕಳಿಸುವೆನು. ಎದ್ದೇಳು, ಎಂದಂದು ಅವನನ್ನು ಅಲ್ಲಿಯೇ ಬಿಟ್ಟು ತಾನು ತನ್ನ ದಾರೀ ಹಿಡಿದನು. ಆ ಅಪರಿಚಿತ ವ್ಯಕ್ತಿಯಾದರೂ ಪಂತನ ಸಾವಧಾನತೆ, ಕುಶಲತೆ ಹಾಗು ಬಲಾಢ್ಯತೆಗಳಿಗೆ ನಾಚಿ, ತಲೆ ಕೆಳಗೆ ಹಾಕಿಕೊಂಡು ತನ್ನ ದಾರಿ ಹಿಡಿದು ಒತ್ತರದಿಂದ ಹೋದನು. ಪಂತನು ಮನೆಗೆ ಹೋಗಿ ಅವನ ಪಾಕೇಟಿನಲ್ಲಿದ್ದ, ನಾರಾಯಣ ಶಾಸ್ತ್ರಿಯು ಅವನಿಗೆ ಬರಕೊಟ್ಟ ಪತ್ರವನ್ನು ಓದಿಕೊಂಡನು; ಹಾಗು ಆ ಶಾಸ್ತ್ರಿಯ ಕಾರಸ್ಥಾನಗಳ ಬಗ್ಗೆ ತಲೆದೂಗಿದನು!

ಬೆಳಗಾದ ಬಳಿಕ ಮುಂದೇನು ಮಾಡಬೇಕೆಂಬ ಬಗ್ಗೆ ಪಂತನು ಕೆಲಹೊತ್ತು ಆಲೋಚಿಸಿದನು. ನಂತರ ಅವನು ಲಗುಬಗನೆ ತನ್ನ ಊಟ-ಉಡಿಗೆಗಳನ್ನು ಮುಗಿಸಿಕೊಂಡು ಮಧ್ಯಾಹ್ನದ ಸಮಯಕ್ಕೆ ಮತ್ತೆ ನಾರಾಯಣ ಶಾಸ್ತ್ರಿಯ ಮನೆಗೆ ಬೇರೊಂದು ಛದ್ಮವೇಷದಿಂದ ನಡೆದನು. ವೇಷಧರಿಸುವ ಬಗ್ಗೆ ಕಾರವಾರ ಜಿಲ್ಲೆಯಲ್ಲಿ ಆಗ್ಗೆ ಪಂತನನ್ನು ಸರಿಗಟ್ಟುವವರಾರೂ ಇರಲಿಲ್ಲ. ಅವನು ಯಾವುದೊಂದು ವೇಷವನ್ನು ಧರಿಸಿದನೆಂದರೆ, ಅವನ ನಿಕಟದ ಆಪ್ತರಿಗೆ ಇಲ್ಲವೆ ಸ್ನೇಹಿತರಿಗೆ ಕೂಡಾ ಅವನ ಗುರುತು ಹತ್ತುತ್ತಿರಲಿಲ್ಲ. ಅಂದಬಳಿಕ ಪಾಪ! ನಾರಾಯಣಶಾಸ್ತ್ರಿಗೆ ಈತನ ಗುರುತು ಹೇಗೆ ಹತ್ತಬೇಕು? ಪಂತನು ಛದ್ಮವೇಷದಿಂದ ಅವನ ಮನೆಗೆ ಹೋದಾಗ ಶಾಸ್ತ್ರಿಯು ಆ ಮೊದಲೇ ಊಟವನ್ನು ತೀರಿಸಿಕೊಂಡು ತಾಂಬೂಲ ಚರ್ವಣದಲ್ಲೂ; ಧೂಮ್ರಪಾನದಲ್ಲೂ ವೇಳೆಗಳೆಯುತ್ತ ಹೊರಗಿನ ತನ್ನ ಬೈಠಕಖಾನೆಯಲ್ಲಿ ಆಡ್ಡಾಗಿ ಯಾರ ದಾರಿಯನ್ನೋ ನೋಡುತ್ತಿದ್ದನು. ವೃದ್ಧವೇಷದಿಂದ ಬಂದ ಪಂತನನ್ನು ನೋಡಿದ ಕೂಡಲೆ ಶಾಸ್ತ್ರಿಯು ಎದ್ದು ಕುಳಿತು, ಸಾದರದಿಂದ ಆತನನ್ನು ಬರಮಾಡಿಕೊಂಡನು.

"ಮಹಾರಾಜರೇ, ಈ ಗ್ರಾಮದಲ್ಲಿ ನಾರಾಯಣಶಾಸ್ತ್ರಿಗಳ ಮನೆ ಯಲ್ಲಿದೆ ಎಂಬದನ್ನು ದಯವಿಟ್ಟು ತೋರಿಸುವಿರಾ?" ಎಂಬ ಪಂತನ ಪ್ರಶ್ನೆಗೆ,

"ನಾನೇ ಅವನು. ಇದೇ ನನ್ನ ಮನೆ. ತಾವು ಯಾರು, ಎಲ್ಲಿಂದ ಬಂದಿರಿ?"

"ನಾನು ಬಹುದೂರದಿಂದ ಬಂದೆನು. ತಮ್ಮ ಶಿಷ್ಯನಿಂದಲೇ ಕಳಿಸಲ್ಪಟ್ಟವನು. ಅಯ್ಯಯ್ಯೋ! ಹಾ ಹಾ ಹಾ! ಎಷ್ಟು ಸೆಕೆಯಿದು? ಎಂಥ ಬಿಸಿಲಿದು? ತಮ್ಮ ಆ ಶ್ರೀಮಂತ ಶಿಷ್ಯನು ಶಿವಪ್ರತಿಷ್ಠೆಯನ್ನು ಮಾಡತಕ್ಕವನಿದ್ದಾನೆ. ಗುರುಗಳ ಆಗಮನವನ್ನು ಅಪೇಕ್ಷಿಸಿರುವನು. ಅಯ್ಯೋ ಎಂಥ ದಾಹವಿದು? ನೀರಡಿಕೆ-ಬಲುನೀರಡಿಕೆ."

ನಾರಾಯಣಶಾಸ್ತ್ರಿಯು ಒಳ್ಳೇ ಉತ್ಸುಕತೆಯಿಂದ:—ಆ ಶಿಷ್ಯನ ಹೆಸರೇನು. ಯಾವ ಊರವನು? ನನ್ನ ಶಿಷ್ಯರೆಲ್ಲರೂ ಸಧನರೇ ಇರು ವರಾದ್ದರಿಂದ ಅವನ ಹೆಸರು ತಿಳಿಸಿರಿ.

ಪಂತನು ತನ್ನ ಹಣೆಯಮೇಲಿನ ಬೆವರೊರಿಸುತ್ತ—ಹೇಳುವೆನು, ಅದನ್ನು ಹೇಳುವದಕ್ಕಾಗಿಯೇ ಬಹುದೂರದ ದಾರಿಯನ್ನು ಈ ಗ್ರೀಷ್ಮದ ತಾಪದಲ್ಲಿ ಕ್ರಮಿಸಿ ಬಂದಿರುವೆನು. ತುಸ ಆಸರ ಕೊಡಿರಿ. ಗಂಟಲಾರಿ ಹೋಗಿದೆ, ಎಂದೆಂದು ಉಶ್ಶ ಎನ್ನುತ್ತ ತಲೆ ಕೆಳಗೆ ಹಾಕಿ ಕುಳಿತನು. ನಾರಾಯಣಶಾಸ್ತ್ರಿಯ ಆ ಬೈಠಕಖಾನೆಗೆ ಎರಡು ಬಾಗಿಲುಗಳಿದ್ದವು. ಒಂದು ಹೊರಗಿನ ತಲೆಬಾಗಿಲು; ಇನ್ನೊಂದು ನಡುಮನೆಗೆ ಹೋಗುವ ಬಾಗಿಲು; ನಡುಮನೆಯ ಬಾಗಿಲ ತೆರೆದು ನೀರುತರುವದಕ್ಕಾಗಿ ಶಾಸ್ತ್ರಿಯು ಒಳಗೆ ಹೋದನು. ಅದೇ ಬಾಗಿಲ ಬಳಿಯಲ್ಲಿ ಒಂದು ಕಿಟಕಿಯಿದ್ದಿತು. ಆ ಕಿಟಕಿಯ ಹತ್ತರವೇ ವಿಷಣ್ಣಮುಖದಿಂದ ನಿಂತುಕೊಂಡಿದ್ದ ನಿನ್ನೆ ನೋಡಿದ್ದ ಆ ಸುಂದರ ತರುಣಿಯು ಪಂತನಿಗೆ ಇಂದು ಪುನಃ ಕಾಣಿಸಿದಳು. ಪಂತನು ತನ್ನ ಕಡೆಗೆ ನೋಡುತ್ತಿರುವದನ್ನು ಕಂಡು ಆ ಯುವತಿಯು ಅಲ್ಲಿಂದ ಬೇರೆ ಕಡೆಗೆ ನಡೆದಳು.

ತುಸಹೊತ್ತಿನಲ್ಲಿಯೇ ಶಾಸ್ತ್ರಿಯು ನೀರಿನ ತಂಬಿಗೆ ಥಾಲಿಗಳನ್ನು ತಂದನು. ಪಂತನು ಒಂದೇ ಗುಟಕಿನಲ್ಲಿ ಆ ತಂಬಿಗೆಯನ್ನು ಬರಿದಾಗಿ ಮಾಡಿದನು. ಬಳಿಕ ಅವನು ಶಾಸ್ತ್ರಿಗಳೇ, ನಿಮ್ಮ ಆ ಧನಿಕಶಿಷ್ಯನ ಅರಿಕೆ ಯನ್ನು ನಿಮಗೆ ತಿಳಿಸುವೆನು, ತುಸ ತಾಳಿರಿ ಅಯ್ಯೋ ನೀರಡಿಕೆ, ನೀರ

ಡಿಕೆ, ನಾನಿನ್ನು ಬದುಕಲಾರೆ; ಸತ್ತೆನು-ಸತ್ತೆನು, ಎಂದೆನ್ನುತ್ತ ವೈನಡುಗಿಸಿ ಶಾಸ್ತ್ರಿಯ ಎದುರಿಗೆ ಬಿದ್ದುಬಿಟ್ಟನು. ಶಾಸ್ತ್ರಿಯು ಅವನ ನೆತ್ತಿಗೆ ನೀರು ತಟ್ಟಿದನು; ಗಾಳಿಹಾಕಿದನು; ಮತ್ತೇನೇನೋ ಉಪಚಾರ ಮಾಡಿದನು. ಇಷ್ಟೆಲ್ಲವಾದಬಳಿಕ ಆ ವೃದ್ಧನಿಗೆ ಉಸಿರಾಡಹತ್ತಿತು. ಆಗ ಇದೇನು ವಿಪತ್ತೋ ಎಂದಂದುಕೊಂಡು ಶಾಸ್ತ್ರಿಯು ಲಗುಬಗೆಯಿಂದ ಅದೇ ಊರ ಲ್ಲಿಯ ವೈದ್ಯನನ್ನು ಕರೆಯಹೋದನು.

ಶಾಸ್ತ್ರಿಯು ಮನೆಬಿಟ್ಟು ಹೋದನಂತರ ಪಂತನಿಗೆ ಚೆನ್ನಾಗಿ ಹುಷಾ ರಿಯೆನಿಸಿತು. ಅವನು ಆಗ ಕಣ್ತೆರೆದು ನೋಡುತ್ತಾನೆ, ತನ್ನ ತಲೆಯ ಬಳಿಯಲ್ಲಿ ನಾರಾಯಣಶಾಸ್ತ್ರಿಯ ಹೆಂಡತಿಯು ಗಾಬರಿಯಾಗಿ ಕುಳಿತಿದ್ದು ತುಸದೂರದಲ್ಲಿ ಆ ಅನಿಂದ್ಯ ಸುಂದರಿಯು ಕುತೂಹಲಚಿತ್ತದಿಂದ ತನ್ನ ಕಡೆಗೆ ನೋಡುತ್ತಿದ್ದಾಳೆ. ಬಳಿಕ ಅವನು ಹರ್ಷಚಿತ್ತದಿಂದ ಆ ವೃದ್ಧ ಳನ್ನು ಕುರಿತು--ತಾಯಿ, ನನಗೆ ಹೀಗೆ ಆಕಸ್ಮಿಕವಾಗಿ ಏನಾಯಿತೋ ಯಾರು ಬಲ್ಲರು? ತಾಯಿ, ನಿಮ್ಮ ಪುಣ್ಯದಿಂದಲೇ ನಾನಿನ್ನೂ ಬದುಕಿರು ವೆನು. ಅವ್ವಾ, ನೀರಡಿಕೆ-ನೀರಡಿಕೆ, ಎಂದು ನುಡಿಯಲು, ಸ್ತುತಿಪ್ರಿಯ ಳಾದ ಆ ಮುದುಕಿಯು ಆ ಪ್ರಾಣಿಯ ಬಗ್ಗೆ ಮತ್ತಿಷ್ಟು ಕನಿಕರತಾಳಿ ಬೀಸಣಿಕೆಯಿಂದ ಗಾಳಿಬೀಸಲಾರಂಭಿಸಿದಳು. ಪಂತನು ಮತ್ತೆ ಬಾಯಾ ರಿಕೆಯೆಂದು ಕೂಗಿಕೊಳ್ಳಲು, ಆಕೆಯು ನೀರು ತರುವದಕ್ಕಾಗಿ ಒಳಗೆ ಹೋದಳು. ತಾನು ಎದ್ದು ಹೋಗುವಾಗ ಅವಳು ತನ್ನ ಕೈಯೊಳಗಿನ ಬೀಸಣಿಕೆಯನ್ನು ಅಲ್ಲಿಯೇ ನಿಂತಿದ್ದ ಆ ತರುಣಿಯ ಕೈಯಲ್ಲಿ ಕೊಟ್ಟು ಈತ ನಿಗೆ ಚೆನ್ನಾಗಿ ಗಾಳಿಬೀಸೆಂದು ಹೇಳಿಹೋದಳು.

ಮುದುಕಿಯು ಒಳಗೆ ಹೋಗಿ ನೋಡುತ್ತಾಳೆ, ಮನೆಯಲ್ಲಿ ಕುಡಿಯುವ ನೀರೇ ಇರಲಿಲ್ಲ. ಅದರಿಂದ ಸಮೀಪದ ಜಲಾಶಯದಿಂದ ನೀರು ತರುವದ ಕ್ಕಾಗಿ ಅವಳು ಕೊಡವನ್ನು ಬಗಲಲ್ಲಿಟ್ಟುಕೊಂಡು ಒತ್ತರವಿಂದ ನಡೆದಳು.

ಆ ಸುಸಂಧಿಯನ್ನು ಸಾಧಿಸಿ ಪಂತನು ಆ ಸುಂದರಿಯೊಡನೆ ಮಾತಾ ಡಲಾರಂಭಿಸಿದನು. ಅವನು ಹುಶ್ಶ ಹುಶ್ಶೆಂದು ಉಸಿರುಗಳೆಯು ತ್ತಲೇ ಆಕೆಯನ್ನು ಕುರಿತು--ತಂಗೀ, ಶಾಸ್ತ್ರಿಗಳಿಗೆ ನೀನೇನಾಗಬೇಕು? ಎಂದು ಮೆಲ್ಲನೆ ಪ್ರಶ್ನೆ ಮಾಡಿದನು. ಮೊದಲನೇಸಾರೆ ಅವಳು ಅವನಿ ಗೇನೂ ಉತ್ತರ ಕೊಡಲಿಲ್ಲ. ಆಗಲವನು ಮತ್ತೆ ಅದೇ ಪ್ರಶ್ನೆಯನ್ನು

ತುಸ ಗಟ್ಟಿಯಾಗಿ ಕೇಳಿದನು. ಆದರೂ ಅವಳು ಅವನಿಗೇನೂ ಹೇಳದೆ ಒತ್ತರದಿಂದ ಗಾಳಿಬೀಸಲಾರಂಭಿಸಿದಳು. ತದನಂತರ ಮತ್ತೆ ಪಂತನೇ—ತಂಗೀ, ಅವರು ನಿನ್ನ ಆಪ್ತರಿಷ್ಟರಲ್ಲೆಂದು ಕಾಣುತ್ತದೆ; ಅದೇಕೆ ನನಗದು ಚೆನ್ನಾಗಿ ಗೊತ್ತಿದೆ. ಇಷ್ಟೇ ಏಕೆ, ನೀನು ಯಾರು, ಇಲ್ಲಿಗೇಕೆ ಬಂದಿರುವೆಯೆಂಬದೂ ನನಗೆ ಅಲ್ಪಸ್ವಲ್ಪ ತಿಳಿದಿದೆ.

ಆಗ ಆ ಯುವತಿಯು ಬೀಸಣಿಕೆಯನ್ನು ಕೆಳಗಿಟ್ಟು ಅಲ್ಲಿಂದ ಹೊರಡಲುಪಕ್ರಮಿಸಿದಳು. ಪಂತನು ಅವಳನ್ನು ತಡೆದು—ತಂಗೀ, ಅಂಜಬೇಡ, ನಾನು ನಿನ್ನ ಶತ್ರುವಲ್ಲ. ನಿನ್ನ ಹಿತಚಿಂತಕನೋರ್ವನು. ನನ್ನ ಬಳಿಯಲ್ಲಿ ನೀನಾವ ಮಾತನ್ನೂ ಬಚ್ಚಿಡಬೇಡ. ನೀನು ಮಹಾವಿಪತ್ತಿಗೆ ಗುರಿಯಾಗಿರುವೆ, ಇಷ್ಟೇ ಅಲ್ಲ; ಅಲ್ಪಾವಕಾಶದಲ್ಲಿಯೇ ಈ ಶಾಸ್ತ್ರಿಯಿಂದಲೂ ನಿನಗೆ ಗಂಡಾಂತರವುಂಟಾಗ ಬಹುದಾಗಿದೆ. ನಿನ್ನ ನಿಜಸಂಗತಿಯನ್ನು ನನಗೆ ತಿಳಿಸದಿದ್ದರೆ ನೀನು ಈ ನೀಚನ ಜಾಲದಿಂದ ಪಾರಾಗಲಾರೆ.

ಇವನೆದುರಿಗೆ ಮಾತಾಡಬೇಕೋ-ಬಾರದೋ ಎಂಬ ವಿಚಾರದಲ್ಲಿ ಆ ತರುಣಿಯು ತಲ್ಲೀನಳಾಗಲು, ಪಂತನೇ ಮತ್ತೆ ಅವಳಿಗೆ- - ನಿನಗೆ ಗೋಪೀಚಂದನೆಂಬುವನ ಪರಿಚಯವಿದೆಯೊ? ನನ್ನೆದುರಿಗೆ ನಾಚಬೇಡ, ಹೇಳು.

ಆ ಹೆಸರನ್ನು ಕೇಳಿ ಆ ತರುಣಿಯು ಸೊಂಪೆಯೊಂಗಿತು. ಮತ್ತೆ ಅವಳು ಅಲ್ಲಿಂದ ಒಳಗೆಹೋಗಲು ಯತ್ನಿಸಿದಳು. ಪಂತನು ಅವಳನ್ನು ಮತ್ತೆ ನಿಲ್ಲಿಸಿ:—ನನ್ನಿಂದ ನಿನಗೆ ಉಪಕಾರವಾದೀತೇ ವಿನಃ ಅಪಕಾರವು ಸರ್ವಥಾ ಆಗಲಾರದು. ನನ್ನ ಬಳಿಯಲ್ಲಿ ಮುಚ್ಚುಮರೆ ಮಾಡಬೇಡ; ಅದರಿಂದ ನಿನ್ನ ಕಾಲಮೇಲೆ ನೀನೇ ಕಲ್ಲು ಚೆಲ್ಲಿಕೊಂಡಂತಾದೀತು. ಗೋಪೀಚಂದನನ್ನು ಬಲ್ಲೆಯಾ?.

ಸುಂದರಿ(ಮೆಲ್ಲಗೆ):—ಬಲ್ಲೆನು.

ಕೇಶವರಾಯನೆಂಬ ದೊಡ್ಡ ಮನುಷ್ಯನನ್ನು ಬಲ್ಲೆಯಾ?.

ಅವಳ ಮುಖವು ಮತ್ತಷ್ಟು ಕಪ್ಪಿಟ್ಟಿತು. ಕಂಪಿತ ದನಿಯಿಂದ ಅವಳು —ಅವನನ್ನೂ ಬಲ್ಲೆನು.

ನೀನು ಬೇಗನೆ ಮತ್ತೆ ಅವನ ಜಾಲದಲ್ಲಿ ಸಿಕ್ಕುಬೀಳುವೆ. ನಿಮ್ಮ ಈ ಶಾಸ್ತ್ರಿಯೂ ಅವನ ಸಹಾಯಕನಾಗಿರುತ್ತಾನೆ. ಗೋಪೀಚಂದನು ನಿನ್ನೆ ರಾತ್ರಿ ಇಲ್ಲಿಗೆ ಬಂದು ಕಿವಿಮಾತಾಡಿ ಹೋಗಿರುವನು. ಇಂದು ರಾತ್ರಿಯೇ

ಶಾಸ್ತ್ರಿಯು ನಿನ್ನನ್ನು ಅವರ ಕೈವಶ ಮಾಡುವನು. ಈ ಪತ್ರವನ್ನು ಓದಿ ಕೊಂಡರೆ ನಿನಗೆ ನನ್ನ ಮಾತಿನ ಸತ್ಯತೆಯು ಗೋಚರವಾಗುವದು, ಎಂದೆಂದು ಪಂತನು ಮುಂಚಿನದಿನದ ರಾತ್ರಿಯಲ್ಲಿ ಆ ಗೋಪೀಚಂದ-ಅಪರಿ ಚಿತ ವ್ಯಕ್ತಿಯಿಂದ ಕಸಿದುಕೊಂಡಿದ್ದ ಆ ಪತ್ರವನ್ನು ಆ ಸುಂದರಿಗೆ ತೋರಿ ಸಿದನು. ಅವಳು ಅದನ್ನು ಲಗುಬಗೆಯಿಂದ ಓದಿಕೊಂಡಳು. ಆ ಪತ್ರದ ಸಂಗತಿಯು ಈ ಬಗೆಯಾಗಿತ್ತು:--

"ಮಹಾನುಭಾವರೇ, ನನ್ನ ನಿಮ್ಮ ಪರಿಚಯವಿರದಿದ್ದರೂ ಗೋಪೀ ಚಂದನಿಂದ ನಿಮ್ಮ ಮಹತ್ತಾದ ಯೋಗ್ಯತೆಯನ್ನು ತಿಳಿದಿರುವೆನು. ಅಂಬಿ ಕೆಯ ಚಿಕ್ಕಪ್ಪನಾದ ಗೋವಿಂದರಾಯನು ನಿಮಗೆ ಅಂಬಿಕೆಯನ್ನರ್ಪಿಸುವ ಸಂಕಲ್ಪ ಮಾಡಿದ್ದನ್ನೂ ಕೇಳಿದೆನು. ಅಂಬಿಕೆಯು ನಿಮ್ಮನ್ನು ವರಿಸಲಿಚ್ಛಿ ಸದ್ದರಿಂದ ಅವನು ಇವಳನ್ನು ನಿಮ್ಮ ಬಿಡಾರಕ್ಕೆ ಗೌಪ್ಯವಾಗಿ ಕಳಿಸಿ ದ್ದುದೂ ತಿಳಿದು ಬಂತು; ಮತ್ತು ಆ ಕಾರಣದಿಂದಲೇ ಅಂಬಿಕೆಯು ತಮ್ಮ ಕಣ್ಣು ತಪ್ಪಿಸಿ ಓಡಿ ಬಂದಿರುವಳು. ಹೆಣ್ಣುಮಕ್ಕಳನ್ನು ದೊಡ್ಡವ ರಾಗುವವರೆಗೆ ಅವಿವಾಹಿತರನ್ನಾಗಿಡುವದೇ ಈ ತರದ ಅನರ್ಥಗಳಿಗೆ ಮೂಲವು. ತಮ್ಮ ವಿಷಯವಾಗಿ ಅಂಬಿಕೆಯು ಹಲವು ದೂರುಗಳನ್ನು ಹೇಳುತ್ತಿರುವಳು; ಆದರೆ ನಾನವುಗಳನ್ನು ನಿಜವೆಂದು ನಂಬಿಲ್ಲ. ಹೇಗಿ ದ್ದರೂ ಅವಳು ನಿಮ್ಮನ್ನೇ ವರಿಸಿ ಸುಖಿಯಾಗಬೇಕೆಂದು ನನ್ನ ಇಚ್ಛೆ. ಅಂಬಿಕೆಯು ಸದ್ಯದಲ್ಲಿ ನನ್ನ ವಶದಲ್ಲಿರುವಳು. ನನಗೆ ೨೦೦ ರೂಪಾಯಿ ಕೊಟ್ಟು ಅವಳನ್ನು ಒಯ್ಯಬೇಕೆಂದು ಗೋಪೀಚಂದನು ಹವಣಿಸುತ್ತಿರು ವನು. ಈ ವಿವಾಹಮಹೋತ್ಸವದಲ್ಲಿ ೩-೪ ನೂರು ರೂಪಾಯಿಗಳು ನನಗೆ ದಕ್ಷಿಣೆ, ಪೌರೋಹಿತ್ಯಾದಿಗಳಿಂದಲೇ ಬರುತ್ತಿರಲು, ಈ ತರದ ಕಳ್ಳ ವ್ಯವಹಾರ ಮಾಡಿ ನಾನು ಹೆಚ್ಚುಗಳಿಸಿದಂತೇನಾಗುವದು? ನಾನು ಔತ್ಸಾಯದಿಂದಾದರೂ ಅಂಬಿಕೆಯನ್ನು ನಿಮಗೆ ಲಗ್ನಮಾಡುವೆನು; ಆದರೆ ನೀವು ಮಾತ್ರ ೧೦೦೦ ರೂಪಾಯಿಗಳನ್ನು ಸಂಭಾವನೆಯೆಂದು ನನಗೆ ನಿಮ್ಮ ಗೋಪೀಚಂದನ ಮುಖಾಂತರವಾಗಿ ನಾಳೆಯೇ ಕಳಿಸಬೇಕು. ನಾಳೆ ನಿಮ್ಮಿಂದ ಹಣ ಬರದಿದ್ದರೆ ಅಂಬಿಕೆಯನ್ನು ಅವಳ ಇಚ್ಛೆಯ ಮೇರೆಗೆ ಬೇರೆ ಕಡೆಗೆ ಕಳಿಸಬೇಕಾಗುವದು. ಆ ಮೇಲೆ ಉಭಯತರ ಇಚ್ಛೆಗಳೂ ಫಲಿಸಲಿಕ್ಕಿಲ್ಲ. ತಿಳಿದಿರಲಿ. ಇತಿ--ನಾರಾಯಣಶಾಸ್ತ್ರೀ."

ಶಾಸ್ತ್ರಿಯ ಮನೆಯಲ್ಲಿದ್ದ ಆ ಅನಿಂದ್ಯಸುಂದರಿಯು ಮತ್ತಾರೂ ಇರದೆ ಮೊದಲನೇ ದಿವಸ ಮನೋರಮೆಯು ಕೇಶವರಾಯನ ಜಾಲದಿಂದ ಬಿಡಿಸಿ ಈ ಹಳ್ಳಿಗೆ ಕಳಿಸಲ್ಪಟ್ಟ ಅಂಬಿಕೆಯೇ ಇದ್ದಳು.

ಈ ಪತ್ರವನ್ನೋದಿ ಅಂಬಿಕೆಯು ತಬ್ಬಿಬ್ಬಾಗಿರುಗಹತ್ತಿತು. ಕೆಲಹೊತ್ತಿನ ನೋಲೆ ಅವಳು ಮೆಲ್ಲಗೆ ತನ್ನಷ್ಟಕ್ಕೆ ತಾನೆ—"ಈ ಪತ್ರವನ್ನಾದರೂ ನಿಜ ವೆಂದು ನಾನು ಹೇಗೆ ನಂಬಲಿ?" ಎಂದುಕೊಂಡಳು.

ನಾರಾಯಣ ಶಾಸ್ತ್ರಿಯ ಬೇರೆ ಕೈಬರಹದೊಡನೆ ಈ ಪತ್ರವನ್ನು ಹೋಲಿಸಿ ನೋಡಿದರೆ ನಿನಗೆ ನಂಬಿಕೆ ಹುಟ್ಟುವದು, ಎಂದು ಪಂತನು ನುಡಿಯಲು,

ನಾನು ಅವರ ಅಕ್ಷರಗಳನ್ನು ಬಲ್ಲೆನು. ಇವು ಅವರವೇ; ಆದರೆ ಶಾಸ್ತ್ರಿಗಳು ನಮ್ಮ ಪುರೋಹಿತರು, ಗುರುಗಳು. ಅವರು ಹೀಗೆಂದೂ ಬರೆಯಲಾರರು. ಈ ಪತ್ರವು ನಿಮಗೆಲ್ಲಿ ದೊರಕಿತು?

ನನ್ನಲ್ಲಿ ವಿಶ್ವಾಸವಿಟ್ಟರೆ, ನಾನು ಸಕಲವನ್ನೂ ನಿನಗೆ ಹೇಳುವೆನು. ನೀನು ಯಾರು? ನಿನ್ನ ಊರಾವದು? ನಿನ್ನ ತಂದೆಯ ಹೆಸರೇನು? ಆ ಕೇಶವರಾಯ-ಗೋಪೀಚಂದರಾರು? ನೀನು ಹೀಗೆ ಓಡಿಬರಲಿಕ್ಕೆ ಕಾರಣ ವೇನು? ಮುಂತಾದ ಸಂಗತಿಗಳನ್ನು ಸ್ವಲ್ಪವೂ ಮರೆಮಾಜದಂತೆ ತಿಳಿಸು. ನನ್ನಿಂದ ನಿನಗೆ ಕೊಂಚವೂ ಅನಿಷ್ಟವಾಗದೆಂಬದನ್ನು ಸೆರಗಿಗೆ ಗಂಟು ಹಾಕಿಕೋ. ನಿನ್ನೆ ಸಂಜೆಯಮುಂದೆ ನಾನು ಇಲ್ಲಿಗೆ ಬಂದಿದ್ದೆನು. ಆಗ ಅತ್ತಣ ಕಿಟಕಿಯನ್ನು ತೆರೆದಾಗ ನಿನಗೆ ಕಂಡ ಅಪರಿಚಿತನೇ ನಾನು. ಬಳಿಕ ನಾನು ಈ ತಲೆಬಾಗಿಲ ಬಳಿಗೆ ಬಂದೆನು. ಈ ಕದವು ಇಕ್ಕಲ್ಪಟ್ಟಿತ್ತು. ಈ ಕಿಟಕಿಯ ಬಿರುಕಿನೊಳಗಿಂದ ಒಳಗೆ ಹಣಿಕಿ ನೋಡಿದೆನು. ಒಳಗೆ ಯಾರೋ ಕಿವಿಮಾತಾಡುವರೆಂದು ತಿಳಿಯಿತು. ಕೂಡಲೆ ನಾನು ಹೊರ ಬದಿಗೆ ಕಿಟಕಿಯಹತ್ತಿರ ಕುಳಿತು ಕೇಳಹತ್ತಿದನು. ಹೀಗೆ ಮಾತಾಡು ತ್ತಿದ್ದವರಲ್ಲಿ ಒಬ್ಬನು ನಿಮ್ಮ ಪುರೋಹಿತನೂ, ಇನ್ನೊಬ್ಬನು ಗೋಪೀ ಚಂದನೂ ಆಗಿದ್ದರು. ಬಳಿಕ ಪುರೋಹಿತನು ಈ ಪತ್ರವನ್ನು ಬರೆದು ಅವನ ಕೈಗಿತ್ತನು. ಅವನು ಇದನ್ನು ಒಯ್ಯುತ್ತಿರುವಾಗ ದಾರಿಯಲ್ಲಿ ಅವನನ್ನು ಅಡ್ಡಗಟ್ಟಿ, ಪ್ರಾಣಾಂತ್ಯಸಂಕಟಕ್ಕೀಡಾಗಿ ಅವನಿಂದ ಈ ಪತ್ರವನ್ನು ಕಸಿದು ತಂದಿರುವೆನು.

ತಾವು ಈ ಪತ್ರಕ್ಕಾಗಿ ಇಷ್ಟು ಸಂಕಟಕ್ಕೇಕೆ ಒಳಗಾದಿರೆಂಬದು ನನಗೆ ತಿಳಿಯಲೊಲ್ಲದು?

ನಾನೊಬ್ಬ ಗುಪ್ತ ಪೋಲೀಸನು. ನಿನಗುಂಟಾದ ಸಂಕಟವನ್ನು ಅನುಮಾನದಿಂದಲೇ ತಿಳಿದು ಈ ಕೆಲಸಕ್ಕೆ ಕೈಹಾಕಿರುವೆನು.

ಅದನ್ನು ಕೇಳಿ ಅಂಬಿಕೆಯ ಮನಃಸ್ಥಿತಿಯು ಆಗ ಹೇಗಾಯಿತೆಂಬದು ವರ್ಣಿಸಲಸದಳವು. ಅಪನಂಬಿಗೆ ಹಾಗು ಸಂಶಯ, ಭಯ ಹಾಗು ವಿಸ್ಮಯ, ಉತ್ಕಂಠ ಹಾಗು ಹತಾಶೆ, ಹಾಗು ಘೋರತರವಾದ ಸಂದೇಹ ಇವೆಲ್ಲ ಒಟ್ಟಿಗೂಡಿ ಅವಳ ದುರ್ಬಲ ಹೃದಯವನ್ನು ನುಗ್ಗು ಮಾಡುತ್ತಿದ್ದವು. ಆದರಿಂದ ಅಸ್ಥಿರಚಿತ್ತಳಾದ ಅವಳು--ತಾವು ಗುಪ್ತ ಪೋಲೀಸರೇ ಆದರೆ, ಕೈಯಲ್ಲಿ ಸಿಕ್ಕಿದ್ದ ಆ ಗೋಪೀಚಂದನನ್ನು ಬಿಟ್ಟು ಕೊಟ್ಟರೇಕೆ?

ನಾನು ಅವನನ್ನು ಬಿಟ್ಟುಕೊಟ್ಟಿದ್ದರೂ ಮತ್ತೆ ಬೇಕಾದಾಗ ಹಿಡ ತರುವೆನು. ಯಾವನೊಬ್ಬನು ನಿಜವಾದ ಗುಹ್ನೆಗಾರನಿರುವನೋ ಇಲ್ಲವೋ ಎಂಬದನ್ನು ಖಾತ್ರಿಮಾಡಿಕೊಳ್ಳದ ವಿನಃ ನಾನು ಅವನನ್ನು ಹಿಡಿದು ದಂಡಣೆಗೆ ಗುರಿಮಾಡುವದಿಲ್ಲ. ಹಾಗೆ ಒಮ್ಮೆಲೆ ಹಿಡಿಯುವದರಿಂದ ಒಮ್ಮೊಮ್ಮೆ ಅಪರಾಧಿಯ ಕೂಡ ನಿರಪರಾಧಿಯೂ "ಇಂದ್ರಾಯ ತಕ್ಷಕಾಯ ಸ್ವಾಹಾ" ಎಂಬಂತೆ ದಂಡಣೆಗೊಳಗಾಗಬೇಕಾಗುತ್ತದೆ. ಆದುದರಿಂದ ನೀನು ನಿನ್ನ ನಿಜಸ್ಥಿತಿಯನ್ನಷ್ಟು ನನಗೆ ತಿಳಿಸು. ಇಲ್ಲಿಂದ ನಿನ್ನ ಬಿಡುಗಡೆಯ ಹಾಗು ಸಂರಕ್ಷಣೆಯ ಕೆಲಸವನ್ನು ನಾನು ಹೇಗೆ ಮಾಡುತ್ತೇನೆಂಬದು ನಿನಗೆ ಆ ಮೇಲೆ ತಿಳಿದೀತು.

---

## ೮ ಅಂಬಿಕೆಯ ಆತ್ಮವೃತ್ತ.

ಅಂಬಿಕೆಯು ಹೀಗೆ ಹೇಳತೊಡಗಿದಳು:-ನಮ್ಮ ಊರು ಬನವಾಸಿ. ನನ್ನ ತಂದೆಯ ಹೆಸರು ಸೀತಾರಾಮರಾಯನೆಂದು. ಕಳೆದ ವರ್ಷವೇ ಅವನು ತೀರಿಕೊಂಡನು. ಅದಕ್ಕೂ ಮೊದಲಿನ ವರ್ಷವೇ ನಮ್ಮ ಹಡೆದವ್ವನು ಗತಿಸಿದ್ದಳು. ನಾವು ಮೂರುಜನ ಅಕ್ಕತಂಗೆಯರು. ನಮ್ಮ ಅಕ್ಕನ ಹೆಸರು ಅಂಬಾ. ನನ್ನ ಹೆಸರು ಅಂಬಿಕೆಯೆಂಬದು ನಿಮಗೆ ಗೊತ್ತೇ

ಇದೆ. ನನ್ನ ತಂಗಿಗೆ ಅಂಬಾಲಿಕೆ ಎಂದೆನ್ನುವರು. ನಾವು ಮೂವರು ನಮ್ಮ ಚಿಕ್ಕಪ್ಪನಾದ ಗೋವಿಂದರಾಯನಿಂದ ಸಂರಕ್ಷಿಸಲ್ಪಡುತ್ತಿರುವೆವು. ನಮ್ಮ ಕಕ್ಕನು ಬೋರೆಬಂಗಾಲನು ತನ್ನ ಪಾಲಿನ ಎಲ್ಲ ಆಸ್ತಿಯನ್ನು ಹಾಳುಮಾಡಿಕೊಂಡವನೆಂದು ಕೇಳಿದ್ದೆವು. ನಮ್ಮ ತಂದೆಯು ಬೇನೆ ಬಿದ್ದೊಡನೆ ತನ್ನ ತಮ್ಮನಾದ ನಮ್ಮ ಕಕ್ಕನನ್ನು ಕರೆಯಿಸಿ, ಅವನಿಗೆ ನಾವು ಮೂರುಜನ ಹೆಣ್ಣುಮಕ್ಕಳನ್ನೂ ತನ್ನ ಲಕ್ಷಗಟ್ಟಲೆ ಬೆಲೆಯ ಸ್ಥಾವರ-ಜಂಗಮ ಆಸ್ತಿಯನ್ನೂ ಒಪ್ಪಿಸಿ, ನಮ್ಮನ್ನು ಚೆನ್ನಾಗಿ ಸಲುಹಿ ನಮ್ಮ ನಮ್ಮ ಇಷ್ಟದಂತೆ ಲಗ್ನಮಾಡಿಕೊಡಲು ತಿಳಿಸಿದ್ದನು. ನಮ್ಮ ಕಕ್ಕನಿಗೂ ಸಂತಾನವಿಲ್ಲ. ಅದರಿಂದ ಅವನೂ ಅವನ ಹೆಂಡತಿಯೂ ನಮ್ಮನ್ನು ಹಡೆದ ತಂದೆತಾಯಿಗಳಂತೆ ಸಲಹುತ್ತಿರುವರು. ನಮ್ಮ ಚಿಕ್ಕಪ್ಪನು ಈ ಪ್ರಕಾರ ನಮ್ಮನ್ನು ಮೋಸಗೊಳಿಸಬಹುದೆಂಬದನ್ನು ನಾವು ಕನಸು-ಮನಸುಗಳಲ್ಲಿಯೂ ಕಾಣೆವು.

ಕೆಲದಿನಗಳ ಹಿಂದೆ ನಮ್ಮ ಅಕ್ಕ ಅಂಬೆಯು ಊಟಕ್ಕೆ ಕುಳಿತಿರುವಾಗಲೇ ಸತ್ತಳು. ಆಕೆಯ ಬೇನೆಯ ಕಾರಣವು ನಮಗಾರಿಗೂ ತಿಳಿಯದು. ಸತ್ತ ಕೆಲಹೊತ್ತಿನಲ್ಲಿ ಅವಳ ಮೈಯೆಲ್ಲ ಹಸರು ಹಾಗಲಕಾಯಿಯಂತಾಗಿತ್ತು; ಅದರಿಂದ ಜನರು ಏನೇನೋ ಅಂದುಕೊಂಡರು. ಒಬ್ಬ ಸರಕಾರೀ ಡಾಕ್ಟರನೂ, ಪೋಲೀಸ ಅಮಲದಾರನೂ ಬಂದರು. ನಮ್ಮ ಕಕ್ಕನು ಗಾಬರಿಯಾದನು. ಅವನು ಅವರನ್ನು ಒಳಗೆ ಕರೆದೊಯ್ದು ಬಹಳ ಹೊತ್ತಿನವರೆಗೆ ಏನೇನೋ ಕೊಟ್ಟು ಉಪಚರಿಸಿದನು. ಸಂಜೆಯಾದ ಬಳಿಕ ಅವರು ಹೊರಹೊರಟರು. ಅವರು ಎದ್ದು ಹೋದ ಬಳಿಕ ಕಕ್ಕನು ಅವಸರವಸರದಿಂದ ನಮ್ಮ ಅಕ್ಕನ ಹೆಣವನ್ನು ಸುಡಿಸಿದನು. ಆಗ ನಮ್ಮ ಕಕ್ಕನು ಅಷ್ಟೇಕೆ ಗಾಬರಿಗೊಂಡಿದ್ದನೋ ನಮಗದು ಈಗಲೂ ತಿಳಿಯದು.

ನಮ್ಮ ತಂದೆ ತೀರಿಕೊಂಡ ಕೆಲದಿನಗಳಲ್ಲಿಯೇ ಕೇಶವರಾಯನೆಂಬ ವೈದ್ಯರಾಜನು ನಮ್ಮ ಕಕ್ಕನ ಕಡೆಗೆ ಆಗಾಗ್ಗೆ ಬರಹೋಗಹತ್ತಿದನು. ಕೇಶವನು ಒಳ್ಳೇ ಸಸಿಮಾತಿನವನು. ಅದರಿಂದ ನಮ್ಮ ಕಕ್ಕನನ್ನು ಅವನು ಕೆಲದಿನಗಳಲ್ಲಿಯೇ ತನ್ನ ಸೂತ್ರದ ಗೊಂಬೆಯನ್ನಾಗ ಮಾಡಿಬಿಟ್ಟನು. ಬರಬರುತ್ತ ಕೇಶವರಾಯನು ನಮ್ಮಲ್ಲಿ ದಿನದ 10-12 ತಾಸುಗಳನ್ನು ಕಕ್ಕನ

ಕೂಡ ಮಾತನಾಡುವದರಲ್ಲಿಯೂ, ಇಸ್ಪೇಟ-ಗಂಜೀಫುಗಳ ಆಟಗಳಲ್ಲಿಯೂ ಊಟಉಡಿಗೆಗಳಲ್ಲಿಯೂ ಕಳೆಯಹತ್ತಿದನು. ಅದರಿಂದ ಅವನ ಸಲಿಗೆಯು ನಾವು ಮೂರು ಜನ ಅಕ್ಕ-ತಂಗೆಯರಿಗೂ ಆಗಿ, ನಮ್ಮ ಕಕ್ಕನಂತೆಯೇ ಅವನನ್ನು ನಾವು ಕಾಣಹತ್ತಿದೆವು; ಆದರೆ ಅವನು ಮನುಷ್ಯನಲ್ಲ-ನರ ಪಿಶಾಚಿಯು. ಅವನ ಮನಸ್ಸಿನ ನಿಜಸ್ಥಿತಿಯು ಆಗ ನಮಗಾರಿಗೂ ಗೊತ್ತಾಗಲಿಲ್ಲ. ಈಗೊಂದು ವಾರದ ಹಿಂದೆ ಆ ಕೇಶವ ವೈದ್ಯನು ಯಾವದೋ ಒಂದು ಔಷಧದ ಪಾನದಿಂದ ನನ್ನ ಸ್ಮೃತಿದಪ್ಪಿಸಿ, ನನ್ನನ್ನು ಯಾವದೋ ಒಂದು ಗುಪ್ತಸ್ಥಳಕ್ಕೆ ಒಯ್ದಿದ್ದನು. ಆ ಹಾಳುಮನೆಯಲ್ಲಿ ಬೇರೆ ಯಾರೂ ಇರುತ್ತಿರಲಿಲ್ಲ. ಯಾವಾಗಾದರೊಮ್ಮೆ ಆ ದೆವ್ವನ ಮುಸು ಡೆಯ ಗೋಪೀಚಂದನು ನನ್ನ ಬಳಿಗೆ ಬಂದು—ಮತ್ತೆ ನಿನಗೇನು ಬೇಕು? ನಮ್ಮ ಯಜಮಾನನನ್ನು ವರಿಸುವೆಯೋ ಇಲ್ಲವೋ? ವರಿಸಿದರೆ ಮಹಾ ರಾಣಿಯಂತೆ ಪ್ರಾಸಾದ ಸದೃಶವಾದ ಮಹಾಲಿನಲ್ಲಿರಹತ್ತುವೆ ಇಲ್ಲದಿದ್ದರೆ ಈ ಹಾಳು ಗುಡಿಸಲಲ್ಲೇ ಕಠೋರವಾಗಿ ನಿನ್ನ ಅಂತವಾಗುವದು, ಎಂದು ಕರ್ಕಶ ದನಿಯಿಂದ ನುಡಿದು, ನನ್ನ ಬಳಿಯಲ್ಲಿ ಕೆಲ ಆಹಾರದ ಪದಾರ್ಥ ಗಳನ್ನೂ ನೀರನ್ನೂ ತಂದಿಟ್ಟು ಹೋಗುತ್ತಿದ್ದನು. ಮೊನ್ನಿನ ದಿನ ಮೂರೂಸಂಜೆಗೆ ಆ ಕೇಶವರಾಯನು ನನ್ನ ಬಳಿಗೆಬಂದು ತನ್ನನ್ನು ಲಗ್ನಮಾಡಿ ಕೊಳ್ಳುವ ವಿಷಯವಾಗಿ ನಾನಾ ಬಗೆಯ ಪ್ರಲೋಭವನ್ನು ತೋರಿದನು. ಅದಕ್ಕೆ ನಾನು ಮನಸ್ಸು ಮಾಡದ್ದರಿಂದ ಅವನು ನನ್ನಲ್ಲಿ ಬಲಾತ್ಕಾರವನ್ನು ಮಾಡಬಂದನು. ನಾನು ಅವನಿಗೆ ಮಣಿಯಲಿಲ್ಲ. ಅಷ್ಟರಲ್ಲಿ ಮನೋರಮ ಎಂಬ ಹೆಸರಿನ ಹುಚ್ಚ ಹೆಂಗಸು ನನ್ನನ್ನು ಆ ಕುತ್ತದಿಂದ ಪಾರುಮಾಡಿ ಇತ್ತಣ ದಾರಿಯನ್ನು ತೋರಿಸಿದಳು. ಆ ಹುಚ್ಚಿಯು ಆ ಕೇಶವವೈದ್ಯನ ಹೆಂಡತಿಯಂತೆ! ಆ ಉಭಯ ದಂಪತಿಗಳಲ್ಲಿಯ ಅನುರಾಗದಲ್ಲಿ ಆಕಾಶ-ಪಾತಾಳಗಳಷ್ಟು ಸಾಮ್ಯ-ವೈಷಮ್ಯವಿರಬಹುದು. ಅದಿರಲಿ.

ನಾನು ಅಂದು ರಾತ್ರಿ ಆ ಮಳೆಯಲ್ಲಿ ಹೊರಟು ಈ ಹಳ್ಳಿಯ ಅಂಗ ಡಿಗೆ ಬಂದು, ಅಂಗಡಿಕಾರನ ಬಾಯಿಂದ ಶಾಸ್ತ್ರಿಗಳ ಈ ಮನೆಯ ದಾರಿ ತಿಳಿದು, ಕೆರೆಯ ದಂಡೆಯನ್ನು ಹಿಡಿದು ಓಡುತ್ತಬರುತ್ತಿರಲು, ಗೋಪೀ ಚಂದನು ನನಗೆ ತೀರ ಸಮೀಪದಲ್ಲಿಯೇ ಖಡ್ಗಹಸ್ತದಿಂದ ಬಂದುದು ದನ್ನು ಮಿಂಚಿನ ಬೆಳಕಿನಲ್ಲಿ ಕಂಡೆನು. ಕೂಡಲೆ ನಾನು “ಯಾರಿದ್ದೀ

ರಲ್ಲೀ? ಅಪ್ಪಾ ಬನ್ನಿರಿ, ಈ ನೀಚನು ನನ್ನನ್ನು ಕೊಲ್ಲುತ್ತಿರುವನು, ಬಿಡಿಸ ಬನ್ನಿರಿ ಸತ್ತೆನು-ಸತ್ತೆನು'' ಎಂದು ಕೂಗಿದೆನು. ಇನ್ನೊಂದು ಕ್ಷಣ ತಡೆದಿದ್ದರೆ ನಾನು ಅವನ ಕೈವಶಳಾಗುವವಳೇ; ಆದರೆ ದೈವವಶಾತ್ ನನಗೊಂದು ಯುಕ್ತಿ ನೆನಪಾಯಿತು. ಆ ಕೂಡಲೆ ನಾನು ಮತ್ತಷ್ಟು ಓಡಹತ್ತಿದಂತೆ ನಟಿಸಿ, ಸಮೀಪದ ಒಂದು ದೊಡ್ಡಮರದ ಹೊದರಿನಲ್ಲಿ ಸೇರಿಕೊಂಡು ಕುಳಿತೆನು ಗೋಪೀಚಂದನು ನಾನು ಓಡಿಹೋದೆನೆಂದು ಅತ್ತಿಂದ ಇತ್ತ ಹಲವುಸಾರೆ ಓಡಾಡಿ ಹುಡುಕಿದನು. ಎಲ್ಲಿಯೂ ಅವನಿಗೆ ನನ್ನ ಶೋಧವಾಗಲಿಲ್ಲ. ಆದರಿಂದ ಅವನು ಬಂದದಾರಿ ಹಿಡಿದು ಹೊರಟು ಹೋದನು.

ಇಷ್ಟಾಗುವದರೊಳಗೆ ಮಳೆಯ ವೇಗವು ಕಡಿಮೆಯಾಯಿತು. ನಾನು ಆ ಗಿಡದ ಹೊದರಿನಿಂದ ಹೊರಬಿದ್ದೆನು. ಆಗ ಮತ್ತೆ ನನ್ನನ್ನಾರೋ ಅನುಸರಿಸುತ್ತಿರುವಂತೆ ತೋರಿತು. ಕೂಡಲೆ ನಾನು ಮಿಂಚಿನ ಬೆಳಕಿನಲ್ಲಿ ಆ ವ್ಯಕ್ತಿಯ ಕಡೆಗೆ ನೋಡಲು, ಅವನು ಗೋಪೀಚಂದನಾಗಿರದೆ, ನಮ್ಮ ಪುರೋಹಿತ ನಾರಾಯಣಶಾಸ್ತ್ರಿಯಾಗಿದ್ದನು ಕೂಡಲೆ ನಾನು ಅವನನ್ನು ಸರಿಸಿ ಅವನ ಈ ಮನೆಗೆ ಬಂದೆನು. ಅವನು ನನ್ನನ್ನು ಮನೆಯೊಳಗೆ ಹೊಗಿಸಿ, ಮತ್ತೆಲ್ಲಿಗೋ ಆಗಲೇ ತವಕದಿಂದ ಹೊರಟು ಹೋದನು. ಹೊರಗೆ ಹೋಗುವಾಗ ಅವನು ನನ್ನ ಸೀರೆಯ ಒಂದು ಮೊಳ ಸೆರಗನ್ನೂ, ಒಂದು ಚೂರಿಯನ್ನೂ, ನನ್ನ ಹೆಳಲೊಳಗಿನ ಎರಡು ಬೆಳ್ಳಿಯ ಅರಳೆಗಳನ್ನೂ ತಕ್ಕೊಂಡು ಹೋದನು. ತದನಂತರ ಅವನು ಅವುಗಳನ್ನೇನು ಮಾಡಿದನೋ ತಿಳಿಯದು! ರಾಯರೇ, ನೀವು ಯಾರೇ ಇರ್ರಿ. ನನ್ನನ್ನಷ್ಟು ಬೇಗನೆ ನಮ್ಮ ಚಿಕ್ಕಪ್ಪನ ಮನೆಗೆ ಕಳುಹಿಕೊಡಿರಿ. ನಾನು ನಿಮ್ಮ ಈ ಉಪಕಾರವನ್ನು ಜನ್ಮಜನ್ಮಾಂತರದಲ್ಲಿಯೂ ಮರೆಯಲಾರೆನು. ಮನೆಯಲ್ಲಿ ನಮ್ಮ ತಂಗಿ, ಅಂಬಾಲಿಕೆಯು ನನ್ನ ವಿಷವಾಗಿ ಆಲೋಚಿಸಿ ಎಷ್ಟು ದುಃಖಿಸುತ್ತಿರುವಳೋ ಏನೋ? ದೇವಾ, ನಾನು ಯಾವ ಅಪರಾಧವನ್ನು ಮಾಡಿರುವೆನೆಂದು ನನ್ನನ್ನೀಪರಿ ಕಷ್ಟಕ್ಕೀಡು ಮಾಡಿರುವೆ? ಎಂದೆಂದು ಕಣ್ಣೀರು ಸುರಿಸಹತ್ತಿದಳು

ಅಂಬಿಕೆಯ ಸಂಗತಿಯನ್ನು ಕೇಳಿ ಪಂತನ ಮನೋಕಲ್ಪನೆಗಳ ಮೇಲೆ ಮತ್ತಿಷ್ಟು ಪ್ರಕಾಶ ಬಿದ್ದಿತು. ನಾರಾಯಣಶಾಸ್ತ್ರಿಯು ಆ ಅಡವಿಗೆ

ಎರಡುಸಾರೆ ಹೋಗಿರುವನೆಂಬ ತನ್ನ ಕಲ್ಪನೆಯು ಸತ್ಯವಾದದ್ದೆಂದು ತಿಳಿದು ಅವನಿಗೆ ಪರಮ ಆಹ್ಲಾದವಾಯಿತು. ಬಳಿಕ ಅವನು ಅಂಬಿಕೆ ಯನ್ನುದ್ದೇಶಿಸಿ:—ಕೇಶವರಾಯನ ವಿಷಯವಾಗಿ ಮತ್ತೇನಾದರೂ ನಿನಗೆ ಗೊತ್ತಿದೆಯೊ? ನಿನಗೆ ಹದಿನೈದು ವರ್ಷಗಳಾಗಿದ್ದರೂ ಇನ್ನೂ ನಿನ್ನ ಲಗ್ನವೇಕಾಗಿಲ್ಲ?

ನಮ್ಮಪ್ಪ ಬದುಕಿದ್ದರೆ ಈ ವೊದಲೇ ನನ್ನ ಲಗ್ನವಾಗಿ ಹೋಗು ತ್ತಿತ್ತು? ನಾನು ಹದಿಮೂರು ವರ್ಷದವಳಿರುವಾಗಲೇ ನನಗೆ ವರನಿಶ್ಚಯ ವಾಗಿತ್ತು. ನನ್ನನ್ನು ಧಾರವಾಡ ಜಿಲ್ಲೆಯೊಳಗಿನ ಹಾನಗಲ್ಲ ಊರಿಗೆ ಕೊಡಬೇಕೆಂದು ನಮ್ಮಪ್ಪನು ಗೊತ್ತು ಮಾಡಿದ್ದನು; ಆದರೆ ಲಗ್ನಮಾಸ ಬರುವಷ್ಟರಲ್ಲಿ ನನ್ನ ತಂದೆಗೆ ಕಾಹಿಲೆಯಾಯಿತು. ಅದರಿಂದ ಆ ಕಾರ್ಯವು ಹಿಂದೆ ಬಿದ್ದದ್ದು ಬಿದ್ದೇ ಹೋಯಿತು. ನಮ್ಮ ಕಕ್ಕನು ವ್ಯಸನಾಧೀನನು. ಅದರಿಂದಲೋ ಮತ್ತಾವ ಕಾರಣದಿಂದಲೋ ಅವನು ನನ್ನ ಲಗ್ನ ಮಾಡಲೇ ಇಲ್ಲ. ಕೇಶವನ ವಿಷಯವಾಗಿ ನನಗೆ ಮತ್ತೇನೂ ಗೊತ್ತಿಲ್ಲ.

ನೀನು ಇನ್ನು ಬಹು ದಿನ ಕಷ್ಟಪಡಬೇಕಾಗಿಲ್ಲ. ಇಂದೇ ನಿನ್ನನ್ನು ಇಲ್ಲಿಂದ ಬಿಡಿಸುವೆನು; ಆದರೆ ನೀನು ಮಾತ್ರ ನಾನು ಹೇಳುವಂತೆ ನಡೆ ಯೆಂದರಾಯಿತು, ಎಂದೆಂದು ಪಂತನು ಆಕೆಯ ಕಿವಿಯಲ್ಲಿ ಏನೇನೋ ಬಹುಮೆಲ್ಲಗೆ ಹೇಳಹತ್ತಿದನು.

ನೀರಿಗೆ ಹೋಗಿದ್ದ ನಾರಾಯಣ ಶಾಸ್ತ್ರಿಯ ಹೆಂಡತಿಯು ಈ ವೊದಲೇ ಕೊಡತುಂಬಿಕೊಂಡು ಬಾಗಿಲ ಬಳಿಗೆ ಬಂದಿದ್ದಳು. ಆಗ ಪಂತನಿಗೂ ಅಂಬಿಕೆಗೂ ಸ್ವಾರಸ್ಯಪೂರ್ಣವಾದ ಮಾತುಗಳು ನಡೆದಿದ್ದವು. ಅವನ್ನು ಕೇಳಿ ಆ ಬ್ರಾಹ್ಮಣಿಯು ಅವರೇನೇನು ಮಾತಾಡುತ್ತಿರುವರೆಂಬ ದನ್ನು ತಿಳಿಯುವದಕ್ಕಾಗಿ ಬಾಗಿಲ ಹೊರಗೇ ನಿಂತುಕೊಂಡಳು. ಅವರ ಭಾಷಣದೊಳಗಿನ ಕೆಲವು ಶಬ್ದಗಳು ಆವಳಿಗೆ ಕೇಳಿಸುತ್ತಿದ್ದವು; ಹಲವು ಕೇಳಿಸುತ್ತಿರಲಿಲ್ಲ. ಕೇಳಿಸಿದ ಮಾತುಗಳಲ್ಲಿಯ ಕೆಲವುಗಳ ಅರ್ಥವಾಗು ತ್ತಿತ್ತು; ಉಳಿದ ಎಷ್ಟೋ ಮಾತುಗಳ ಅರ್ಥವೇ ಆ ಹಿಂದಿನಕಾಲದ ಮುದು ಕೆಗೆ ಆಗುತ್ತಿರಲಿಲ್ಲ. ಆಕೆಯು ಬಹಳ ಹೊತ್ತಿನವರೆಗೆ ಬಗಲಲ್ಲಿ ನೀರು ತುಂಬಿದ ಕೊಡವನ್ನೂ, ಕೈಯಲ್ಲಿ ತಂಬಿಗೆಗಳನ್ನೂ ಹಿಡಿದುಕೊಂಡು ಅಲ್ಲಿ ಯೇ ನಿಂತುಕೊಂಡಳು. ಹೀಗೆ ಕಂಕುಳದಲ್ಲಿ ಕೊಡ-ಗಿಂಡಿಗಳನ್ನೂ, ತಲೆಯ

ಮೇಲೆ ಬಟ್ಟೆಯು ಹಿಂಬಿ, ಅವುಗಳ ಮೇಲೆ ತುಂಬಿದ ಬಿಂದಿಗೆಯನ್ನೂ, ಕೈಗಳಲ್ಲಿ ಹಲವು ತಂಬಿಗೆಗಳನ್ನೂ ಹೊತ್ತುಕೊಂಡು, ತಾಸೆರಡು ತಾಸುಗಳ ವರೆಗೆ ಓಣಿಯು ಚರಂಡಿಯು ಪಕ್ಕದಲ್ಲಿ ನಿಂತು, ಆಚೇಕೇರಿಯು ಗುಂಡಕ್ಕನ ದೂರುಗಳನ್ನು ಈಚೇಕೇರಿಯು ಕೃಷ್ಣಿಯು ಮುಖದಿಂದ ಕೇಳುವ ರೂಢಿಯು ನಮ್ಮ ಹಳ್ಳಿಯೂರ ಬ್ರಾಹ್ಮಣರ ಹೆಣ್ಣುಮಕ್ಕಳಿಗೆ ಹೆಚ್ಚಾಗಿ ಇರುತ್ತದೆ. ಭಾಷಣದ ಸ್ವಾರಸ್ಯವು ಮುಗಿಯುವವರೆಗೂ ಅವರ ತಲೆ ಕೈಗಳು ನೋಯು ವದಿಲ್ಲ. ಇದರಂತೆಯೇ ಆ ಮುದುಕೆಯ ಸ್ಥಿತಿಯೂ ಆಯಿತು. ಪಂತ-ಅಂಬಿಕೆಯರ ಭಾಷಣದ ಅರ್ಥವಾಗದಾಗಲು, ಆ ಮುದುಕೆಯು ಕೈಗಳು ಸೋತು ಅವು ಥರಗುಟ್ಟ ನಡುಗಲಾರಂಭಿಸಿದವು ಆದರೂ ಅವಳು ಕೈಯೊಳಗಿನ ತಂಬಿಗೆಯನ್ನು ಕೆಳಗಿಡಲಿಲ್ಲವಾದ್ದರಿಂದ, ಆ ತಂಬಿಗೆಯು ಕಳಚಿ ಥಬ್ಬ ಎಂದು ಕೆಳಗಿನ ಹಾಸುಗಲ್ಲಿನ ಮೇಲೆ ಬಿದ್ದಿತು. ಅದರಿಂದ ಮುದುಕೆಯು ಹೊರಗೆ ಬಂದ ಸೂಚನೆಯು ಅನಾಯಾಸವಾಗಿ ಆಗಲು, ಅಂಬಿಕೆಯು ತವಕದಿಂದ ಒಳಗೆ ಹೋದಳು. ಪಂತನು ಬಿದ್ದುಕೊಂಡಲ್ಲಿಂದ ಹೊರಗೆ ಬಂದು,—ತಾಯಿ, ನನ್ನ ತೃಷೆಯು ಶಾಂತವಾಯಿತು. ನಾನಿನ್ನು ಶಾಸ್ತ್ರಿಗಳ ಕಡೆಗೆ ಹೋಗುತ್ತೇನೆ, ಎಂದು ಆ ಮುದುಕೆಗೆ ಹೇಳಿ ನಡೆದನು.

ಅಲ್ಪಾವಕಾಶದಲ್ಲಿ ಶಾಸ್ತ್ರಿಯು ಪಂಡಿತನೊಡನೆ ಬಂದನು. ರೋಗಿಯು ಹೊರಟು ಹೋದ ಸುದ್ದಿಯನ್ನು ಕೇಳಿ, ವೈದ್ಯನು ಸುಮ್ಮನೆ ಹೊರಡಬೇಕಾಯಿತು. ಬಳಿಕ ಮುದುಕೆಯು ಪಂತ-ಅಂಬಿಕೆಯರ ಏಕಾಂತವನ್ನು ಶಾಸ್ತ್ರಿಗೆ ಅರುಹಿದಳು. ಅವರಿಬ್ಬರೂ ಬಿಡಿಸಿ ಬಿಡಿಸಿ ಕೇಳಿದರೂ ಅಂಬಿಕೆಯು ಒಂದುತುಟಿ ಎರಡು ಮಾಡಲಿಲ್ಲ. ಇಷ್ಟಾಗುವದರೊಳಗಾಗಿ ಸಂಜೆಯು ೫ ಗಂಟೆಯಾಯಿತು ೨೦-೨೫ ಜನ ಪೋಲೀಸ ಜನರೊಡನೆ ಅಂಬಿಕೆಯು ತಾಯಿಯು ತಂದೆಯು ಆಗ ನಾರಾಯಣಶಾಸ್ತ್ರಿಯು ಮನೆಗೆ ಬಂದು,—ಈ ಮನೆಯಲ್ಲಿ ನಮ್ಮ ಹುಡುಗಿ-ಅಂಬಿಕೆಯಿರುವಳೇ? ಎಂದು ಪ್ರಶ್ನೆ ಮಾಡಿದನು. ಶಾಸ್ತ್ರಿಯಾಗಲಿ-ಅವನ ಹೆಂಡತಿಯಾಗಲಿ ಅಹುದು-ಇಲ್ಲವೆಂದು ನುಡಿಯುವ ಮೊದಲೇ ಅಂಬಿಕೆಯು ಒಳಗಿಂದ ಧಾವಿಸುತ್ತ ಹೊರಗೆ ಬಂದಳು. ಕೂಡಲೆ ಅವಳನ್ನು ಹೊರಗಿನ ಮೇಣೆಯಲ್ಲಿ ಕೂಡ್ರಿಸಿಕೊಂಡು ನಡೆದರು.

ಆ ಪೋಲೀಸರ ಗುಂಪಿನಲ್ಲಿ ಪಂತನೂ, ಜೇಲರ ಭುಜಂಗರಾಯನೂ ಬಂದಿದ್ದರು. ಅವರು ಶಾಸ್ತ್ರಿಯನ್ನು ಕುರಿತು:—ಶಾಸ್ತ್ರಿಗಳೇ, ಕೊಲೆಯಾದ ಯುವತಿಯನ್ನು ಬದುಕಿಸುವ ವಿದ್ಯೆಯನ್ನು ಕಲಿತಿರುವಿರಾ? ಅಯ್ಯೋ ಪಾಪ! ಇಷ್ಟು ಕಷ್ಟಪಟ್ಟು ಗುಂಡಿಕ್ಕೆ ಹಾಕಿದ ನಿಮ್ಮ ಲಾಗವು ತಪ್ಪಿತಲ್ಲವೆ? ಉಪಾಯವಿಲ್ಲ, ಎಂದಂದು ಗಹಗಹಿಸಿ ನಕ್ಕರು.

---

## ೯ ಪಾರಿಯಲ್ಲಿ.

ಅಂಬಿಕೆಯನ್ನು ಕೇಶವನ ಜಾಲದಿಂದ ಪಾರುಮಾಡಿದರೂ ಪಂತನು ನಿಶ್ಚಿಂತನಾಗಲಿಲ್ಲ ಯಾಕಂದರೆ ಈ ಕಥಾನಕದ ಮೂರನೇ ಪ್ರಕರಣದಲ್ಲಿ ವಿವರಿಸಿದ ಬಾಲಿಕೆಯ ಕೊಲೆಯನ್ನು ಪತ್ತೆಹಚ್ಚುವ ಕೆಲಸವೊಂದು ಬಾಕಿ ಉಳಿದೇ ಇತ್ತು. ಅಂಬಿಕೆಯ ಪ್ರಕರಣದಿಂದ ಪಂತನಿಗೆ ಒಂದು ಮಾತಿನ ಸ್ಪಷ್ಟೀಕರಣವಾದಂತಾಗಿತ್ತು. ಅದಾವುದೆಂದರೆ,—ಅಂಬಿಕೆಯನ್ನಾಪರಿಪೀಡಿಸಲು ಯತ್ನಿಸುತ್ತಿದ್ದ ಕೇಶವಾದಿಗಳ ಅಂಗವು ಹೆಚ್ಚು-ಕಡಿಮೆ ಮಾನದಿಂದ ಆ ಪ್ರಸ್ತುತ ಬಾಲಿಕೆಯ ಕೊಲೆಯಲ್ಲಿ ಇರಬೇಕೆಂದು; ಆದರೆ ನಿಜ ಸಂಗತಿಯು ಗೊತ್ತಾಗದ ಹೊರತು ಅವನು ಯಾರನ್ನೂ ಸೆರೆಹಿಡಿಯುವಂತಿರಲಿಲ್ಲ. ಈಗ ಅವನು ಆ ಬಾಲಿಕೆಯ ಕೊಲೆಯ ಪತ್ತೆಗಾಗಿಯೇ ಸಂಪೂರ್ಣವಾಗಿ ತೊಡಗಿಕೊಂಡನು.

ಮುಂದೊಂದು ದಿನ ಪಂತನು ಬತ್ತೇರಿ ಎಂಬ ಗ್ರಾಮದಿಂದ ತನ್ನ ಊರಿಗೆ ಹೊರಟನು. ಆಗ ಅಪರಾಹ್ಣ ಕಾಲವಾಗಿತ್ತು. ಬತ್ತೇರಿಯು ಸಿದ್ಧದೇವಪುರಕ್ಕೆ ಮೂರೇ ಮೈಲು ದೂರದಲ್ಲಿ. ಸೂರ್ಯನು ಮುಳುಗಲಿಕ್ಕೆ ಇನ್ನು ಹೆಚ್ಚು ಅವಕಾಶವಿರದಿದ್ದರೂ, ತನ್ನ ಊರು ಸಮೀಪದಲ್ಲಿದ್ದು ಹೆಚ್ಚಾಗಿ ಓಡಾಡಿದ ದಾರಿಯಾದುದರಿಂದ ಪಂತನು ಸಾವಕಾಶವಾಗಿ ಮೋಜಿನಿಂದ ನಡೆದಿದ್ದನು. ದಾರಿಯಲ್ಲಿ ಅವನಿಗೊಂದು ವಿಸ್ತೃತವಾದ ಕೆರೆ ಹತ್ತಿತು. ಅದರ ಸುತ್ತಲೂ ನಾನಾ ಬಗೆಯ ಗಗನಚುಂಬಿತ ವೃಕ್ಷಗಳು ಫಲ-ಪುಷ್ಪಗಳಿಂದ ಪರಿಶೋಭಿಸುತ್ತಿದ್ದವು. ಅಸ್ತಾಚಲಕ್ಕೆ ಭರದಿಂದ ನಡೆದಿದ್ದ ರವಿಯ ಕಿರಣಗಳು ಆ ಕಡೆಯ ವೃಕ್ಷಗಳ ಹರಿ-ಟೊಂಗೆಗಳ

ಪಳುಕಿನೊಳಗಿಂದ ಹಾಯ್ದು ಬಂದು ಸರೋವರದ ಸ್ವಚ್ಛವಾದ ನೀರಿನಲ್ಲಿ ಬಿದ್ದು, ಪೂರ್ವದಿಕ್ಕಿನ ಗಿಡ-ಬಳ್ಳಿಗಳ ಮೇಲೆ ಪ್ರತಿಬಿಂಬಿತವಾಗುತ್ತಿದ್ದವು. ಪಂತನು ಆ ಸರೋವರದ ದಂಡೆಯಲ್ಲಿ ನಿಂತು ಆ ಸೌಂದರ್ಯವನ್ನು ಕೆಲ ನಿಮಿಷಗಳ ವರೆಗೆ ಏಕಾಗ್ರಚಿತ್ತದಿಂದ ನೋಡುತ್ತಿದ್ದನು.

ಅಷ್ಟರಲ್ಲಿ ಆ ಸರೋವರದ ದಕ್ಷಿಣದಿಕ್ಕಿನಿಂದ ಯಾರೋ ಕೆರೆಯಲ್ಲಿ ದುಮುಕಿದ ಸಪ್ಪಳವಾಯಿತು. ಪಂತನು ಕಣ್ಣೆತ್ತಿನೋಡುತ್ತಾನೆ, ಅಲ್ಲಿ ಯೊಬ್ಬ ನವಪ್ರಾಯದ ಸುಂದರ ತರುಣಿಯು ಆಳವಾದ ನೀರಲ್ಲಿ ಬಿದ್ದು ಗುಟುಕುನೀರು ಕುಡಿಯಹತ್ತಿದ್ದಳು. ಕೂಡಲೆ ಅವನು ಅತ್ತ ಓಡುತ್ತ ಹೋಗಿ, ಕೆರೆಯಲ್ಲಿ ಹಾರಿಕೊಂಡನು. ಹಾಗು ಕೆಲನಿಮಿಷಗಳಲ್ಲಿಯೇ ಆ ತರುಣಿಯ ಕೂದಲು ಹಿಡಿದು ಅವಳನ್ನು ನೀರಮೇಲಕ್ಕೆ ತಂದನು. ಇದೇ ಸಮಯಕ್ಕೆ ಆ ಹಳ್ಳಿಯ ಮತ್ತೆ ಕೆಲಜನರು ಆ ಸರೋವರಕ್ಕೆ ಬಂದರು. ಅವರೆ ಲ್ಲರೂ ಸೇರಿ ಆ ಸುಂದರಿಯನ್ನು ನೀರಹೊರಗೆ ತಂದು, ಪಾವಟಿಗೆಗಳ ಮೇಲೆ ಮಲಗಿಸಿ ಅವಳ ಬೆನ್ನಮೇಲೆ ತುಳಿದರು. ಅದರಿಂದ ಅವಳು ಕುಡಿದಿದ್ದ ನೀರೆಲ್ಲ ಹೊರಹೊರಟು ಹೋಯಿತು. ತುಸುಹೊತ್ತಿನಲ್ಲಿ ಆ ಯುವತಿಗೆ ಸ್ಮೃತಿ ಯುಂಟಾಗಲು ಅವಳು ಪಂತನನ್ನುಕುರಿತು—ನೀವು ನನ್ನನ್ನು ಬದುಕಿಸಿದ್ದು ಒಳಿತಾಗಲಿಲ್ಲ. ಇಂದು ನಾನು ಈ ಲೋಕದಿಂದ ಮುಕ್ತಳಾಗುವದಕ್ಕಾಗಿ ಯೇ ಮನೆಯವರ ಕಣ್ಣುತಪ್ಪಿಸಿ ಈ ಜಲಾಶಯದಲ್ಲಿ ಬಿದ್ದಿದ್ದೆನು, ಎಂದಳು.

ಪಂತನು ಅವಳ ಮಾತಿನ ಕಡೆಗೆ ವಿಶೇಷ ಲಕ್ಷ್ಯಗೊಡದೆ ಅವಳನ್ನು ಸಮೀಪದ ಆ ಹಳ್ಳಿಯ ಅವರ ಮನೆಗೆ ಕರೆದೊಯ್ದನು. ಆ ಯುವತಿಯು ಕ್ರಿಶ್ಚನ್ನಳು. ಅವಳ ತಂದೆಯ ಹೆಸರು ಲಾಂಗಮನ್ನನೆಂದು. ಲಾಂಗಮನ್ನನು ಆ ಊರಿನಲ್ಲಿ ಧನಿಕನು. ಗುಣಶಾಲಿಯು. ಅವನು ೬೦ ವರ್ಷವಯಸ್ಸಿ ನವನಾಗಬಹುದು. ಪಂತನಕೂಡ ಬಂದ ಜನರು `ಮೇರಿಯ ವೃತ್ತಾಂತ ವನ್ನು ಲಾಂಗಮನ್ನನಿಗೆ ತಿಳಿಸಿದರು. ಅದನ್ನು ಕೇಳಿ ಮೊದಲೇ ವಿಶಾಲ ವಾದ ಹೊಟ್ಟೆಯ ಭಾರದಿಂದ ಯಾವಾಗಲೂ ಘಸ್‌ಘಸ್ಸೆಂದು ತೇಕು ತ್ತಿದ್ದ ಆ ಲಂಬೋದರ ಲಾಂಗಮನ್ನನು ಮತ್ತಿಷ್ಟು ತೇಕಲಾರಂಭಿಸಿದನು. ಹೆಚ್ಚಿನ ಊರ್ಧ್ವಶ್ವಾಸದ ಮೂಲಕ ಅವನ ಬಾಯಿಂದ ಶಬ್ದಗಳು ಹೊರ ಡುವದೇ ದುಸ್ತರವಾಗಿಬಿಟ್ಟಿತು. ಹೀಗೆ ಕೆಲ ಹೊತ್ತು ಬಿಸಿಲೊಳಗಿಂದ ಬಂದ ನಾಯಿಯ ಹಾಗೆ ಒಂದೇಸವನೆ ತೇಕಿದ ಬಳಿಕ ಅವನು ಪಂತನನ್ನು

ಕುರಿತು—"ರಾಯರೇ, ತಮ್ಮ ಉಪಕಾರವು ನನ್ನ ಮೇಲೆ ಬಹಳವಾಗಿ ಆಯಿತು. ಇಂದು ತಾವು ನನ್ನ ಮಗಳನ್ನುಳಿಸದಿದ್ದರೆ ನನಗೆ ಪರಮ ದುಃಖವಾಗುತ್ತಿತ್ತು. ನನಗೆ ಆಗಬಹುದಾಗಿದ್ದ ದುಃ........ಖ........ವ ........ನ್ನು....ನಾ........ನು........ವ........ರ್ಣಿ........ಸ....ಲಾ........" ಎಂದೆನ್ನುತ್ತ ಮುಂದೆ ಬಾಯಿಂದ ಶಬ್ದಗಳೇ ಹೊರಡದಷ್ಟು ಊರ್ಧ್ವಶ್ವಾಸ ವುಂಟಾಗಲು, ಅವನು ದೊಪ್ಪೆಂದು ನೆಲಕ್ಕೆ ಬಿದ್ದನು. ಕ್ಷಣಾರ್ಧದಲ್ಲಿ ಅವನು ಆ ತನ್ನ ಬೈಠಕಖಾನೆಯಲ್ಲಿಯೇ ಸತ್ತುಹೋದನು!

ಲಾಂಗಮನ್ನನ ಈ ಆಕಸ್ಮಿಕವಾದ ಮರಣದಿಂದ ಅಲ್ಲಿ ಕಲೆತಿದ್ದ ಪಂತ ಮೊದಲಾದ ಸಕಲರಿಗೂ ಕೂಡಾ ವಿಸ್ಮಯವೆನಿಸಿತು. ಲಾಂಗಮನ್ನನ ಹೆಂಡತಿಯ ಹೆಸರು ಮೇಯೋ ಎಂದು. ಅವಳು ೨೫ ವರ್ಷದವಳಾಗಬಹುದು. ಅವಳು ಗಂಡನು ಸತ್ತುಬಿದ್ದಲ್ಲಿಗೆ ಓಡುತ್ತ ಬಂದು ಎದೆಎದೆ ಬಡಕೊಂಡು ಹಾಡಿ ಹಾಡಿ ಅಳಹತ್ತಿದಳು. ಪಂತನು ಅಲ್ಲಿಯ ಒಬ್ಬ ಸೇವಕನನ್ನು ಕರೆದು ಇಲ್ಲಿ ಸಮೀಪದಲ್ಲಿ ಡಾಕ್ಟರರಾರಾದರೂ ಇರುವರೇ? ಎಂದು ಕೇಳಲು, ಆ ಭೃತ್ಯನು ಈ ಊರಲ್ಲಿ ಫಾಕ್ಸ ಎಂಬ ಹೆಸರಿನ ಪ್ರಸಿದ್ಧ ಡಾಕ್ಟರರಿದ್ದು, ಅವರೇ ಈ ಮನೆಗೆ ಆಗಾಗ್ಗೆ ಔಷಧಚಿಕಿತ್ಸೆಗಾಗಿ ಬರುತ್ತಿರುವರು, ಎಂದು ತಿಳಿಸಿದನು. ಕೂಡಲೆ ಪಂತನು ಡಾ. ಫಾಕ್ಸನನ್ನು ಕರೆಕಳುಹಿದನು. ಸೇವಕನು ಡಾಕ್ಟರನನ್ನು ಕರೆಯಹೋದಬಳಿಕ ಪಂತನು ಲಾಂಗಮನ್ನನ ಮೃತದೇಹದ ಕಡೆಗೆ ಚೆನ್ನಾಗಿ ನಿರೀಕ್ಷಿಸಲಾರಂಭಿಸಿದನು. ಲಕ್ಷ್ಯಗೊಟ್ಟು ಪರೀಕ್ಷಿಸಿದ ಬಳಿಕ ಲಾಂಗಮನ್ನನಿನ್ನೂ ಸತ್ತಿರುವದಿಲ್ಲೆಂದೂ ಇವನಿಗೆ ಮಲರೋಗ ಬರುತ್ತಿರಬಹುದೆಂದೂ ತರ್ಕಿಸಿದನು. ಬಳಿಕ ಅವನು ಮೇಯೋಳಿಗೆ ಸಮಾಧಾನೋಕ್ತಿಗಳನ್ನು ಹೇಳಹತ್ತಿದನು. ಆಗಂತೂ ಆಕೆಯು ಮತ್ತಿಷ್ಟು ಆಕ್ರೋಶ ಮಾಡಿ ಅಳತೊಡಗಿದಳು.

ಇಷ್ಟರಲ್ಲಿ ಮೇರೀಕುಮಾರಿಯು-ಲಾಂಗಮನ್ನನ ತರುಣ ಕುವರಿಯು- ಅಲ್ಲಿಗೆ ಬಂದಳು; ಹಾಗು ತಂದೆಯ ಮೃತದೇಹವನ್ನು ಕಂಡು ಅದರ ಮೇಲೆ ಬಿದ್ದು ಬಿದ್ದು ಅಳಹತ್ತಿದಳು.

ಪಂತನು ಅವಳನ್ನು ತಡೆದು—ಮೇರೀ, ನಿನ್ನ ತಂದೆಯು ಇನ್ನೂ ಜೀವಂತನಿರುವಹಾಗೆ ಕಾಣುತ್ತದೆ. ಆದ್ದರಿಂದ ಡಾಕ್ಟರನನ್ನು ಕರೆಸು, ಎಂದು ಹೇಳಲು;

ಮೇರಿಯು ಕಂಪಿತ ದನಿಯಿಂದ:—ಯಾವ ಡಾಕ್ಟರನನ್ನು?

"ಫಾಕ್ಸನೆಂಬ ಹೆಸರಿನ ನಿಮ್ಮ ಮನೆಯ ಡಾಕ್ಟರನನ್ನು" ಎಂಬ ಪಂತನ ಉತ್ತರವನ್ನು ಕೇಳಿ ಆ ಕಡುದುಃಖದಲ್ಲಿಯೂ ಮೇರಿಯ ಮುಖ ದಲ್ಲಿ ಕಿರಿನಗೆಯುಂಟಾಯಿತು. ಬಳಿಕ ಅವಳು ಮೆಲ್ಲಗೆ:—ಫಾಕ್ಸನೇ ಬೇಕೇನು? ಎಂದಂದು ಮತ್ತೆ ತಂದೆಯ ಶವದ ಮೇಲೆ ಬಿದ್ದು—ಅಪ್ಪಾ, ಫಾದರ, ನೀನೆಲ್ಲಿಗೆ ಹೋದೆ? ಈ ಪರದೇಶಿ ಮಗಳನ್ನು ಇನ್ನಾರು ಸಂರಕ್ಷಿ ಸುವವರು? ನನ್ನ ಗತಿಯೇನು? ಹೀಗೆಂದು ಆಕ್ರೋಶ ಮಾಡಹತ್ತಿದಳು. ಕೆಲಕ್ಷಣಗಳಲ್ಲಿ ಅವಳು ಆ ತನ್ನ ದುಃಖವನ್ನು ಮರೆದು ಪಂತನನ್ನು ಕುರಿತು:—ರಾಯರೇ, ಆ ಡಾಕ್ಟರ ಫಾಕ್ಸನು ನನ್ನ ತಂದೆಯ ವೈರಿಯು; ನನ್ನ ಹಗೆಯು; ನಮ್ಮ ಈ ಮನೆಗೇ ಸರ್ವನಾಶಕನು; ಅವನು ಪಿಶಾ ಚಿಯು; ನರಭಕ್ಷ ರಾಕ್ಷಸನು; ಅವನನ್ನು ಕಟ್ಟಿಕೊಂಡು ಮಾಡುವದೇನು? ಎಂದಂದು ಮತ್ತೆ ತನ್ನ ತಂದೆಯ ಮೃತದೇಹದ ಕಡೆಗೆ ನೋಡುತಿರುವಿ ದುಃಖವನ್ನು ಸಹಿಸಲಾರದೆ ಮೂರ್ಛಿತಳಾದಳು.

ಪಂತನು ಲಗುಬಗೆಯಿಂದ ಮೇರಿಯ ನೆತ್ತಿಗೆ ನೀರುತಟ್ಟಿ ಅವಳನ್ನು ಎಚ್ಚರಪಡಿಸಿದನು. ನಂತರ ಅವನು ಮೇಯೊಳನ್ನು ಕುರಿತು:—ಈ ಸಮ ಯದಲ್ಲಿ ತಾವು ಹೀಗೆ ಅಳುತ್ತ ಕೂಡ್ರುವದು ಸರಿಯಲ್ಲ. ತಾವೇ ಈಗ ಮುಂದಿನ ಎಲ್ಲ ವ್ಯವಸ್ಥೆ ಮಾಡಬೇಕಾಗುವದು, ಎಂದನು.

ತುಸ ಹೊತ್ತಿನಲ್ಲಿಯೇ ಡಾಕ್ಟರ ಫಾಕ್ಸನು ಅಲ್ಲಿಗೆ ಬಂದು ಎಲ್ಲಕ್ಕೂ ಮೊದಲು ಲಾಂಗಮನ್ನನ ಬಳಿಗೆ ಹೋಗಿ ಅವನ ಮೂಗಿನ ಬಳಿಯಲ್ಲಿ ಹಿಂದು ವಸ್ತ್ರವನ್ನು ಹಿಡಿದು ಪರೀಕ್ಷಿಸಿದನು. ಬಳಿಕ ಅವನು—ಈತನ ಅಂತವಾಗಿ ೧೦-೧೨ ನಿಮಿಷಗಳಾಗಿ ಹೋಗಿದೆ; ಆದರೆ ಇವನಿಗೆ ಇಷ್ಟು ಆಕಸ್ಮಿಕವಾಗಿ ಮರಣವುಂಟಾಗಲಿಕ್ಕೆ ಅದಾವ ಕಾರಣವುಂಟಾಯಿತೋ ತಿಳಿಯದು, ಎಂದನು.

ಆಗ ಮೇಯೊಳು:—ಈ ಎಲ್ಲ ಅನರ್ಥಕ್ಕೆ ಈ ಮೇರಿಯೇ ಕಾರ ಣಳು. ಈ ಪೋಡಿಯು ಕೆರೆಯಲ್ಲಿ ಬಿದ್ದು, ಸಾಯುವ ಪ್ರಯತ್ನ ಮಾಡ ದಿದ್ದರೆ ಈ ಅನರ್ಥವೆಲ್ಲಿ ಉಂಟಾಗುತ್ತಿತ್ತು? ಎಂದೆನ್ನುತ್ತ ತನ್ನ ಸೆರಗಿ ನಿಂದ ಕಣ್ಣುಗಳನ್ನು ತಿಕ್ಕಿ ತಿಕ್ಕಿ ಹರಿಸಹತ್ತಿದಳು. ಆದರೂ ಆ ಪ್ರಸಂಗ

ದಲ್ಲಿ ಅವಳ ಮುಖದ ಮೇಲೆ ಒಂದಿಷ್ಟು ಇಷ್ಟಾರ್ಥ ಸಿದ್ಧಿಸಿದ ನಗೆಯು ಪ್ರಾದುರ್ಭವಿಸದೆ ಇರಲಿಲ್ಲ.

ಪಂತನು ಡಾಕ್ಟರ ಫಾಕ್ಸನಿಗೆ ತನಗೆ ಗೊತ್ತಿದ್ದ ಸಮಸ್ತ ಸಂಗತಿಯನ್ನೂ ಅರುಹಿದನು; ಫಾಕ್ಸನೂ ಲಕ್ಷ್ಯಗೊಟ್ಟು ಕೇಳಹತ್ತಿದನು. ಆಗ ಫಾಕ್ಸನ ಮುಖದಲ್ಲಿ ಕಾಣುತ್ತಿದ್ದ ವಿದ್ರೂಪದ ಕಿರಿನಗೆಯ ಕಡೆಗೆ ಪಂತನ ದೃಷ್ಟಿಯು ಇರದಿದ್ದದ್ದೇ ವಿಹಿತವಾಯಿತು. ಪಂತನ ಕಥನವು ಮುಗಿದ ಬಳಿಕ ಫಾಕ್ಸನು ಒಳ್ಳೇ ಮೃದು ಸ್ವರದಿಂದ—ರಾಯರೇ, ತಮ್ಮ ಹೆಸರೇನೆಂಬದನ್ನು ನನಗೆ ತಿಳಿಸಬಲ್ಲಿರಾ!

''ನನ್ನ ಹೆಸರು ಪಂತನೆಂದು'' ಎಂದು ಪಂತನಂದನು.

ಫಾಕ್ಸ:—ಓಹೋ! ಸಿದ್ಧದೇವಪುರದ ಪಂತರೆಂದರೆ ನೀವೇ ತಾನೇ? ಬಹು ಚೆನ್ನಾಯಿತು. ನನಗೆ ತಮ್ಮ ಪರಿಚಯವುಂಟಾದದ್ದು ಬಹು ಸಂತೋಷಕರವು. ಹೀಗೆಂದು ನುಡಿಯುವಾಗ ಫಾಕ್ಸನ ಮುಖದ ಮೇಲಿನ ಕಿರಿನಗೆಯು ಒಮ್ಮೆಲೆ ಪರಿವರ್ತಿಸಿತು. ಆದರೂ ಅವನು ಅದನ್ನು ಜನರಿಗೆ ತಿಳಿಯಗೊಡದ ಹಾಗೆ ಸಾವರಿಸಿಕೊಂಡು—ಮಹಾನುಭಾವರೇ, ತಾವು ಇತ್ತ ಯಾವ ಕಡೆಗೆ ಹೊರಟದ್ದಿರಿ? ತಿಳಿಸಲು ಆತಂಕವಿಲ್ಲದಿದ್ದರೆ ತಿಳಿಸಬೇಕು, ಎಂದು ಪ್ರಶ್ನಮಾಡಿದನು.

ನಾನು ಬತ್ತೇರಿಗೆ ಹೋಗಿದ್ದೆನು. ಅಲ್ಲಿಂದ ಮನೆಗೆ ನಡೆದಾಗ ದಾರಿಯಲ್ಲಿ ಮೇರಿಯು ಆ ಅನಾಹುತವು ನಡೆದ ಮೂಲಕ ಇಲ್ಲಿಗೆ ಬರಬೇಕಾಯಿತು. ಇಲ್ಲಿಯ ಮಿಕ್ಕ ಸಂಗತಿಯಂತೂ ನಿಮಗೆ ತಿಳಿದದ್ದೇ ಇದೆ.

ಫಾಕ್ಸನು ಮತ್ತೇನೂ ಅನ್ನದೆ, ಸಮೀಪದಲ್ಲಿಯೇ ನಿಂತಿದ್ದ ಮೇರಿಯ ಕೈಹಿಡಿದು—ನೀನು ಇನ್ನು ಇಲ್ಲಿ ನಿಲ್ಲಬೇಡ. ನಿನಗೆ ಈ ಪ್ರಸಂಗದಲ್ಲಿ ಹೆಚ್ಚು ಸ್ವಸ್ಥತೆಯು ಅವಶ್ಯವಿದೆ. ನಡೆ, ನಿನ್ನ ಮಲತಾಯಿಯೊಡನೆ ಒಳಗೆ ಹೋಗಿ ಸ್ವಸ್ಥವಾಗಿ ಬಿದ್ದುಕೋ, ಎಂದಂದು ಪಂತನಿಗೆ--ರಾಯರೇ, ತಾವು ಕೆಲ ಕ್ಷಣಗಳವರೆಗೆ ಇಲ್ಲಿಯೇ ಇರ್ರಿ. ನಾನು ಇವರನ್ನು ಒಳಗೆ ಕಳಿಸಿ ಈಗ ಬರುವೆನು, ಎಂದು ಹೇಳಿ, ಮೇರಿ ಹಾಗು ಮೇಯೋ ಇವರೊಡನೆ ಮನೆಯೊಳಗೆ ಹೋದನು.

ಸರಾಸರಿ ಅರ್ಧತಾಸಾದ ಬಳಿಕ ಫಾಕ್ಸನು ಅಲ್ಲಿಗೆ ಬಂದು—ಒಬ್ಬ ಸೇವಕನನ್ನು ಕರೆದನು. ಕೂಡಲೆ ಮನೆಯೊಳಗಿನ ಎಲ್ಲ ಚಾಕರರೂ

ಡಾಕ್ಟರನ ಬಳಿಗೆ ಓಡುತ್ತ ಬಂದರು. ಡಾಕ್ಟರನು ಅವರಿಗೆ ಲಾಂಗಮು ನ್ನನ ಶವದ ವಿಷಯವಾಗಿ ಮಾಡಬೇಕಾದ ವ್ಯವಸ್ಥೆಯನ್ನು ತಿಳಿಸಿದನು. ನಂತರ ಅವನು ಪಂತನ ಕಡೆಗೆ ಹೊರಳಿ:—ರಾಯರೇ, ತಾವು ಇನ್ನೊಂದು ಕ್ಷಣ ತಡೆದರೆ ಬಹಳ ನೆಟ್ಟಗಾಗುವದು ಎಂದನು.

"ಕ್ಷಮಿಸಿರಿ; ನನಗೆ ಅವಸರದ ಕೆಲಸವಿದೆ. ಇನ್ನು ನಿಲ್ಲಲಿಕ್ಕೆ ಅವ ಕಾಶವಿಲ್ಲ. ಬರುವೆನು" ಎಂದಂದು ಪಂತನು ಕುಳಿತಲ್ಲಿಂದ ಎದ್ದು ನಿಂತನು.

ಫಾಕ್ಸ:—ಛೇ, ಛೇ, ತುಸ ತಡೆಯಿರಿ. ತಮ್ಮೊಡನೆ ಅಲ್ಪಸ್ವಲ್ಪ ಮಾತಾಡಬೇಕಾಗಿದೆ. ಈಗ ಬಂದೆನು, ಎಂದವನೇ ಪುನಃ ಒಳಗೆ ಹೋ ದನು. ಮತ್ತೆ ಅರ್ಧಗಂಟೆಯಾದರೂ ಅವನು ಬರಲೇ ಇಲ್ಲ. ಹಾಗೇ ಹೋಗಬೇಕೋ ಬಾರದೋ ಎಂಬ ಬಗ್ಗೆ ಆಲೋಚಿಸುತ್ತ ಪಂತನು ಅಲ್ಲಿ ಯೇ ಕುಳಿತನು. ಇಷ್ಟರಲ್ಲಿ ಮೂರೂಸಂಜೆಯಾಯಿತು. ಮನೆಯ ಸಂದಿ ಮೂಲೆಗಳಲ್ಲಿ ಕತ್ತಲುಗವಿಯಲಾರಂಭಿಸಿತು. ಡಾಕ್ಟರನು ಇನ್ನು ಬಾರ ದಿದ್ದರೂ ಚಿಂತೆಯಿಲ್ಲ. ತಾನು ಹೊರಡಬೇಕೆಂದು ಪಂತನು ಮನೆಯ ಹೊರಗೆ ಬಂದನು. ಅವನ ಹಿಂದಿನಿಂದ ಮೇರಿಯು ಓಡುತ್ತ ಬಂದು ಮೆಲ್ಲಗೆ—ರಾಯರೇ, ಎಚ್ಚರಿಕೆ! ಈ ಡಾಕ್ಟರನು ಸಾಮಾನ್ಯ ಪ್ರಾಣಿ ಯಲ್ಲ. ಅವನು ನಿಮಗೆ ಮೋಸಮಾಡುವ ಹವಣಿಕೆಯಲ್ಲಿರುತ್ತಾನೆ, ಎಂದು ಹೇಳಿದವಳೇ ಹೊರಟು ಹೋದಳು. ಅಷ್ಟರಲ್ಲಿ ಡಾಕ್ಟರ ಫಾಕ್ಸನೂ ಬೇರೆ ಬಾಗಿಲಿನಿಂದ ತವಕದಿಂದ ಅವನೆಡೆಗೆ ಬಂದು—ರಾಯರೇ, ವಿಲಂಬ ವಾಯಿತೆಂದು ಹೊರಟೇ ಬಿಟ್ಟಿದ್ದಿರಾ? ನಾನು ಹಿಂದಿರುಗಲಿಕ್ಕೆ ತಡವಾದ ವಾದ ಬಗ್ಗೆ ನನ್ನನ್ನು ಕ್ಷಮಿಸಿರಿ, ಎಂದನು.

ಛೇ-ಛೇ-ಹಾಗೇನೂ ಇಲ್ಲ. ಇಂಥ ವಿಪತ್ತಿನ ಸಮಯದಲ್ಲಿ ತುಸ ತಡವಾಗುವದೇ. ಈಗಾದರೂ ಆ ಹೆಣ್ಣುಮಕ್ಕಳು ತುಸ ಶಾಂತರಾದರೇ?

ಹೂಂ, ಈ ವರೆಗೆ ಅವರಿಗೆ ಎಷ್ಟೋ ಸಮಾಧಾನೋಕ್ತಿಗಳನ್ನು ಹೇಳಿದನಂತರ ಈಗ ತುಸ ಶಾಂತರಾಗಿರುವರು. ಲಾಂಗೆಮನ್ನನ ಹೆಂಡತಿ ಯಾದ ಮೇಯೋಳು ನನ್ನ ಆಪ್ತಳೊಬ್ಬಳು. ಇವಳಷ್ಟು ಸುಂದರಸ್ತ್ರೀಯು ಅಪರೂಪವೆಂದೇ ಹೇಳಬಹುದು. ಅದಿರಲಿ; ರಾಯರೇ, ತಾವಿನ್ನು ಹೊರ ಡಿರಿ. ತಮಗೆ ತಡವಾಯಿತು. ನಾನು ಕೆಲ ದೂರದ ವರೆಗೆ ತಮ್ಮನ್ನು

ಕಳಿಸಬರುವೆನು, ಎಂದಂದು ಫಾಕ್ಸನು ಶೀಘ್ರಗತಿಯಿಂದ ಹೊರಟನು. ಪಂತನು ಬೇಡಬೇಡೆನ್ನುತ್ತ ಅವನನ್ನುಸರಿಸಿದನು.

ಕೆಲದಾರೀ ಕ್ರಮಿಸಿದ ಬಳಿಕ ಫಾಕ್ಸನು ಒಂದು ಸಿಗರೇಟನ್ನು ತೆಗೆದು ಸೇದಹತ್ತಿದನು; ಹಾಗು ಪಂತನನ್ನು ಕುರಿತು—ರಾಯರೇ, ಸಿದ್ಧದೇವ ಪುರಕ್ಕೆ ನಾನು ಆಗಾಗ್ಗೆ ಬರುತ್ತಿರುವೆನು. ಅಲ್ಲಿ ಹಲಕೆಲವರಿಗೆ ನಾನು ಔಷಧಕೊಡುತ್ತಿರುವೆನು. ತಮ್ಮ ಪರಿಚಯುವಾದದ್ದು ಒಳಿತಾಯಿತು. ರಾಯರೇ, ತಾವು ಧೂಮ್ರಪಾನ ಮಾಡುವದಿಲ್ಲವೆ? ಎಂದು ಪ್ರಶ್ನೆ ಮಾಡಲು,

ನಿರಂತರವಾಗಿ ಸೇದುವದಿಲ್ಲ; ಹಾಗು ಕೇವಲ ಸೇದುವದಿಲ್ಲೆಂತಲೂ ಇಲ್ಲ.

ಹಾಗಾದರೆ ನನ್ನ ಈ ಸಿಗರೇಟನ್ನು ಸೇದಿ ನೋಡಿರಿ. ಇದು ಬಹು ಚೆನ್ನಾಗಿದೆ. ನಾನು ಇವನ್ನು ವಿದೇಶದಿಂದ ತರಿಸುತ್ತಿರುತ್ತೇನೆ, ಎಂದಂದು ಫಾಕ್ಸನು ತನ್ನ ಪಾಕೇಟಿನೊಳಗಿನ ಒಂದು ಸಿಗರೇಟನ್ನು ತೆಗೆದು ಅವನ ಕೈಗಿತ್ತನು.

ಪಂತನು ಅದನ್ನು ತಕ್ಕೊಂಡು:—ಸಂಧ್ಯಾಕಾಲದಲ್ಲಿ ನಾನು ಯಾವಾಗಲೂ ಸೇದುವದಿಲ್ಲ. ರಾತ್ರಿ ಸೇದುವೆನು.

ತಮ್ಮ ಇಚ್ಛೆ. ಸೇದಿದನಂತರ ಇದರ ಉತ್ತಮ ಗುಣಗಳು ತಿಳಿಯು ದಿರವು. ರಾಯರೇ, ನಾನು ಇನ್ನು ಹಿಂದಿರುಗಲ್ಯಾ? ಎಂಬ ಫಾಕ್ಸನ ಪ್ರಶ್ನೆಗೆ ಪಂತನು ತಲೆಹಾಕಿ ಸಮ್ಮತಿಯನ್ನಿತ್ತು ತನ್ನ ದಾರಿಹಿಡಿದು ಒತ್ತರ ದಿಂದ ಸಾಗಿದನು. ಡಾಕ್ಟರನೂ ಮನೆಗೆ ಬಂದನು.

ದಾರಿಯಲ್ಲಿ ಪಂತನು ಮೋಹಿಯು ಬರುವಾಗ ತನಗೆ ಒಂದೇಕೆ ಎಚ್ಚರಿಕೆ ಕೊಟ್ಟಳೆಂಬದನ್ನೇ ಮತ್ತೆ ಮತ್ತೆ ಆಲೋಚಿಸಿದನು. ಬಹಳ ಹೊತ್ತಿನ ವರೆಗೆ ಯೋಚಿಸಿದನಂತರ ಅವನು ನಿಶ್ಚಯಿಸಿದ್ದೇನಂದರೆ:—ಮೋಹಿಯು ವಿಭ್ರಮಚಿತ್ತಳಾಗಿರಬೇಕು. ಅಂತೇ ಅವಳು ಇಂದು ಕೆರೆಯಲ್ಲಿ ಬಿದ್ದು ಪ್ರಾಣನೀಗಿಕೊಳ್ಳಲು ಯತ್ನಿಸಿದಳು. ತಂದೆಸತ್ತು ಬಿದ್ದಿರುವಾಗ ಒಮ್ಮೆ ಅಳುವಳು, ಒಮ್ಮೆ ನಗುವಳು, ಒಮ್ಮೆ ಮೂರ್ಛೆಹೊಂದುವಳು, ಈ ದೊಡ್ಡ ಮನುಷ್ಯನಾದ ಡಾಕ್ಟರ ಫಾಕ್ಸನ ವಿಷಯುವಾಗಿ ತಿರಸ್ಕಾರ, ಅನಾದರ, ಅಸೂಯೆ ತಾಳುವಳು, ಎಂದು.

ಮನೆಗೆ ಹೋಗುವ ಮೊದಲು ಪಂತನು ದಾರಿಯಲ್ಲಿಯ ಜೇಲರ ಭುಜಂಗರಾಯನ ಮನೆಯನ್ನು ಹೊಕ್ಕನು ಆಗ ಅವನು ಒಂದು ಆರಾಮ ಖುರ್ಚಿಯ ಮೇಲೆ ಬಿದ್ದುಕೊಂಡು ವಿಶ್ರಾಂತಿ ಹೊಂದುತ್ತಿದ್ದನು. ಪಂತನು ಬಂದ ಕೂಡಲೆ ರಾಯನು ಅವನನ್ನು ಕುರಿತು—ಪಂತರೇ, ಆ ಬಾಲಿಕೆಯ ಕೊಲೆಯ ಪತ್ತೆಯಾಯಿತೇ?

ಪಂತ:—ಇಲ್ಲ; ಆ ಬಗ್ಗೆ ಏನೂ ತಿಳಿದಿಲ್ಲ.

ಭುಜಂಗರಾಯ:—ಅಂಬಿಕೆಯ ಪ್ರಕರಣದೊಳಗಿನ ಆ ಕೇಶವಾದಿಗಳ ಸಂಧಾನವು ಹತ್ತಿತೇ?

ಪಂತ:—ಹತ್ತಿದ್ದರೆ ತಮಗೆ ತಿಳಿಸದೆ ಇರುತ್ತಿದ್ದೆನೇ? ಅದಿರಲಿ; ರಾಯರೇ, ಇಂದು ನಾನು ತಮಗೊಂದು ಹೊಸ ಸುದ್ದಿ ತಿಳಿಸ ಬಂದಿರುವೆನು. ತಾವು ಫಾಕ್ಸನೆಂಬ ಡಾಕ್ಟರನನ್ನು ಬಲ್ಲಿರಾ?

ರಾಯ:—ಓಹೋ! ನಾನೊಬ್ಬನೇ ಏಕೆ, ಇಲ್ಲಿಯವರೆಲ್ಲರೂ ಬಲ್ಲರು. ಅವನು ಒಳ್ಳೇ ನಿಪುಣ ಡಾಕ್ಟರನು. ಇಲ್ಲಿಯವರ ಎಷ್ಟೋ ಮನೆಗಳಲ್ಲಿ ಅವನು ಔಷಧೋಪಚಾರ ನಡಿಸುತ್ತಿರುತ್ತಾನೆ.

ಪಂತ:—ತಾವು ಬತ್ತೇರಿಯ ಬಳಿಯ ಹಳ್ಳಿಯ ಸಾವುಕಾರ ಲಾಂಗಮನ್ನನನ್ನು ಬಲ್ಲಿರಾ?

ರಾಯ:—ಪಂತರೇ, ಇಂದು ನೀವು ಹೀಗೇಕೆ ಪ್ರಶ್ನೆ ಮಾಡುತ್ತೀರುವಿರಿ? ಲಾಂಗಮನ್ನನು ಸುಪ್ರಸಿದ್ಧ ಜಮೀನದಾರನು-ಸಾವುಕಾರನು.

ಪಂತ:—ಅವನ ಬಗ್ಗೆ ನಿಮಗೆ ಮತ್ತೇನು ಗೊತ್ತಿದೆ?

ರಾಯ:—ಕಳೆದ ಎರಡು ವರ್ಷಗಳಿಂದ ಅವನ ದೇಹ ಸ್ವಾಸ್ಥ್ಯವಿರುವದಿಲ್ಲ. ಅದೇ ಕಾಲಕ್ಕೆ ಅವನ ಮೊದಲನೇ ಹೆಂಡತಿಯು ತೀರಿಕೊಂಡಳು. ಆಗ ಅವನು ಮತ್ತೆ ವಿವಾಹನಾಗಬೇಕೆಂದು ಯತ್ನಿಸಹತ್ತಲು, ಅವನ ಪ್ರಬುದ್ಧ ಮಗಳು ಅದನ್ನು ನಿಷೇಧಿಸಿದಳು. ಲಾಂಗಮನ್ನನು ಮಗಳನ್ನು ಬಹಳ ಪ್ರೀತಿಸುತ್ತಿರುವನು; ಆದ್ದರಿಂದ ಅವನು ತನ್ನ ಎರಡನೇ ಲಗ್ನವನ್ನು ಆಕೆಗೆ ತಿಳಿಯದ ಹಾಗೆ ಗೌಪ್ಯವಾಗಿ ಮಾಡಿಕೊಂಡನು. ಈ ಫಾಕ್ಸ ಡಾಕ್ಟರನ ಸಂಬಂಧಿಕಳೇ ಅವನ ಎರಡನೇ ಹೆಂಡತಿಯೆಂದು ಕೇಳಿರುವೆನು. ಅಂದಿನಿಂದಲೂ ಫಾಕ್ಸನಿಗೂ, ಲಾಂಗಮನ್ನನಿಗೂ ವಿಶೇಷ ಋಣಾನುಬಂಧವುಂಟಾಯಿತು. ತಾನು ಎರಡನೇ

ಲಗ್ನವಾಗುವ ಮೊದಲೇ ಲಾಂಗಮನ್ನನು ಒಂದು ಒಳ್ಳೇ ಕೆಲಸ ಮಾಡಿ ಟ್ಟಿರುವನು. ಏನೆಂದರೆ:—ಅವನು ತನ್ನ ಸ್ವಂತದ ಸಲುವಾಗಿ ಕೆಲಭಾಗ ಆಸ್ತಿಯನ್ನಿಟ್ಟುಕೊಂಡು, ಮಿಕ್ಕದ್ದನ್ನೆಲ್ಲ ತನ್ನ ಒಬ್ಬಳೇ ಒಬ್ಬಳಾದ ಆ ಮಗಳ ಹೆಸರಿಗೆ ದಾನಪತ್ರ ಮಾಡಿಕೊಟ್ಟಿರುತ್ತಾನೆ. ಲಗ್ನವಾದ ಕೆಲ ದಿನಗಳ ನಂತರ ಈ ಸಂಗತಿಯು ಅವನ ಎರಡನೇ ಹೆಂಡತಿಗೆ ತಿಳಿಯಿತು. ಆಗಿನಿಂದ ಅವಳು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆಂದು ತನ್ನ ವೃದ್ಧ ಗಂಡ ನಿಗೆ ಹೆದರಿಕೆ ಹಾಕಹತ್ತಿದಳು. ಅವಳು ತನ್ನ ಪೆಟ್ಟಿಗೆಯಲ್ಲಿ ಲಿಂಬೀ ಕಾಯಿಯಷ್ಟು ಅಫೀಮನ್ನು ಸಹ ಸಂಗ್ರಹಿಸಿಟ್ಟಳು. ಅದು ಒಂದು ದಿನ ಲಾಂಗಮನ್ನನಿಗೆ ಕಾಣಿಸಿಕೊಂಡಿತು. ಅಂದಿನಿಂದ ಲಾಂಗಮನ್ನನ ಆ ಮೊದಲಿನ ವಿಕಾರವು ಮರಕಳಿಸಿತು. ಕಡೆಗೆ ಅವನು ತನ್ನ ಪ್ರೀತಿಯ ಮಗಳಿಗೆ ನಾನಾ ಪ್ರಕಾರವಾಗಿ ಹೇಳಿ, ಅವಳಿಗೆ ದಾನ ಕೊಟ್ಟಿದ್ದ ಆಸ್ತಿ ಯೊಳಗಿನ ಕೆಲ ಭಾಗವನ್ನು ಆ ತನ್ನ ಎರಡನೇ ಹೆಂಡತಿಯ ಹೆಸರಿಗೆ ಕೊಡಿಸಿದನು.

ಪಂತ:—ಆ ಲಾಂಗಮನ್ನನು ಇಂದು ಸಂಜೆಯ ಮುಂದೆ ಸತ್ತನು.

ರಾಯ:—ಅಯ್ಯೋ, ಪಾಪ! ಇಷ್ಟು ತೀವ್ರ ಸತ್ತನೇ? ಬಹು ಕೆಡಕಾಯಿತು!

ಪಂತ:—ಇಂದಿನಿಂದ ಅವನ ಆಸ್ತಿಗೆಲ್ಲ ಅವನ ಮಗಳೇ ಮಾಲಕ ಳಾದಳು. ಅವನ ಆಸ್ತಿಯಾದರೂ ಎಷ್ಟಿದೆ?

ರಾಯ:—ಹತ್ತೆಂಟು ಲಕ್ಷಗಳಿಗೆ ಕಡಿಮೆಯಿಲ್ಲ.

ಪಂತ:—ಅಷ್ಟಿದೆಯಲ್ಲವೇ? ಅಬ್ಬಬ್ಬ! ಡಾಕ್ಟರ ಫಾಕ್ಸನ ಲಗ್ನ ವಾಗಿದೆಯೋ?

ರಾಯ:—ಆಗಿರಬಹುದು. ನನಗೆ ಆ ಬಗ್ಗೆ ವಿಶೇಷ ತಿಳಿದಿಲ್ಲ ಆದರೆ ಪಂತರೇ, ನೀವು ಇಂದು ಹೀಗೇಕೆ ಅಸಂಬದ್ಧ ಪ್ರಲಾಪ ನಡಿಸಿರುವಿರಿ?

ಪಂತ:—ಅದೇನೂ ಇಲ್ಲ; ಸುಮ್ಮನೆ ಕೇಳಿದೆನು. ಲಾಂಗಮನ್ನನ ಮಗಳನ್ನು ಡಾ. ಫಾಕ್ಸನು ಲಗ್ನವಾಗುವ ಹವಣಿಕೆಯಲ್ಲಿರುತ್ತಾನೆ.

ರಾಯ:—ಇರಬಹುದು. ಅವನು ಬಹು ಸೊಗಸುಗಾರನು. ಅವ ರಿಬ್ಬರಲ್ಲಿ ಲಗ್ನವಾದರೂ ಆದೀತು; ಆದರೆ ಪಂತರೇ, ಲಾಂಗಮನ್ನನ ಮಗಳಿಗೆ ಹುಚ್ಚು ಹಿಡಿದಿದೆಯೆಂತಲ್ಲ?

ಪಂತ:—ಅದು ಏನೇ ಇರಲಿ; ರಾಯರೇ, ಈ ಡಾಕ್ಟರ ಫಾಕ್ಸನ್ನು ಸಾಮಾನ್ಯನಾಗಿರುವದಿಲ್ಲೆಂದು ನನಗೇಕೋ ಅನಿಸಹತ್ತಿದೆ. ನಾನು ಮೊನ್ನೆ ನಿಮ್ಮ ತುರಂಗದೊಳಗಿನ ಪೆಟ್ಟಿಗೆಯೊಳಗಿನ ಬಾಲಿಕೆಯ ಹೆಣವನ್ನು ನಿರೀಕ್ಷಿಸುತ್ತಿರುವಾಗ ತರ್ಕಿಸಿದಂತೆ, ಡಾ ಫಾಕ್ಸನು ೫|| ಫೂಟಿಗಿಂತ ಹೆಚ್ಚು ಎತ್ತರಿಲ್ಲ. ಇವನ ವಿಶಾಲ ಹೃದಯ, ಹವಣೆಯಾದ ನಡುಕಟ್ಟು, ದಪ್ಪನ್ನ ಕುತ್ತಿಗೆ, ಸ್ವರ್ಣವರ್ಣ, ಸರಾಸರಿ ೪೦ರ ವಯಸ್ಸು ಇವೆಲ್ಲವುಗಳ ಮೇಲಿಂದ ಇವನೇ ಆ ಕೊಲೆಗಾ............

ರಾಯ:—ಅಂತೂ ನಿಮ್ಮ ವಕ್ರದೃಷ್ಟಿಯು ಪಾಪ, ಆ ಡಾಕ್ಟರ ಫಾಕ್ಸನ ಮೇಲೆ ಬಿದ್ದಿತೇ?

ಪಂತ:—ಅವನು ಇನ್ನು ಆ ಲಾಂಗಮನ್ನನ ಮಗಳನ್ನು ಲಗ್ನವಾಗಿ ಅವಳಿಗೆ ತಂದೆಯಿಂದ ದೊರೆತಿರುವ ಆ ಅಪಾರ ಸಂಪತ್ತಿಯನ್ನು ಎತ್ತಿ ಹಾಕುವ ಉದ್ಯೋಗದಲ್ಲಿರುತ್ತಾನೆ.

ರಾಯ:—ಡಾಕ್ಟರ ಫಾಕ್ಸನಂತಹ ಕುಶಾಗ್ರ ಬುದ್ಧಿಯವನಿಂದ ಆ ಕೆಲಸವು ಸಹಜವಾಗಿ ಆದೀತು; ಆದರೆ ಪಂತರೇ, ಆ ಹುಡುಗಿಗೆ ಹುಚ್ಚು ಹಿಡಿದದೆಯಂತಲ್ಲ! ಅವಳನ್ನು ಈ ಚತುರನು ಲಗ್ನವಾಗುವದೆಂತು?

ಪಂತ:—ಆಕೆಗೆ ಉಂಟಾಗುವ ಬೇರೆ ಬೇರೆ ವಿಕಾರಗಳನ್ನು ನಾನು ಇಂದು ಪ್ರತ್ಯಕ್ಷ ಕಂಡುಕೊಂಡಿರುತ್ತೇನೆ. ಅದರಿಂದ ಅವಳಿಗೆ ಹುಚ್ಚೇ ಹಿಡಿದದೆಯೆಂದು ಖಂಡಿತವಾಗಿ ಹೇಳಬರುವಂತಿಲ್ಲ; ಆದರೆ ರಾಯರೇ, ಹೇಗಾದರೂ ಇನ್ನು ಆ ಲಾಂಗಮನ್ನನ ಮಗಳಾದ ಮೇರಿಯು ತನ್ನ ಅದೃಷ್ಟ ಬಲದಿಂದ ಡಾ. ಫಾಕ್ಸನ ಹೆಂಡತಿಯಾಗಬೇಕು; ಅಥವಾ ಯಾವುದೊಂದು ಕಾರಣದಿಂದ ಇಷ್ಟರಲ್ಲೇ ಇಹಲೋಕವನ್ನು ತ್ಯಜಿಸಬೇಕು; ಇಲ್ಲವೆ........ಎಂದಂದು ಸುಮ್ಮನಾಗಲು,

ಭುಜಂಗರಾಯನು ತವಕದಿಂದ—ಪಂತರೇ, ತಮ್ಮ ತರ್ಕಬುದ್ಧಿಯ ಓಘವನ್ನು ನಡುವೇ ಏಕೆ ನಿಲ್ಲಿಸಿದಿರಿ? ಹೇಳಲಿಕ್ಕೆ ಆತಂಕವಿರದಿದ್ದರೆ ಹೇಳಿ ಬಿಡಿರಿ, ಎನ್ನಲು,

ಪಂತನು:—ಇಲ್ಲವೆ ಈ ಪಂತನಿಂದ ಆ ಡಾಕ್ಟರ ಫಾಕ್ಸನ ಬಲೆಯೊಳಗಿಂದ ಅವಳ ಬಿಡುಗಡೆಯಾಗಿ, ಅವಳು ಚಿರಸುಖಿಯಾಗಬೇಕು!

———

## ೧೦ ಪಂತನ ಪ್ರಾಣ ಸಂಕಟ!

ಭುಜಂಗರಾಯನ ಅಪ್ಪಣೆ ಪಡೆದು ಪಂತನು ತನ್ನ ಮನೆಗೆ ಬರುವಷ್ಟರಲ್ಲಿ ರಾತ್ರಿಯ ಹತ್ತು ಹೊಡೆದು ಹೋಗಿತ್ತು. ಆದರಿಂದ ಅವನ ಮನೆಯ ತಲೆಬಾಗಿಲವು ಇಕ್ಕಲ್ಪಟ್ಟದ್ದು, ಒಳಗಿನವರೆಲ್ಲ ಘೊರ್ ಘೊರ್ ಎಂದು ಗೊರಿಕೆ ಹೊಡೆಯುತ್ತ ನಿದ್ರಾವಶರಾಗಿದ್ದರು. ಪಂತನು ಒದರಿ-ಒದರಿ ಗಂಟಲೊಡಕೊಂಡ ಬಳಿಕ, ಅವನ ಒಬ್ಬ ಆಳು ಎಚ್ಚತ್ತು, ಅಲವತಗೊಂಡು ಬಾಗಿಲ ತೆರೆದನು. ಪಂತನಿಗೂ ಅಂದು ದೈಹಿಕ-ಮಾನಸಿಕ ಶ್ರಮಗಳು ಹೆಚ್ಚಾದ್ದರಿಂದ ಅವನು ಯಾವ ಉಸಾಬರಿಯನ್ನೂ ಮಾಡದೆ, ನೆಟ್ಟಗೆ ಮೇಲಂತಸ್ತಿನ ಮೇಲಿನ ತನ್ನ ಮಲಗುವ ಕೋಣೆಯನ್ನು ಪ್ರವೇಶಿಸಿದನು. ಅಂದು ಅವನಿಗೆ ಮಧ್ಯಾಹ್ನದಿಂದಲೂ ಯಾವ ಬಗೆಯ ತಿಂಡಿ-ತೀರ್ಥಗಳೂ ದೊರೆತಿರಲಿಲ್ಲ; ಅವನ್ನು ಪ್ರಯತ್ನಪೂರ್ವಕವಾಗಿ ತಕ್ಕೊಳ್ಳಲಿಕ್ಕೆ ಅವನಿಗೆ ಅವಕಾಶವೂ ದೊರೆತಿರಲಿಲ್ಲ. ಆದರಿಂದ ಅವನ ಹೊಟ್ಟೆಯಲ್ಲಿ ಕಾಗೆಗಳ ಕೂಗಾಟವು ನಡೆದಿತ್ತು. ಅವನು ಇನ್ನು ತನ್ನ ಅಡಿಗೆಯವನನ್ನು ಎಬ್ಬಿಸಬೇಕೆಂದು ಯೋಚಿಸುತ್ತಿರುವಾಗ, ಪಂತನಂತಹ ತರ್ಕರತ್ನನ ಆ ಪಾಚಕನು, ಸಹವಾಸ ಬಲದಿಂದ ತನ್ನ ಯಜಮಾನನು ರಾತ್ರಿ ದಣಿದು ಬಂದಾಗ ಉಪಯೋಗಬೀಳಬೇಕೆಂದು ಒಂದು ಬಾಗಿಲ ಮಾಡದಲ್ಲಿ ಸಾಕಷ್ಟು ಖಾದ್ಯ ಪದಾರ್ಥಗಳನ್ನೂ, ಕುಡಿಯುವ ತಣ್ಣೀರನ್ನೂ ಸಂಗ್ರಹಿಸಿಟ್ಟದ್ದು ಕಣ್ಣಿಗೆ ಬಿದ್ದ ಕೂಡಲೆ, ಪಂತನು ಅಡಿಗೆಯವನ ಆ ಮುಂಜಾಗ್ರತೆಯ ಬಗ್ಗೆ ಅವನನ್ನು ಹೊಗಳುತ್ತ ಅವನ್ನೆಲ್ಲ ತಿಂದುಹಾಕಿದನು; ಹಾಗು ಹಾಸಿಗೆಯ ಮೇಲೆ ಬಿದ್ದು, ನಿದ್ದೆ ಹತ್ತುವವರೆಗೆ ಅಂದಿನ ಆ ಮೇರಿಯ ಆತ್ಮಹತ್ಯೆಯಪ್ರವೃತ್ತಿ, ಲಾಂಗಮನ್ನನ ಮರಣ, ಫಾಕ್ಸನ ಬೇತು ಈ ವಿಷಯಗಳ ಬಗ್ಗೆ ಯೋಚಿಸಲಾರಂಭಿಸಿದನು. ಆ ಕೂಡಲೆ ಅಂದು ಸಂಜೆಯ ಮುಂದೆ ಡಾ. ಫಾಕ್ಸನು ಪ್ರೀತಿಯಿಂದ ತನಗೆ ಕೊಟ್ಟ ಸಿಗರೇಟಿನ ನೆನಪಾಯಿತು. ಬಳಿಕ ಅವನು ಹಾಸಿಗೆಯಿಂದೆದ್ದು, ತನ್ನ ಜೇಬಿನೊಳಗಿನ ಆ ಮನೋಹರ ಸಿಗರೇಟನ್ನು ತೆಗೆದು ಹೊತ್ತಿಸಿ, ಕೆಲ ಝುರುಕೆಗಳನ್ನು ಸೇದಿದನು. ಬೇಗನೆ ನಿದ್ದೆ ಬರುವದಕ್ಕಾಗಿ ಪಂತನು ಎಂದಾದ

ಕೊನೆಗೆ ಮಲಗುವ ಕಾಲಕ್ಕೆ ಸಿಗರೇಟು ಸೇದುತ್ತಿದ್ದನು. ಅದರಿಂದ ಅವನಿಗೆ ಕೂಡಲೆ ನಿದ್ದೆಯೂ ಬರುತ್ತಿತ್ತು; ಆದರೆ ಇಂದು ಅವನು ಆ ಸಿಗರೇಟನ್ನು ಅರ್ಧ ಸುಡುವ ವರೆಗೆ ಸೇದಿದರೂ ನಿದ್ದೆಯು ಸುಳುವೇ ಇಲ್ಲ. ತುಸ ಹೊತ್ತಿನಲ್ಲಿಯೇ ಅವನ ತಲೆ ತಿರುಗಹತ್ತಿತು. ಒಂದರ ಮೇಲೊಂದರಂತೆ ಆಕಳಿಕೆಗಳು ಎಡೆಬಿಡದೆ ಬರಲಾರಂಭಿಸಿದವು. ಆದರೂ ಅವನು ತನ್ನ ಮನಸ್ಸಿನಲ್ಲಿ ಡಾ. ಫಾಕ್ಸನ ನಿಲುವಿಕೆ, ಮೈಕಟ್ಟು, ವಯಸ್ಸುಗಳಿಗೂ; ಈ ಮೊದಲು ಜೇಲಿನಲ್ಲಿ ಪೆಟ್ಟಿಗೆಯಲ್ಲಿ ತಂದಿಟ್ಟಿದ್ದ ಬಾಲಿಕೆಯ ಶವದ ಬಳಿಯ ಕೊಲೆಗಾರನ ಕೋಲು, ಅಂಗಿ ಮುಂತಾದವುಗಳ ಮೇಲಿಂದ ಆ ಕೊಲೆಗಾರನ ನಿಲುವಿಕೆ, ಮೈಕಟ್ಟು ಮುಂತಾದವುಗಳಿಗೂ ಹೋಲಿಸಿ ನೋಡುವ ಉದ್ಯೋಗವನ್ನೇ ನಡಿಸಿದ್ದನು; ಆದರೆ ಅವನ ವಿಚಾರಗಳು ತಾಳಗೆಟ್ಟವು. ಅವು ಸುಲಭವಾಗಿ ಸಾಗದಾದವು. ಚಿಕ್ಕ ಮಕ್ಕಳು ಪ್ಪಾ, ಪ್ಪಾ, ಪ್ಪಾ, ಅಪ್ಪಾ ಎಂದು ಆವರ್ತನೆ ಮಾಡುವಂತೆ ಅವನ ವಿಚಾರಗಳು ಕುಗ್ಗಹತ್ತಿದವು. ಆಕಳಿಕೆಗಳಿಗಂತೂ ಎಣೆಯೇ ಇಲ್ಲದಾಯಿತು. ಕ್ಷಿಪ್ರದಲ್ಲಿಯೇ ಕಣ್ಣುಗಳು ಜಡವಾಗಲಾರಂಭಿಸಿದವು; ಆದರೆ ಆ ಜಡತ್ವವು ನಿದ್ರಾಸೂಚಕವಾಗಿರದೆ, ಒಂದು ಬಗೆಯ ವಿಚಿತ್ರತೆರವಾಗಿತ್ತು. ಅವನ ಕಣ್ಣೆದುರಿಗೆ ಮೇಜಿನ ಮೇಲೆ ಥಾಳಾದ ದೀಪವು ಉರಿಯುತ್ತಿದ್ದರೂ, ಅವನು ಯಾವದೊಂದು ಮಿನುಕು ಮಿನುಕಾದ ಬೆಳಕಿನಲ್ಲಿ ಕುಳಿತಂತೆ ಅವನಿಗನಿಸಹತ್ತಿತು. ಬರಬರುತ್ತ ಅವನಿಗೆ ನಿದ್ದೆ ಬರುವದೊತ್ತಟ್ಟಿಗೇ ಉಳಿದು, ಕುಳಿತಲ್ಲಿಯೇ ಒಂದು ಬಗೆಯ ಭ್ರಮೆಯಾದಂತಾಗಹತ್ತಿತು. ಕಡೆಗೆ ಒಂದು ದೀರ್ಘವಾದ ಆಕಳಿಕೆಯು ಬಂತು. ಅದರಿಂದ ಪಂತನ ದೇಹದೊಳಗಿನ ಭೀಮಶಕ್ತಿಯು ಪಾತವಾಗಿಬಿಟ್ಟಿತು. ಕುಳಿತಲ್ಲಿಂದ ಏಳಲಿಕ್ಕೆ ಕೂಡ ಅವನಿಗೆ ಜಡವೆನಿಸಲಾರಂಭಿಸಿತು!

ಆಗ ಅವನು ತನಗೆ ಇಂದು ಹೀಗೇಕಾಗಿದೆಯೆಂಬ ಬಗ್ಗೆ ಆ ಭ್ರಾಮಕ ಸ್ಥಿತಿಯಲ್ಲೇ ವಿಚಾರಿಸಹತ್ತಿದನು. ಆ ಫಾಕ್ಸಸಾಹೇಬನ ಸಿಗರೇಟಿನ ಪ್ರಭಾವವೇ ಇದೆಂದು ಆ ಚಾಣಾಕ್ಷನಿಗೆ ತಟ್ಟನೆ ಹೊಳೆಯಿತು; ಆದರೆ ಕೂತಲ್ಲಿಂದ ಎದ್ದೇಳಲಿಕ್ಕೆ ಮೈಯಲ್ಲಿ ಶಕ್ತಿಯಿಲ್ಲ; ಕಣ್ಣು ತೆರೆಯುವಷ್ಟು ಬಲವಿಲ್ಲ; ಕಣ್ಣೆದುರಿಗೆ ಕಾರ್ಗತ್ತಲೆ; ಹೀಗಾಗಿ ಏನು ಮಾಡಲಿಕ್ಕೂ ಅವನು ಮುಂದುಗಾಣದಾದನು. ಮನೆಯವರನ್ನಾಗಲಿ ಭೃತ್ಯರನ್ನಾಗಲಿ

ಓದರಿ ತನ್ನ ಸ್ಥಿತಿಯನ್ನು ನಿವೇದಿಸಬೇಕೆಂದರೆ, ಎಡಬಿಡದೆ ಬರುತ್ತಿರುವ ಆ ವಿಚಿತ್ರ ಆಕಳಿಕೆಗಳಲ್ಲಿ ಅವನ ಬಾಯಿಗೆ ಅವಕಾಶವು ದೊರೆತರೆ ತಾನೇ ಅವನು ಓದರುವದು? ಮೇಲಾಗಿ ದನಿಯೂ ಬಿದ್ದು ಹೋಗಿತ್ತು. ಅಂಥ ಸ್ಥಿತಿಯಲ್ಲೂ ಅವನು ಭೃತ್ಯರನ್ನು ಒದರಲು ಪ್ರಯತ್ನಿಸಿದನು; ಆದರೆ ತನ್ನ ಶಬ್ದಗಳು ತನಗೇ ಕೇಳದಷ್ಟು ಮಂದವಾಗಿರಲು, ಘೋರವಾದ ನಿದ್ರಾ ಸಕ್ತರಾಗಿ ಕೆಳಂತಸ್ತಿನಲ್ಲಿ ಮಲಗಿದ್ದ ಸೇವಕರಿಗೆ ಅದು ಕೇಳುವ ಬಗೆ ಹೇಗೆ? ಇನ್ನು ತನ್ನ ಅವಸ್ಥೆಯು ಕಠಿಣವಾಗುವದೆಂದು ಮನವರಿಕೆಯಾದ ಕೂಡಲೆ ಆ ಕಡುಸಾಹಸಿಯಾದ ಪಂತನು ಕುಗ್ಗುತ್ತ ಮುಗ್ಗುತ್ತ ಸಮೀಪದ ತನ್ನ ಬರೆಯುವ ಟೇಬಲ್ಲಿಗೆ ಬಂದನು. ಅವನು ಆ ಮೇಜಿನ ಡ್ರಾದೊಳಗಿನ ಫಾವುಂಟನ್ನಪೇನನ್ನು ತಕ್ಕೊಂಡು ಅಲ್ಲಿಯ ಒಂದು ಕಾಗದದ ಮೇಲೆ ಎಷ್ಟೋಹೊತ್ತಿನ ವರೆಗೆ ಏನೇನೋ ಬರೆದನು; ಹಾಗು ಅದನ್ನು ಒಂದು ಕವ್ಹರಿನಲ್ಲಿ ಹಾಕಿ ಅದರ ಮೇಲ್ವಿಳಾಸವನ್ನೂ ಬರೆದನು ಏನು ಬರೆದನೋ, ಹೇಗೆ ಬರೆದನೋ? ಅವನದು ಅವನಿಗೇ ಗೊತ್ತು! ಅಂದಿನ ಅವನ ಅಕ್ಷರ ಗಳನ್ನು ಓದಲು ಪ್ರತ್ಯಕ್ಷ ಬ್ರಹ್ಮದೇವನಿಗೂ ಸಾಧ್ಯವಿರಲಿಲ್ಲ.

ಬಳಿಕ ಅವನು ತನ್ನ ಕೋಣೆಯ ಬಾಗಿಲ ಹುಡುಕಹತ್ತಿದನು ಕಣ್ಣು ಗಳಂತೂ ತೆರೆಯಲಿಕ್ಕೇ ಸಾಧ್ಯವಿರಲಿಲ್ಲ. ಇಂಥ ಸ್ಥಿತಿಯಲ್ಲಿ ಅವನು ಹಾಗೂ ಹೀಗೂ ಮಾಡಿ ಒಂದು ಕಿಟಕಿಯ ಹತ್ತರ ಬಂದನು. ಇದೇ ಬಾಗಿಲವೆಂದು ಆ ಅರೆಹುಷಾರಿಯ ಸ್ಥಿತಿಯಲ್ಲಿ ಅನಿಸಲು, ಅವನು ಒತ್ತರ ದಿಂದ ಅದರೊಳಗಿಂದಲೇ ಹೊರಗೆ ನೋಕೆ ಹಾಕಹೋದನು. ಆಗ ಅವನ ತಲೆಯು ಅದರ ಏಣಿನ ಸಲಾಕಿಗಳಿಗೆ ಬಲವಾಗಿ ಬಡಿಯಲು, ಫೋಟಿ ಬಿದ್ದು ರಕ್ತವು ಸುರಿಯಲಾರಂಭಿಸಿತು; ಬವಳಿ ಬಂದಿತು. ಇನ್ನು ಅವನು ಪ್ರಜ್ಞಾಹೀನನಾಗಿ ನೆಲಕ್ಕೆ ಬೀಳತಕ್ಕವನು; ಆದರೂ ಆ ಸಾಹಸಿಯು ಅಷ್ಟರಲ್ಲೇ ಈ ಮೊದಲು ಬರೆದ ಕಾಗದದ ಲಕ್ಕೋಟಿಯನ್ನು ಗಜಗಳ ಕಿಂಡಿಯೊಳಗಿಂದ ಆ ಕಿಟಕಿಯ ಹೊರಗೆ ಚಲ್ಲಿದನು. ಪರಕ್ಷಣದಲ್ಲಿ ಪಂ-ತನು ದೊಪ್ಪೆಂದು ನೆಲಕ್ಕೆ ಬಿದ್ದು, ಪ್ರಜ್ಞಾಹೀನನಾದನು!

ಮರುದಿನ ನಸುಕಿನಲ್ಲಿ ಪಂತನ ಮನೆಯ ಅಡಿಗೆಯವನು ಪಂತನ ಕೋಣೆಯೊಳಗಿನ ಮುಸುರೆಯ ಪಾತ್ರೆಗಳನ್ನು ತರುವದಕ್ಕಾಗಿ ಮೇಲಟ್ಟ ವನ್ನೇರಿ ಹೋದನು. ಕೋಣೆಯ ಬಾಗಿಲವು ಒಳಗಿನಿಂದ ಇಕ್ಕಿತ್ತು.

ಬಾಗಿಲ ಬಡೆದನು; ಬಾಗಿಲ ತೆರೆಯಿರೆಂದು ಕೂಗಿಕೊಂಡನು. ಆದರೂ ಬಾಗಿಲವು ತೆರಯಲ್ಪಡಲಿಲ್ಲ. ಆಗ ಅವನು ಹೀಗೇಕಾಯಿತೆಂದು ಕಿಟಕಿಯ ಬಳಿಗೆ ಹೋಗಿ ಒಳಗೆ ಇಣಿಕಿ ನೋಡಿದನು. ಎದುರಿಗಿನ ಪಲ್ಲಂಗದಮೇಲೆ ಪಂತನು ಪವಡಿಸಿರಲಿಲ್ಲ. ಆಗ ಅಡಗಿಯುವನು ಮತ್ತಿಷ್ಟು ಉತ್ಸುಕತೆಯಿಂದ ಒಳಗೆ ದೃಷ್ಟಿಸಲು, ಪಂತನ ದೇಹವು ಕಿಟಕಿಯ ಪಕ್ಕದಲ್ಲಿಯೇ ಅಸ್ತವ್ಯಸ್ತವಾಗಿ ಬಿದ್ದಿತ್ತು. ಪಂತನು ಈ ಬಗೆಯಾಗಿ ಬಿದ್ದುಕೊಂಡದ್ದನ್ನು ಅವನು ಈ ಮೊದಲೆಂದೂ ನೋಡಿರಲಿಲ್ಲ. ಅದರಿಂದ ಗಾಬರಿಯಾಗಿ ಅವನು ಮುಂದುಗಾಣದಾದನು. ಅಷ್ಟರಲ್ಲಿ ಅವನ ಕಾಲು ಕಿಟಕಿಯ ಹೊರಬದಿಯಲ್ಲಿ ಬಿದ್ದಿದ್ದ ಒಂದು ಲಕ್ಕೋಟಿಯಮೇಲೆ ಬಿದ್ದಿತು. ಇದೇನೆಂದು ಅವನು ಅದನ್ನೆತ್ತಿಕೊಂಡು ನೋಡಲು, ಅದರಮೇಲೆ ಯಾರದೋ ವಿಳಾಸ ಬರೆದಿತ್ತು. ಆ ಅಡಿಗೆಯ ಮಾಣಿಯು ಅಷ್ಟೊಂದು ಅಕ್ಷರಶತ್ರುವಿರಲಿಲ್ಲ. ಅವನಿಗೆ ತಕ್ಕಮಟ್ಟಿಗೆ ಓದುಬರಹ ಬರುತ್ತಲಿತ್ತು; ಆದರೆ ಅವನಿಗೆ ಆ ಲಕ್ಕೋಟಿಯ ಮೇಲ್ವಿಳಾಸವನ್ನು ಓದುವದು ಒಮ್ಮೆಲೆ ಸಾಧ್ಯವಾಗಲಿಲ್ಲ. ಕ, ಮ, ಕ, ಮ, ಎಂದು ಒಂದೊಂದೇ ಅಕ್ಷರವನ್ನು ಕೂಡಿಸುತ್ತ ಅವನು ಜೇಲರ ಭುಜಂಗರಾಯನ ಹೆಸರಿನ ಈ ಪತ್ರವೆಂದು ಅರಿತುಕೊಂಡನು. ಕೂಡಲೆ ಅವನು ಹೆಚ್ಚುಹೊತ್ತು ಆಲೋಚಿಸುತ್ತ ಅಲ್ಲಿ ನಿಲ್ಲದೆ, ನೆಟ್ಟಗೆ ಸಮೀಪದ ತುರಂಗಿಗೆ ಹೋಗಿ, ತನ್ನ ಮನೆಯಲ್ಲಿ ಮಲಗಿದ್ದ ಭುಜಂಗರಾಯನನ್ನು ಎಬ್ಬಿಸಿ, ಅವನಿಗೆ ಆ ಪತ್ರವನ್ನು ಕೊಟ್ಟನು.

ಅವನು ಆ ಪತ್ರವನ್ನು ಒಡೆಯುವಾಗ ಪಂತನ ಅಡಗಿಯುವನು, ಪಂತನ ಕೋಣೆಯಲ್ಲಿ ಪಂತನು ಸ್ಮೃತಿದಪ್ಪಿಬಿದ್ದಿರುವ ಸಂಗತಿಯನ್ನು ಗಾಬರಿಯಿಂದಲೇ ತಿಳಿಸಿದನು. ಬಳಿಕ ಭುಜಂಗರಾಯನು ಆ ಲಕ್ಕೋಟಿಯೊಳಗಿನ ಕಾಗದ ತೆಗೆದು ಅದನ್ನು ಓದಲಾರಂಭಿಸಿದನು. ಅದರೊಳಗಿನ ಅಕ್ಷರಗಳು ಹೆಚ್ಚಾಗಿ ಪಂತನ ಅಕ್ಷರಗಳನ್ನು ಹೋಲುತ್ತಿದ್ದರೂ, ಪಂತನು ಇಂದು ಇಷ್ಟೇಕೆ ಗಜಿಬಿಜಿಬರೆದಿರುವನೆಂದು ಅಂದುಕೊಂಡನು. ಪಂತನು ಬರೆದ ಪತ್ರದ ಸಂಗತಿಯು ಈ ಬಗೆಯಾಗಿತ್ತು:—

"ಭುಜಂಗರಾಯರೇ,

ಶಾರ್ಕರ ಫಾಕ್ಸನು ಬಹು ಭಯಾನಕ ಪ್ರಾಣಿಯು. ಎಷ್ಟು ತೀವ್ರ

ಸಾಧ್ಯವೋ ಅಷ್ಟು ತೀವ್ರವಾಗಿ ಅವನನ್ನು ಸೆರೆಹಿಡಿಯಿರಿ. ಅವನೇ ಆ ಬಾಲಿಕೆಯನ್ನು ಕೊಂದವನು. ಅವನು ಆ ಸಿಗರೇಟಿನೊಡನೆ ನನಗೆ ವಿಷ ಕೊಟ್ಟಿರುತ್ತಾನೆ; ನಾನು ಅವನಿಂದ ಕೊಡಲ್ಪಟ್ಟ ಆ ಸಿಗರೇಟನ್ನು ಅರ್ಧ ಮಾತ್ರ ಸೇದಿರುತ್ತೇನೆ. ಇಷ್ಟರಿಂದ ನನ್ನ ಅವಸ್ಥೆಯು ಈ ಬಗೆಯಾಗಿದೆ. ನಾನು ಬಹುಶಃ ಈ ವಿಪತ್ತಿನೊಳಗಿಂದ ಪಾರಾಗಲಾರೆನು. ಆ ನೀಚ ಫಾಕ್ಸನನ್ನು ನೀವು ಸೆರೆಹಿಡಿಯದಿದ್ದರೆ, ಬೇಗನೆ ಆತನು ನಿಮ್ಮನ್ನೂ ನನ್ನ ಗತಿಗೇ ಮುಟ್ಟಿಸುವನೆಂಬದಕ್ಕೆ ಸಂದೇಹವಿಲ್ಲ ............ನಿಮ್ಮ ಪಂತ''

ಆದರೆ ಭುಜಂಗರಾಯನಿಗೆ ಆ ಪತ್ರದೊಳಗಿನ ಅಕ್ಷರಗಳು ತಿಳಿಯ ಲಿಲ್ಲ; ಹಲಕೆಲವು ತಿಳಿದರೂ ಶಬ್ದಗಳ ಜೋಡಣಿಯು ಹೊಂದಲೊಲ್ಲದು; ಒಂದೆರಡು ಶಬ್ದಗಳು ಗೊತ್ತಾದರೂ ಅರ್ಥವಾಗದಾಯಿತು. ಅದರಿಂದ ಅವನು ಆಗ ಆ ಸಂದಿಗ್ಧ ಪತ್ರವನ್ನೋದುವ ಸಾಹಸ ಮಾಡದೆ, ತನ್ನ ಕೆಲ ಜನ ಶಿಪಾಯಿಗಳೊಂದಿಗೆ ನೆಟ್ಟಗೆ ಪಂತನ ಮನೆಗೆ ಹೋದನು; ಹಾಗು ಆ ಮೇಲಂತಸ್ತಿನ ಕೋಣೆಯ ಬಾಗಿಲ ಮುರಿದು, ಒಳಹೊಕ್ಕು ಪಂತನ ಆ ಅಸ್ತವ್ಯಸ್ತ ದೇಹವನ್ನು ಹಾಸಿಗೆಯ ಮೇಲಿಟ್ಟನು. ಅಷ್ಟರಲ್ಲಿ ಕರೆ ಕಳುಹಿದವನಂತೆ ಡಾಕ್ಟರ ಫಾಕ್ಸನೂ ಲಗುಬಗೆಯಿಂದ ಅಲ್ಲಿಗೆ ಬಂದನು. ಆಗ ಭುಜಂಗರಾಯನಿಗೂ ತುಸ ಧೈರ್ಯ ಬಂದಂತಾಗಿ ಅವನು ಡಾಕ್ಟರ ನನ್ನು ಕುರಿತು;—ಡಾಕ್ಟರರೇ, ಪಂತರಿಗೆ ಹೀಗೆ ಆಕಸ್ಮಿಕವಾಗಿ ಏನಾಗಿ ರಬಹುದು? ನಾಡಿ ನೋಡಿ ಹೇಳಿರಿ, ಎಂದನು.

ಪಂತನ ಆ ದೃಶ್ಯವನ್ನು ಕಂಡು ಡಾಕ್ಟರನ ಮುಖದಲ್ಲಿ ಮುಗುಳು ನಗೆಯು ಮಿನುಗುತ್ತಿದ್ದರೂ, ಅವನು ಅದನ್ನು ಹೊರಗೆಡವದೆ, ತನ್ನ ಬಕ್ಕಣದೊಳಗಿನ ಕೊಳವೆಯನ್ನು ತೆಗೆದು, ಪಂತನ ಎದೆಗೆಹಚ್ಚಿ, ಅದರ ತುದಿ ಗಳನ್ನು ತನ್ನ ಕಿವಿಯೊಳಗಿಟ್ಟು ಒಂದೆರಡು ನಿಮಿಷ ಆಲಿಸಿ ನೋಡಿ, ನಂತರ:- ರಾಯರೇ, ಇವರ ಅವಸ್ಥೆಯು ಮುಗಿದಂತಾಗಿದೆ, ಎಂದನು.

ಭುಜಂಗರಾಯನು ನಿಟ್ಟುಸಿರುಗರೆದ.:—ಡಾಕ್ಟರರೇ, ಇದೇನು ಸೋಜಿಗ! ಇವರಂತಹ ಭೀಮಕಾಯದ ಪುರುಷರು ಹೀಗೆ ಆಕಸ್ಮಿಕವಾಗಿ ಸಾಯುವದೆಂದರೇನು? ಇವರ ಮರಣದ ಕಾರಣವನ್ನಾದರೂ ತಿಳಿಸ ಬಲ್ಲಿರಾ? ಎನ್ನಲು, ಡಾಕ್ಟರನು.—ಇವರಿಗೆ ಮರಣ ಪ್ರಾಪ್ತವಾಗಿ ಬಹಳ ಹೊತ್ತಾಗಿ ಹೋಗಿದೆ. ಅದರಿಂದ ಆ ಕಾರಣವನ್ನು ಸರಿಯಾಗಿ ಹೇಳಲಿಕ್ಕೆ

ಬರುವಂತಿಲ್ಲ; ಆದರೆ ಈ ಶವದ ಮುಖಚರ್ಯೆ ಮುಂತಾದವುಗಳಿಂದ ಇವರ ಹೃದಯಕ್ರಿಯೆಯು ಒಮ್ಮೆಲೆ ನಿಂತು ಹೋದ್ದರಿಂದ, ಇವರಿಗೆ ಮರಣವುಂಟಾಗಿರಬೇಕೆಂದು ತಿಳಿ (ಆಧುನಿಕ ಡಾಕ್ಟರರ ಗುರುಮಂತ್ರವನ್ನು ಪಠಿ) ಸಿದನು; ಹಾಗು ಭುಜಂಗರಾಯನಿಂದ ಅಪ್ಪಣೆಪಡೆದು ಅವನು ಅಲ್ಲಿಂದ ಹೊರಟು ಹೋದನು.

ಡಾಕ್ಟರ ಫಾಕ್ಸನು ಹೊರಟು ಹೋದನಂತರ ಭುಜಂಗರಾಯನು ಪಂತನ ಆ ಶವಸದೃಶ ದೇಹವನ್ನು ಒಂದು ಪಲ್ಲಕ್ಕಿಯಲ್ಲಿರಿಸಿ ತನ್ನ ಬಿಡಾರಕ್ಕೆ ಒಯ್ದನು; ಹಾಗು ಅಲ್ಲಿಯ ಒಂದು ಸ್ವಚ್ಛವಾದ ಕೋಣೆಯಲ್ಲಿ ಅವನನ್ನು ಮಲಗಿಸಿದನು. ಅಷ್ಟರಲ್ಲಿ ಅವನಿಗೆ ಬೆಳಿಗ್ಗೆ ಪಂತನ ಅಡಿಗೆಯವನು ತಂದುಕೊಟ್ಟ ಆ ಪತ್ರವನ್ನು ಇನ್ನೊಮ್ಮೆ ಚೆನ್ನಾಗಿ ಓದಿ ನೋಡುವ ಕುತೂಹಲವುಂಟಾಯಿತು ಆಗ ಅವನು ಅದನ್ನು ಸೂಕ್ಷ್ಮದರ್ಶಕಯಂತ್ರದ ಸಹಾಯದಿಂದ ಓದಿ, ಗರ್ಭಿತಸಂಗತಿಯನ್ನು ತಿಳಿಕೊಂಡನು. ಕೂಡಲೆ ಅವನಿಗೆ ಡಾ. ಫಾಕ್ಸನ ವಿಷಯದಲ್ಲಿ ಅತ್ಯಂತ ತಿರಸ್ಕಾರವುಂಟಾಗಲು, ಅವನು ತತ್‌ಕ್ಷಣದಲ್ಲಿ ಬೇರೊಬ್ಬ ಪ್ರಖ್ಯಾತ ಡಾಕ್ಟರನನ್ನು ಕರೆಯಿಸಿಕೊಂಡು ಅವನಿಂದ ಪಂತನ ಪರೀಕ್ಷೆಮಾಡಿಸಿದನು; ಹಾಗು ತಾನು ಸ್ವತಃ ಮತ್ತೆ ಪಂತನ ಆ ಮಲಗುವ ಕೋಣೆಗೆ ಹೋಗಿ, ಅಲ್ಲಿ ಬಿದ್ದಿದ್ದ ಆ ಕೊರಿ ಸಿಗರೇಟನ್ನು ಹುಡುಕಿ ತಂದು, ಅದನ್ನು ಭದ್ರವಾಗಿರಿಸಿದನು ಡಾಕ್ಕರನು ವಿಷಪ್ರಯೋಗದಿಂದ ಇವನ ಅವಸ್ಥೆಯು ಹೀಗಾಗಿದೆಯೆಂದು ಅಭಿಪ್ರಾಯಪಡಲು, ರಾಯನು ಕಾರವಾರದಿಂದ ಸಿವ್ಹಿಲ್ ಸರ್ಜನ್ ಹಾಗು ಬೇರೆ ಒಬ್ಬಿಬ್ಬ ಸುಪ್ರಸಿದ್ಧ ಡಾಕ್ಟರರನ್ನು ಕರೆಯಿಸಿ, ಅವರಿಂದ ಪಂತನಿಗೆ ಉಪಚರಿಸಿದನು.

ಮಾರನೇ ದಿವಸದ ಸುಪ್ರಭಾತದಲ್ಲಿ ಭುಜಂಗರಾಯನ ಮನೆಯ ಎದುರಿಗೆ ಒಂದು ಬುರುಕೆ ಹಾಕಿದ ಮೇಣೆಯು ಬಂದು ನಿಂತಿತು. ಅದರೊಳಗಿಂದ ಒಬ್ಬ ನವತರುಣಿಯು ಕೆಳಗಿಳಿದು ಬಂದು ಭುಜಂಗರಾಯನನ್ನು ಕುರಿತು:—ಅವರ ಸ್ಥಿತಿಯು ಹೇಗಿದೆ? ಎಂದು ಪ್ರಶ್ನೆ ಮಾಡಿದಳು.

ರಾಯನು ಆಶ್ಚರ್ಯದಿಂದ:—ಯಾರ ಸ್ಥಿತಿಯ ವಿಷಯವಾಗಿ ನೀವು ಕೇಳುವದು?

ತರುಣಿ:—ಪಂತರ ಸ್ಥಿತಿಯ ವಿಷಯವಾಗಿ. ಅವರು ಬದುಕಿರುವರೋ-ಸತ್ತರೊ?

ರಾಯ:—ಸತ್ತಿರುವರೆಂದೇ ಡಾಕ್ಟರ ಫಾಕ್ಸನು ಹೇಳಿರುವನು.

ತರುಣಿಯು ಒಳ್ಳೇ ಸಿಟ್ಟಿನಿಂದ:—"ಯಾವ ಡಾಕ್ಟರನು? ಆ ಪಿಶಾಚಿ ಫಾಕ್ಸನೇ? ಆ ಕೊಲೆಗೆಡಕನೇ ಅವರಿಗೆ ವಿಷತಿನ್ನಿಸಿದವನು.

ರಾಯ:—ಹೀಗೆನ್ನುವಿರಾ? ತಾವು ಯಾರು?

ತರುಣಿ:—ನನ್ನ ಹೆಸರು ಮೇರಿ. ಲಾಂಗಮನ್ನ ಸಾವುಕಾರನ ಮಗಳು. ಮೊನ್ನೆ ನಮ್ಮ ಮನೆಗೆ ಬಂದಾಗಲೇ ಫಾಕ್ಸನ ನೀಚತನದ ವಿಷಯವಾಗಿ ನಾನು ಅವರಿಗೆ ಎಚ್ಚರ ಕೊಟ್ಟಿದ್ದೆನು. ನನ್ನನ್ನು ಹುಚ್ಚಿಯೆಂದು ತಿಳಿದು, ಅವರು ನನ್ನ ಮಾತಿನ ಕಡೆಗೆ ದುರ್ಲಕ್ಷ್ಯಮಾಡಿ ಈ ಅನರ್ಥಕ್ಕೆ ಗುರಿಯಾದರು.

ರಾಯ:—ಡಾ. ಫಾಕ್ಸನು ವಿಷಹಾಕಿ ಪಂತರನ್ನು ಕೊಂದನೆಂಬದು ನಿಮಗೆ ಹೇಗೆ ತಿಳಿಯಿತು?

"ನಾನು ಆ ಫಾಕ್ಸನ ಮುಖದರ್ಶನದಿಂದಲೇ ಅದನ್ನು ತಿಳಕೊಂಡೆನು. ತಾವು ನನ್ನ ಮಾತನ್ನು ನಂಬಲಾರಿರಷ್ಟೇ?"

"ಯಾಕೆ ನಂಬಲಿಕ್ಕಿಲ್ಲ? ನೀನು ಏನನ್ನು ತಿಳಿಸಬಂದಿರುವೆಯೋ ಅದೆಲ್ಲವನ್ನೂ ಸ್ಪಷ್ಟವಾಗಿ ತಿಳಿಸು."

"ಪಂತರು ಫಾಕ್ಸನ ಆ ಸಿಗರೇಟನ್ನು ಸೇದಿದ್ದರೆ ಅವರು ಸತ್ತಂತೆ ಬಿದ್ದಿರಬಹುದು; ಆದರೆ ಅವರು ನಿಜವಾಗಿ ಸತ್ತಿರುವದಿಲ್ಲ. ೨-೩ ದಿವಸಗಳ ವರೆಗೂ ಅವರ ದೇಹದಲ್ಲಿ ಪ್ರಾಣವಿದ್ದೇ ಇರುವದು. ಅಷ್ಟರಲ್ಲಿ ಯೋಗ್ಯ ಉಪಚಾರ ಮಾಡಿದರೆ ಅವರು ಖಂಡಿತವಾಗಿ ಬದುಕುವರು. ಪಂತರಿಗೆ ಸಿಗರೇಟಿನ ದ್ವಾರದಿಂದ ವಿಷಕೊಟ್ಟೆನೆಂಬ ಪ್ರೌಢಿಯನ್ನೂ ಹಾಗು ಅದಕ್ಕೆ ಪರಿಹಾರಕವಾದ ಔಷಧವನ್ನೂ ಫಾಕ್ಸನು ನನ್ನ ಮಲತಾಯಿಯ ಮುಂದೆ ಹೇಳಿದ್ದನ್ನು ನಾನು ಮರೆಗೆ ನಿಂತು ಕೇಳಿಕೊಂಡೆನು. ಅಂತೇ ನಾನೀಗ ಅವರನ್ನುಳಿಸುವದಕ್ಕಾಗಿ ಇಲ್ಲಿಗೆ ಬಂದಿರುತ್ತೇನೆ. ಪಂತರು ನನ್ನ ಪ್ರಾಣದಾತರು. ಅವರು ನನ್ನನ್ನು ಪ್ರಾಣಭಯದಿಂದ ಉಳಿಸಿರುವರು. ಅವರಿಂದ ನಾನಿನ್ನೂ ಅನೇಕ ಬಗೆಯ ಸಹಾಯ ಪಡೆಯಬೇಕಾಗಿದೆ. ಎಲ್ಲಿದೆ ಅವರ ದೇಹವು? ನನ್ನನ್ನು ಅದರ ಬಳಿಗೆ ಈಗಲೆ ಕರೆದೊಯ್ಯಿರಿ. ನಾನು ಅವರಿಗೆ ಪ್ರಜ್ಞೆಬರುವ ಹಾಗೆ ಮಾಡುವೆನು" ಎಂದಂದ

ಆ ತರುಣೆಯು ನುಡಿಯನ್ನು ಕೇಳಿ, ರಾಯನು ಅವಳನ್ನು ಪಂತನನ್ನು ಮಲ
ಗಿಸಿದ್ದ ಕೋಣೆಗೆ ಕರೆದೊಯ್ದನು.

ಪಂತನಿಗೆ ಪ್ರಖ್ಯಾತ ಡಾಕ್ಟರರು ಒಂದೇಸವನೆ ಉಪಚರಿಸುತ್ತಿದ್ದ
ರೂ ಇನ್ನೂ ಅವನ ಮೈಮೇಲೆ ಸ್ಮೃತಿ ಬಾರದಿರಲಿಲ್ಲ. ಆಗ ಆ ತರುಣೆಯು
ಅವನ ಮೂಗಿನಲ್ಲಿ ಒಂದು ವನಸ್ಪತಿಯ ರಸವನ್ನು ಹಿಂಡಿದಳು. ಕ್ಷಣಾ
ರ್ಧದಲ್ಲಿ ಅವನಿಗೆ ಅತಿಶಯ ವಾಂತಿಯಾಗಲು, ಅವನು ಹುಷಾರಾದನು;
ಆದರೆ ಎದ್ದು ಕೂಡ್ರಲಿಕ್ಕೆ ಇಲ್ಲವೆ ಮಾತಾಡಲಿಕ್ಕೆ ಸಮರ್ಥನಾಗಲಿಲ್ಲ.
ಬಳಿಕ ಅವಳು ಬೇರೊಂದು ವನಸ್ಪತಿಯ ಒಂದೆರಡು ಎಲೆಗಳನ್ನು ಪಂತನಿಂದ
ಅಗಿದಗಿದು ತಿನ್ನಿಸಲು, ಅವನ ಪ್ರಕೃತಿಯು ಸುಧಾರಿಸಿತು. ಅವನು ಮಾತಾ
ಡಹತ್ತಿದನು; ಹಾಗು ತುಸ ಹೊತ್ತಿನಲ್ಲಿಯೇ ಹಾಸಿಗೆಯ ಮೇಲಿಂದ ಎದ್ದು
ಕುಳಿತನು. ಪಂತನು ಆ ಆಕಸ್ಮಿಕ ಪ್ರಾಣಸಂಕಟದಿಂದ ಪಾರಾದದ್ದನ್ನು
ಕಂಡು ಎಲ್ಲರಿಗೂ ಪರಮ ಸಂತೋಷವಾಯಿತು!

---

## ೧೧ ಫಾಕ್ಸ—ಜೊನ್ಸರ ಬಂಧನ.



ಪಂತನು ತುಸ ಆಹಾರ ತಕ್ಕೊಂಡು ಹುಷಾರಾದ ಬಳಿಕ ಅವನು
ಮೇರಿಯನ್ನು ಕುರಿತು:—ಮೇರೀ, ನಾನು ನಿನ್ನಿಂದ ಹಲವು ಸಂಗತಿಗಳ
ನ್ನು ತಿಳಿಯಬೇಕಾಗಿದೆ. ನೀನು ಕೊಂಚವೂ ಮುಚ್ಚುಮರೆಮಾಡದೆ, ಅದು
ನ್ನೆಲ್ಲ ನನಗೆ ಹೇಳು. ಅಂದರೆ ನಿನ್ನ ಕಲ್ಯಾಣವಾಗುವದಲ್ಲದೆ, ಆ ದುಷ್ಟರಿಗೆ
ತಕ್ಕ ಶಾಸನವೂ ಆಗುವದು. ನಿನ್ನ ಮಲತಾಯಿಯು ಫಾಕ್ಸನಿಗೇನಾಗ
ಬೇಕು? ನಿನ್ನ ಹಡೆದ ತಾಯಿ ಹಾಗು ತಂದೆಗಳ ಮರಣದ ಕಾರಣವೇನು?
ನೀನು ಇಷ್ಟು ದೊಡ್ಡವಳಾಗಿದ್ದರೂ ಇನ್ನೂ ನಿನ್ನ ಲಗ್ನವೇಕಾಗಿಲ್ಲ?

ಮೇರಿ:—ನಿಮ್ಮೆದುರಿಗೆ ಅದನ್ನೆಲ್ಲ ಹೇಳದಿದ್ದರೆ ನಾನು ಗತಿ ಮುಟ್ಟು
ವಂತೆಯೇ ಇಲ್ಲ. ನನ್ನ ಮಲತಾಯಿಯಾದ ಜೊನ್ಸಳು ಫಾಕ್ಸ ಡಾಕ್ಟರನ
ಅಕ್ಕನ ಮಗಳಂತೆ. ಇವಳ ಮೊದಲನೇ ಗಂಡನು ಇವಳನ್ನು ಬಿಟ್ಟಿದ್ದ
ನಂತೆ. ನನ್ನ ತಾಯಿಯ ಮರಣದ ತರುವಾಯ ಈ ನೀಚ ಫಾಕ್ಸನೇ ನನ್ನ
ಪರಮ ಸಾಧು ತಂದೆಯನ್ನು ಆ ತನ್ನ ಭಾಗಿನೇಯಳ ಬಲೆಯಲ್ಲಿ ಕೆಡವಿ

ದವನು. ನನ್ನ ಹಡೆದವ್ವನು ಯಾವ ಬೇನೆ ಬೇಸರಿಕೆಗಳಿಂದಲೂ ಸಾಯು
ಲಿಲ್ಲ. ಈ ನೀಚ ಡಾಕ್ಟರನೇ ಯಾವದೊಂದು ಬಗೆಯಿಂದ ಅವಳಿಗೆ ವಿಷ
ಕೊಟ್ಟು ಕೊಂದಿರುವನು. ನಮ್ಮವ್ವನಿಗೆ ಒಂದು ಗಂಡು ಕೂಸೂ ಇದ್ದಿ
ತು ಫಾಕ್ಸನು ಅದನ್ನು ಎಲ್ಲಕ್ಕೂ ಮೊದಲು ಗತಿಗಾಣಿಸಿದನು. ನಂತರ
ನನ್ನ ತಾಯಿಯನ್ನು ಕೊಂದನು. ಬಳಿಕ ಜೊನ್ಸಳ ಸಹಾಯದಿಂದ
ಅವನು ನನ್ನ ತಂದೆಗೆ ಕುಡಿಯುವ ನೀರಿನಲ್ಲಿ ದಿನಾಲು ಅಲ್ಪ ಪ್ರಮಾಣ
ವಿಷ ಬೆರಿಸಿ ಕೊಡಹತ್ತಿದನು. ಅದರಿಂದಲೇ ನನ್ನ ತಂದೆಗೆ ಒಂದುಬಗೆಯ
ಉದರರೋಗವಾದಂತಾಗಿ, ನಾಲ್ಕು ಶಬ್ದ ಮಾತಾಡಲಿಕ್ಕೆ ಕೂಡ ಸಾಧ್ಯ
ವಿರಲಿಲ್ಲ. ಒಂದು ದಿನ ಆ ದುಷ್ಟರೀರ್ವರೂ ಏಕಾಂತದಲ್ಲಿ ತಮ್ಮ ಈ
ಕಾರ್ಯಸಾಧನೆಯ ವಿಚಾರವನ್ನು ಮಾತಾಡುತ್ತಿರಲು, ನಾನು ಮರೆಗೆ
ನಿಂತು ಅದನ್ನ ಕೇಳಿದೆನು; ಹಾಗು ಅಂದಿನಿಂದ ಅವರನ್ನು ತಿಲಸ್ಕರಿಸ
ಹತ್ತಿದೆನು. ಅಲ್ಲದೆ ನನ್ನ ತಂದೆಗೆ ಕುಡಿಸುತ್ತಿದ್ದ ವಿಷವನ್ನೂ, ಸಾಧಿಸಿ
ದಾಗ ಆ ನೀರನ್ನು ಚೆಲ್ಲಿ ಬೇರೆ ತುಂಬಿಟ್ಟು ಕಡಿಮೆಮಾಡಹತ್ತಿದೆನು.
ಅವರ ಲೆಕ್ಕದಂತೆ ನಮ್ಮ ತಂದೆಯು ಈಗ ಮೂರು ತಿಂಗಳ ಹಿಂದೆಯೇ
ಸಾಯಬೇಕಾಗಿತ್ತು; ಆದರೆ ನಾನು ಆಗಾಗ್ಗೆ ಅವರು ಕೊಡುತ್ತಿದ್ದ ವಿಷ
ವನ್ನು ವ್ಯರ್ಥವಾಗ ಮಾಡಿದ್ದರಿಂದ ಅವನು ಇಷ್ಟು ಹೆಚ್ಚು ದಿನ ಬದುಕಿ
ದಂತಾಯಿತು. ಮೊನ್ನೆ ನೀವು ನಮ್ಮೂರಿಗೆ ಬಂದ ದಿವಸ ಬೇರೊಂದು
ಬಗೆಯ ವಿಷವನ್ನು ನನಗೆ ಕೊಟ್ಟು, ಅವರು ಮೊದಲು ನನ್ನನ್ನು ಸಂಹರಿಸಿ,
ನಂತರ ನನ್ನ ತಂದೆಯನ್ನು ಕೊಲ್ಲುವ ಆಲೋಚನೆ ಮಾಡಿದ್ದರು. ಅದು
ನನ್ನ ಕಿವಿಗೆ ಮುಟ್ಟಲು, ಇನ್ನು ನಾನು ಇವರ ಬಲೆಗೆ ಬಿದ್ದು ಸಾಯುವ
ದಕ್ಕಿಂತ, ಕೆರೆ-ಬಾವಿಗಳ ಪಾಲಾಗುವದೇ ಲೇಸೆಂದು ಬಗೆದು, ಆ ಪ್ರಕಾರ
ಕೆರೆಯಲ್ಲಿ ಹಾರಿಕೊಂಡಿದ್ದೆನು. ನಾನು ಅವರನ್ನು ತಿರಸ್ಕರಿಸಹತ್ತಿದಂದಿ
ನಿಂದ ನನಗೆ ಹುಚ್ಚು ಹಿಡಿದದೆಯೆಂದು ಅವರು ಜನರಲ್ಲಿ ಸುದ್ದೀ ಬೀರಿ
ದರು. ನನ್ನನ್ನು ಕೆರೆಯಿಂದ ತೆಗೆದು ನೀವು ನಮ್ಮ ಮನೆಗೆ ಹೋದಾಗ
ನನ್ನ ಮೇಲಿನ ವಿಶೇಷ ಕಕ್ಕುಲಾತೆಯಿಂದ ನಮ್ಮ ತಂದೆಗೆ ಬಹಳ ದುಃಖ
ವಾಗಿ ಅವನು ಬವಳಿಬಂದು ಬಿದ್ದನು. ಆದೇ ಸಂಧಿಸಾಧಿಸಿ, ಆ ನೀಚ
ರೀರ್ವರೂ ಅವನ ಮೂಗಿಗೆ ಕ್ಲೋರೋಫಾರ್ಮಿನ ಪ್ರಾಣಹಾರಕ
ವಾಸನೆಯ ವಸ್ತ್ರಗಳನ್ನು ಒತ್ತಿ ಹಿಡಿದು, ಅವನನ್ನು ಕೊಂದುಬಿಟ್ಟರು!

ಪಂತರೇ, ಆ ನೀಚರು ಈಗ ನನ್ನ ಬೆನ್ನು ಹತ್ತಿರುವರು ನಾನು ಫಾಕ್ಸನನ್ನು ಮದುವೆಯಾಗದಿದ್ದರೆ ಆ ನನ್ನ ಮಲತಾಯಿಯು ನನ್ನನ್ನು ಇರಿದು ಕೊಲ್ಲುವೆನೆಂದು, ಫಾಕ್ಸನ ಎದುರಿಗೆ ಪಣತೊಟ್ಟಿರುವಳು ಫಾಕ್ಸನಾದರೂ ನೀಚನೇ; ಆದರೆ ಜೊನ್ಸಳ ನೀಚತನದ ಮುಂದೆ ಆತನು ಕ್ಷು-ಪದಾರ್ಥವೆಂದೇ ಅನ್ನಬಹುದು. ಫಾಕ್ಸನಿಗೂ ಅವಳಿಗೂ ಮೊದಲಿನಿಂದಲೂ ಕೆಟ್ಟ ಸಂಬಂಧವಿದೆ ಇದೆಲ್ಲವನ್ನೂ ಒಂದು ದಿನ ನಾನು ನನ್ನ ತಂದೆಗೆ ತಿಳಿಸಹೋಗಲು, ಇವರ ಬಲೆಯಲ್ಲಿ ಸಂಪೂರ್ಣವಾಗಿ ಸಿಲುಕಿಕೊಂಡಿದ್ದ ಆ ಮುದುಕನು ನನ್ನನ್ನು ಅಲ್ಲಗಳೆದನು. ಅಂದಿನಿಂದ ನಾನು ಉಪಾಯಗಾಣದಾದೆನು.

ಪಂತರೇ, ಇನ್ನು ನನ್ನ ಲಗ್ನದ ವಿಷಯವನ್ನು ಹೇಳುವೆನು, ಕೇಳಿರಿ. ನಮ್ಮಪ್ಪನು ನನ್ನನ್ನು ತನ್ನಲ್ಲಿಯೇ ಸಂರಕ್ಷಿಸಲ್ಪಟ್ಟಿದ್ದ ತನ್ನ ಓರ್ವ ಮಿತ್ರನ ಮಗನಾದ ಶಿಕಂದರನೆಂಬವನಿಗೆ ಕೊಟ್ಟು ಲಗ್ನಮಾಡಬೇಕೆಂದು ನಿರ್ಧರಿಸಿದ್ದನು. ಶಿಕಂದರನ ತಂದೆ-ತಾಯಿಗಳಿರ್ವರೂ ಆತನ ಬಾಲ್ಯದಲ್ಲಿಯೇ ತೀರಿಕೊಂಡಿದ್ದರು ಅವನು ನಮ್ಮ ಮನೆಯಲ್ಲೀ ಇದ್ದು, ಪ್ರಾಥಮಿಕ-ಮಾಧ್ಯಮಿಕ ಶಿಕ್ಷಣಗಳನ್ನು ಮುಗಿಸಿದನು. ಇತ್ತೀಚೆಗೆ ಅವನು ಉಚ್ಚ ತರಗತಿಯ ಶಿಕ್ಷಣ ಹೊಂದುತ್ತಿದ್ದನು; ಆದರೆ ನಮ್ಮ ಹಡೆದವ್ವನು ತೀರಿಕೊಂಡು, ಈ ದಿಗಿಲವ್ವ (ಜೊನ್ಸಳು)ನು ಮನೆಗೆ ಬಂದಂದಿನಿಂದ ಇವಳು ಅವನನ್ನು ಹೆಚ್ಚಾಗಿ ದ್ವೇಷಿಸಹತ್ತಿದಳು. ಶಿಕಂದರನು ಸೂಟಿಯಲ್ಲಿ ಮನೆಗೆ ಬಂದಾಗ ಮನೆಯೊಳಗಿನ ಯಾವ ಉಸಾಬರಿಗೂ ಹೋಗದೆ, ಎಂದಿನಂತೆ ನನ್ನೊಡನೆ ಸುಖಸಲ್ಲಾಪಗಳನ್ನಾಡುತ್ತ ಕಾಲ ಕ್ರಮಿಸುತ್ತಿದ್ದನು. ನಾನು ಅವನಿಗೆ ಕೊಟ್ಟ ಎಡೆಯೇ ಆಗಿದ್ದದರಿಂದಲೂ, ನಾನೂ ಅವನೂ ಬಾಲ್ಯದಿಂದಲೂ ಒಂದೇ ಮನೆಯಲ್ಲಿ ಬೆಳೆದವರಾದ್ದರಿಂದಲೂ ನನ್ನೊಡನೆ ಅವನು ಹಾಗೆ ನಡೆಯುತ್ತಿದ್ದುದು ಸ್ವಾಭಾವಿಕವು; ಆದರೆ ನಮ್ಮ ತಂದೆಯು ತನ್ನ ಎಲ್ಲ ಆಸ್ತಿಯನ್ನು ನನ್ನ ಹೆಸರಿಗೆ ಬರೆದುಕೊಟ್ಟಿದ್ದರಿಂದ ನನ್ನ ಮಲತಾಯಿಗೆ ಅದು ವಿರುದ್ಧವಾಗಿ, ಅವಳು ನನ್ನ ಆ ಭಾವೀ ಪತಿಯನ್ನು ಯಾವುದೊಂದು ಬಗೆಯಿಂದ ಮನೆಯಿಂದೋಡಿಸುವ ಹಂಚಿಕೆ ಹಾಕಹತ್ತಿದಳು ಅಂಥ ಇಂಥ ಕುಹಕ ವಿಚಾರಗಳು ಫಲದ್ರೂಪವಾಗದಾಗಲು, ಶಿಕಂದರನು ತನ್ನನ್ನೇ ಒಡಕೊಳ್ಳಲಿಕ್ಕೆ ಬಂದ

ನೆಂದು ಆ ಮುಂಡೆಯು ನನ್ನ ತಂದೆಯು ಮುಂದೆ ಕೊಚ್ಚಿಕೊಂಡಳು. ನನ್ನ ಮುದಿ ತಂದೆಗೆ ಅದರಿಂದೇನೆನಿಸಿತೋ ತಿಳಿಯದು. ಅವನು ಕೂಡಲೆ ಮನೆ ಬಿಟ್ಟು ಹೋಗಲಿಕ್ಕೆ ಶಿಕಂದರನಿಗೆ ಹೇಳಿದನು ಅದನ್ನು ಕೇಳಿ ತನಗೆ ಒಂದು ಬಗೆಯ ಕೆಟ್ಟ ಹೆಸರು ಬಂದದ್ದರಿಂದ, ಶಿಕಂದರನು ಮನೆಯವ ರಾರಿಗೂ ತಿಳಿಸದೆ ಒಂದು ದಿನ ಮಾಯವಾದನು; ಆದರೆ ಅವನು ಹಾಗೆ ತಾನಾಗಿ ಹೋಗಲಿಲ್ಲವೆಂದೂ, ಆ ನೀಚ ಫಾಕ್ಸ-ಜೊನ್ಸರೇ ಅವನನ್ನು ಪ್ರಜ್ಞಾಹೀನನನ್ನಾಗ ಮಾಡಿ ಎಲ್ಲಿಗೋ ಕಳಿಸಿಬಿಟ್ಟರೆಂದೂ ನನಗೆ ಹಿಂದಿ ನಿಂದ ತಿಳಿದು ಬಂದಿತು. ಅವನನ್ನು ಎಲ್ಲಿಗೆ ಕಳಿಸಿದರು? ಅವನು ಬದು ಕಿರುವನೋ, ಸತ್ತಿರುವನೋ ಎಂಬದಾವುದೂ ಇದುವರೆಗೂ ನನಗೆ ತಿಳಿ ದಿಲ್ಲ. ಈ ಕಾರಣದಿಂದ ನನ್ನ ಮದುವೆಯಿನ್ನೂ ಆಗಿರುವದಿಲ್ಲ, ಎಂದು ಹೇಳಿ, ಮೇರಿಯು ಬಿಕ್ಕಿ ಬಿಕ್ಕಿ ಅಳಹತ್ತಿದಳು.

ಪಂತ:—ತಂಗೀ, ದುಃಖಿಸಬೇಡ. ನಾನು ನಿನ್ನ ದುಃಖನಿವಾರಣೆಯ ಉಪಾಯವನ್ನು ಬೇಗನೆ ಮಾಡುವೆನು. ಅದಿರಲಿ; ಡಾ. ಫಾಕ್ಸನ ಅನು ಯಾಯಿಗಳಾರಾದರೂ ನಿನಗೆ ಗೊತ್ತುಂಟೆ? ನೀನು ಅವರನ್ನು ಪ್ರತ್ಯಕ್ಷವಾಗಿ ಕಾಣದಿದ್ದರೂ ಅವರ ಹೆಸರು-ದೆಸೆಗಳನ್ನಾದರೂ ಬಲ್ಲೆಯಾ?

ಮೇರಿ:—ನಾನು ಅವರನ್ನು ಪ್ರತ್ಯಕ್ಷವಾಗಿ ನೋಡಿಲ್ಲ. ಜೊನ್ಸನೂ ಫಾಕ್ಸನೂ ಗುಪ್ತವಾಗಿ ಮಾತಾಡುತ್ತಿರುವಾಗ್ಗೆ ಒಮ್ಮೆ ಅವರ ಬಾಯಿಂದ ಅವರ ಆಳು ಗೋಪೀಚಂದನೆಂದೂ, ಅವನು ಅಂಬಾ, ಅಂಬಾಲಿಕೆ ಮೊದಲಾ ದವರ ಕೊಲೆಯ ವರ್ತಮಾನವನ್ನೇ ತರಲಿಲ್ಲವಲ್ಲ? ಮುಂತಾದ್ದಂದದ್ದನ್ನೂ ಕೇಳಿರುವೆನು. ಇದರ ಹೊರತು ನನಗೆ ಅವರ ಪರಿಚಾರಕರ ಹೆಸರು-ದೆಸೆ ಗಳಾವವೂ ಗೊತ್ತಿಲ್ಲ. ಪಂತರೇ, ನಾನಿನ್ನು ನನ್ನ ಮನೆಗೆ ಹೋಗುತ್ತೇನೆ. ನೀವು ಆಗಾಗ್ಗೆ ನಮ್ಮ ಮನೆಗೆ ಬಂದು ನನ್ನ ಸಮಾಚಾರವನ್ನು ತಕ್ಕೊಳ್ಳು ತ್ತಿರ್ರಿ. ಈ ಮಾತಾ-ಪಿತೃವಿಹೀನ ಅನಾಥಬಾಲಿಕೆಗೆ ನೀವೇ ಇನ್ನು ತಂದೆ ತಾಯಿಗಳು; ಎಂದಂದು ಅವನ ಕಾಲುಹಿಡಕೊಂಡು ಅಳಹತ್ತಿದಳು

ಪಂತನು ಅವಳಿಗೆ ಹಲವು ಸಮಾಧಾನೋಕ್ತಿಗಳನ್ನು ಹೇಳಿದನು; ಹಾಗು ಅವಳನ್ನು ಅಂದು ಮನೆಗೆ ಕಳಿಸಲಿಲ್ಲ. "ನಾಳೆ ಬೆಳಿಗ್ಗೆ ನಾನೇ ನಿನ್ನನ್ನು ನಿನ್ನ ಮನೆಗೆ ಕಳಿಸಿ ಬರುವೆನು" ಎಂದು ಹೇಳಿ, ಅವಳನ್ನು ತನ್ನ ಮನೆಗೆ ಕರೆದೊಯ್ದು, ತನ್ನ ಹೆಂಡತಿಯ ಸ್ವಾಧೀನಪಡಿಸಿದನು.

ಅಂದೇ ಮಧ್ಯಾಹ್ನದಲ್ಲಿ ಪಂತನು ಭುಜಂಗರಾಯನ ಮನೆಗೆ ಬಂದು, ಚಿಕ್ಕಕೋಣೆಯಲ್ಲಿ ಉಭಯತರೂ ಗೌಪ್ಯವಾಗಿ ಕುಳಿತು ಏನೇನೋ ನಿರ್ಧರಿಸಿದರು. ನಂತರ ರಾಯನು ಒಬ್ಬ ಜಮಾದಾರನನ್ನು ಕರೆದು ಅವನ ಕಿವಿಯಲ್ಲಿ ಏನೇನೋ ಹೇಳಿಕಳಿಸಿದನು. ತುಸಹೊತ್ತಿನಲ್ಲಿ ಆ ಜಮಾದಾರನು ಛದ್ಮವೇಷದಿಂದ ಸಜ್ಜಾಗಿ ಅಲ್ಲಿಗೆ ಬಂದನು. ಭುಜಂಗ ರಾಯನೂ ಛದ್ಮವೇಷಧರಿಸಿ ಬಕ್ಕಣದಲ್ಲಿ ಒಂದು ಪಿಸ್ತೂಲು, ೪-೬ ಜೊತೆ ಹೊಸಮಾದರಿಯ ಬೇಡಿ ಮುಂತಾದವುಗಳನ್ನಿರಿಸಿಕೊಂಡನು. ಪಂತನು ತನ್ನ ನಿತ್ಯದ ಪೋಷಾಕಿನಿಂದಲೇ ಅವರೊಡನೆ ನಡೆದನು. ರಾಯನು ಹೋಗುವಾಗ ತನ್ನ ೨೫ ಜನ ಶಿಪಾಯಿಗಳಿಗೆ "ಇಂಥಿಂಥಲ್ಲಿ ಗುಪ್ತವಾಗಿ ಕುಳಿತುಕೊಂಡಿರ್ರಿ. ನಾನು ಕೊಳಲು ಊದಿದೊಡನೆ ಒಮ್ಮೆಲೆ ನಾಲ್ಕೂ ಕಡೆಯಿಂದ ಬಂದು ಮುಗಿಬೀಳಿರಿ" ಎಂದು ಅಜ್ಞಾಪಿಸಿದನು.

ಡಾ. ಫಾಕ್ಸನ ಬಂಗಲೆಯು ಸಿದ್ಧದೇವಪುರದ ಮೇನರೋಡಿನಿಂದ ೧|| ಮೈಲು ಪಕ್ಕದಲ್ಲಿ ಇದ್ದಿತು. ಬಂಗಲೆಯು ಅಷ್ಟೊಂದು ದೊಡ್ಡದಲ್ಲದಿದ್ದರೂ, ಎಲ್ಲ ಆಧುನಿಕ ಅನುಕೂಲತೆಗಳಿಂದಲೂ ಸಜ್ಜಾಗಿತ್ತು. ಪಂತಾದಿಗಳು ತೀವ್ರವೇ ಡಾಕ್ಟರನ ಬಂಗ್ಲೆಗೆ ಹೋಗಿ, ಅಲ್ಲಿಯ ಹೂವಾಡಿಗನನ್ನು ಕುರಿತು:—ಡಾಕ್ಟರರು ಇರುವರೇ? ದೂರಿನ ಹಳ್ಳಿಯಿಂದ ನಾವು ಔಷಧಕ್ಕೆ ಬಂದಿರುವೆವೆಂದು ಕೇಳಿದರು "ಡಾಕ್ಟರರು ಅಟ್ಟದ ಮೇಲಿರುವರು. ಇನ್ನು ಅರ್ಧ ಗಂಟೆಗೆ ಕೆಳಗೆ ಬರುವರು. ನೀವು ಅಗೋ ಅಲ್ಲಿ ಕಾಣುವ ಕುರ್ಚಿಗಳ ಮೇಲೆ ಕುಳಿತುಕೊಳ್ಳಹೋಗಿರಿ," ಎಂದು ಅವನು ಹೇಳಿದನು. ಭುಜಂಗರಾಯನನ್ನು ಜಮಾದಾರನೊಡನೆ ಕೆಳಗೆ ಕೂಡ್ರಿಸಿ, ಪಂತನು ಕಾಲ ಸಪ್ಪಳ ಮಾಡದ ಹಾಗೆ ಅಟ್ಟವನ್ನೇರಿದನು; ಹಾಗು ಅಲ್ಲಿಯ ದಿವಾಣಖಾನೆಯ ಬಾಗಿಲವನ್ನು ಮೆಲ್ಲಗೆ ಒತ್ತಿದನು. ಅದು ಒಳಗಿನಿಂದ ಭದ್ರವಾಗಿ ಇಕ್ಕಲ್ಪಟ್ಟಿತ್ತು. ಆಗ ಅವನು ಅದಕ್ಕೆ ಕಿವಿಗೊಟ್ಟು ಒಳಗೆ ಏನು ನಡೆದಿರುವದೆಂಬದನ್ನು ಲಾಲಿಸಹತ್ತಿದನು.

ಆ ಕೋಣೆಯಲ್ಲಿ ಇಬ್ಬರು ವ್ಯಕ್ತಿಗಳು ಮೆಲ್ಲಮೆಲ್ಲನೆ ಮಾತಾಡುತ್ತಿದ್ದರು. ಒಬ್ಬನು ಫಾಕ್ಸನೆಂಬಡನನ್ನೂ, ಇನ್ನೊಬ್ಬನು ಗೋಪೀಚಂದನೆಂಬದನನ್ನೂ ಅವನು ಕೂಡಲೆ ಕಂಡುಕೊಂಡನು. ಫಾಕ್ಸನು ಗೋಪೀಚಂದನನ್ನು ಕುರಿತು:—ಗೋಪೀಚಂದ, ಇನ್ನು ನನ್ನ ಯಾವ ಇಚ್ಛೆಗಳೂ ಬಾಕಿ

ಉಳಿಯಲಾರವು. ಆ ಪಂತನು ಜೀವದಿಂದಿರುವವರೆಗೆ ನನಗೊಂದು ಬಗೆಯ ಆತಂಕ-ಮನಸ್ಸಿನ ದಗದಗೆ ಎನಿಸುತ್ತಿತ್ತು. ನೀನು ನಿನ್ನ ಕೆಲಸವನ್ನು ಕೊನೆಗಾಣಿಸಲಿಲ್ಲ. ನೀನೂ ಜೊನ್ಸಳೂ ನನ್ನ ಸಹಾಯಕರಾಗಿರುವಾಗ ನಾನಿಂತು ಕುಂದಬೇಕೆ?

ಗೋಪೀ:—ಧಣಿಯರೇ, ಜೊನ್ಸಳ ಸಹಾಯವಿರದಿದ್ದರೆ ನಮ್ಮಿಂದ ಯಾವ ಕೆಲಸವೂ ಆಗುತ್ತಿರಲಿಲ್ಲ. ಅವಳಂತಹ ಖಂಬೀರ ಸ್ತ್ರೀಯನ್ನು ನಾನಿದುವರೆಗೂ ನೋಡಿಲ್ಲ.

ಫಾಕ್ಸ:—ಅಂತೇ ನಾನು ಅವಳನ್ನು ನನ್ನ ಬಲಗೈ ಎಂದು ತಿಳಿದಿರುತ್ತೇನೆ. ಆಕೆಯ ಸಹಾಯವಿರದಿದ್ದರೆ ಲಾಂಗಮನ್ನನ ಮನೆಯಲ್ಲಿ ಮುಂದಿಗೆ ಕೊಂಚವೂ ಸಂಶಯವುಂಟಾಗದಂತೆ ಮೂರು ಕೊಲೆಗಳನ್ನು ಅಷ್ಟು ತೀವ್ರ ಸಾಧಿಸಬಹುದೇ? ಶಿಕಂದರನನ್ನು ಸೆರೆಹಿಡಿಯಬಹುದೇ? ಆದರೆ ಗೋಪೀಚಂದ, ನಾನು ಜೊನ್ಸಳಲ್ಲೂ ಮಿತಿಮೀರಿ ವಿಶ್ವಾಸವಿಡುವಂತಿಲ್ಲ. ಯಾಕಂದರೆ ಹೇಳಿ ಕೇಳಿ ಅವಳು ಮಿಂಡೆಯು. ಮೇಲಾಗಿ ಸಾಹಸ, ಕ್ರೌರ್ಯ ಮುಂತಾದವುಗಳಲ್ಲಿ ಅವಳು ನನ್ನನ್ನೂ ಮೀರಿದವಳು ಆದರಿಂದ ಮನಸ್ಸು ಬರದಿದ್ದರೆ ಅವಳು ಬೇಕಾದಾಗ ನನ್ನನ್ನು ಬಿಟ್ಟುಹೋಗಬಲ್ಲಳು.

ಫಾಕ್ಸನ ನುಡಿಯನ್ನು ಕೇಳಿ ಗೋಪೀಚಂದನಿಗೆ ನಗೆ ಬಂತು. "ಧಣಿಯರೇ, ಒಬ್ಬ ಅಬಲೆಯು ತಮ್ಮಂಥ ಸಬಲರಿಗೆ ಮಣಿಯುವದಿಲ್ಲವೆ? ಅದಕ್ಕಾಗಿ ತಾವಿಷ್ಟು ಚಿಂತಿಸುವುದೆ?"

ಫಾಕ್ಸ:—ಆದಿರಲಿ ಬಿಡು. ಗೋಪೀಚಂದಾ, ಆ ಪಂತನಿದ್ದನಂತೇ ಅಂದು ಅಂಬಿಕೆಯು ಆ ನಾರಾಯಣ ಶಾಸ್ತ್ರಿಯ ಮನೆಯಿಂದ ಅವಳ ಮುತ್ತಜ್ಜನ ಮನೆಸೇರಿದಳು. ಅವನೇ ನನ್ನ ಎಲ್ಲ ಕೆಲಸಗಳಿಗೆ ವಿಘಾತಕನು. ಅಂತೇ ನಾನು ಅವನನ್ನು ಇಷ್ಟು ತೀವ್ರ ಕಾಣಿಸಿದ್ದು. ಅಂಬಿಕೆಯನ್ನು ಮತ್ತೆ ಶೋಧಿಸಿ ಸಂಹರಿಸದ ಹೊರತು ಗೋವಿಂದರಾಯನಿಂದ ಬರತಕ್ಕ ೨೫ ಸಹಸ್ರಗಳಲ್ಲಿ ಒಂದು ಪೈ ಕೂಡ ಬಾರದೆಂದು ನೀನೇ ಸುದ್ದಿ ತಂದೆಯಲ್ಲವೆ? ಆದುದರಿಂದ ನೀನಿನ್ನು ಬೇಗನೆ ಆಕೆಯ ಶೋಧಹಚ್ಚು.

ಗೋಪೀ:—ಮೇರಿಯು ನಿಮ್ಮನ್ನು ಲಗ್ನವಾಗದಿದ್ದರೆ? ಶಿಕಂದರನು ಇನ್ನು ಎಷ್ಟು ದಿವಸಗಳವರೆಗೆ ಆ ಕತ್ತಲೆಕೋಣೆಯಲ್ಲಿ ಕೊಳೆಯಬೇಕು? ಮೇರಿಯು ನಿಮ್ಮನ್ನು ವರಿಸಿದ ಬಳಿಕ ಅವನನ್ನು ಬಿಟ್ಟುಬಿಡಬಹುದಲ್ಲವೆ?

ಫಾರ್ಕ್ಸ:—ಆಕೆಯು ನನ್ನನ್ನು ಲಗ್ನವಾಗುವ ಬಗ್ಗೆ ಯತ್ನನಡೆದದೆ. ಅದಕ್ಕೆ ಅವಳು ಒಪ್ಪದಿದ್ದರೆ ಅವಳನ್ನು ಅವಳ ತಂದೆ-ತಾಯಿಗಳ ಬಳಿಗೆ ಕಳಿಸುವೆನು. ಆಕೆಗೆ ಹುಚ್ಚುಹಿಡಿದ ಸುದ್ದಿಯೂ, ಹುಚ್ಚಿನ ಭರದಲ್ಲಿ ಅವಳು ವೊನ್ನೆ ಕೆರೆಯಲ್ಲಿ ಹಾರಿಕೊಂಡದ್ದೂ ಜನರಿಗೆ ತಿಳಿದೇ ಇದೆ. ಆಕೆಯನ್ನು ನಾವು ಹೇಗೆ ಸಂಹರಿಸಿದರೂ ಹುಚ್ಚಿನಿಂದಲೇ ಅವಳ ಮರಣವಾಯಿತೆಂದು ಜನರು ಸಹಜವಾಗಿ ತಿಳಕೊಳ್ಳುವರು. ಮೇರಿಯು ನನ್ನನ್ನು ಲಗ್ನವಾದರೂ-ಆಗದಿದ್ದರೂ ಶಿಕಂದರನನ್ನು ಈಗಲೇ ಬಿಟ್ಟುಬಿಡುವಂತಿಲ್ಲ; ಹಾಗು ಸಂಹರಿಸುವಂತೂ ಇಲ್ಲ. ಅವನಿಂದ ನಾನು ಬೇರೊಂದು ಅಘಟಿತಘಟನೆಯನ್ನು ಸಾಧಿಸಿಕೊಳ್ಳಬೇಕಾಗಿದೆ.

ಪಂತನು ಅವರೀರ್ವರ ಭಾಷಣವನ್ನು ಏಕಾಗ್ರಚಿತ್ತದಿಂದ ಕೇಳುತ್ತಲೇ ಇದ್ದನು. ಮೇರಿಯು ತಿಳಿಸಿದ ಸಂಗತಿಯೆಲ್ಲ ಯಥಾರ್ಥವಾದುದೆಂದು ಅವನ ಖಾತ್ರಿಯಾಯಿತು. ಅಷ್ಟರಲ್ಲಿ ಫಾರ್ಕ್ಸನು ಗೋಪೀಚಂದನಿಗೆ:—ಗೋಪೀ, ನಾನು ಕೆಳಗೆ ಹೋಗಿ ಬರುವೆನು. ತುಸಹೊತ್ತು ನೀನು ಇಲ್ಲಿಯೇ ಇರು, ಎಂದು ಹೇಳಲು, ಪಂತನು ಶೀಘ್ರಗತಿಯಿಂದ, ಆದರೆ ಸ್ವಲ್ಪವೂ ಕಾಲುಸಪ್ಪಳವಾಗದ ಹಾಗೆ ಅಟ್ಟದಿಂದಿಳಿದು ಬಂದು, ಮುಂದೆ ಮಾಡತಕ್ಕ ವಿಧಾನವನ್ನು ಭುಜಂಗರಾಯಾದಿಗಳಿಗೆ ಸೂಕ್ಷ್ಮವಾಗಿ ನಿವೇದಿಸಿ, ಒಂದು ಬೆಂಚಿನಮೇಲೆ ಹೊಟ್ಟೆಹಚ್ಚಿ ನಿಸ್ತಬ್ಧವಾಗಿ ಬಿದ್ದುಕೊಂಡನು.

ಕೆಲನಿಮಿಷಗಳಲ್ಲಿಯೇ ಡಾ. ಫಾರ್ಕ್ಸನು ಕೆಳಗಿಳಿದು ಬಂದನು ಅವನಿಗೆ ಭುಜಂಗರಾಯ ಹಾಗು ಜಮಾದಾರರ ಗುರುತು ಹತ್ತಲಿಲ್ಲ. ಆಗ ಅವರು ಹಳ್ಳಿಯವರಂತೆ ನಟಿಸಿ:—ಡಾಕ್ತರಸಾಹೇಬ, ಈ ನಮ್ಮ ತಮ್ಮನಿಗೆ ಆಗಾಗ್ಗೆ ಮಲರೋಗ ಬರುತ್ತದೆ. ಔಷಧೋಪಚಾರಕ್ಕಾಗಿ ತಮ್ಮಕಡೆಗೆ ಕರತಂದಿರುವೆವು. ಇಲ್ಲಿಗೆ ಬರುವವರೆಗೆ ಈತನು ಹುಷಾರಾಗಿದ್ದನು. ಬಂದಕೂಡಲೆ ಇವನಿಗೆ ಮತ್ತೆ ರೋಗಬಂದಿದೆ. ಸಾಹೇಬರೇ, ಬಡವರಮೇಲೆ ದಯವಿಟ್ಟು ತಾವು ಇವನನ್ನು ಪರೀಕ್ಷಿಸಿ ಉಪಚಾರ ಮಾಡಿರಿ ನಾವು ನಮ್ಮ ಕೈಲಾದನುಟ್ಟಿಗೆ ತಮ್ಮ ಫೀ ಕೊಡುವೆವು, ಎನ್ನಲು, ಡಾಕ್ಟರನು ಹೊಟ್ಟೆಹಚ್ಚಿ ಮಲಗಿದ್ದ ಆ ಮನುಷ್ಯನನ್ನು ಅಂಗಾತ ಮಾಡಿದನು. ಅವನ ಮುಖಮುದ್ರೆಯು ದೃಷ್ಟಿಗೆ ಬಿದ್ದಕೂಡಲೆ ಫಾರ್ಕ್ಸನ ಎದೆಯು ಧಸ್ಸೆಂದಿತು;. ಮುಖವು ಕಪ್ಪಿಟ್ಟಿತು. ಆಗ ಅವನು ತನ್ನ

ಬಕ್ಕಣದೊಳಗಿಂದ ಒಂದು ನಿಡಿದಾದ ಚೂರಿಯನ್ನು ತೆಗೆದು, ಅದನ್ನು ಆ ರೋಗಿಯ-ಪಂತನ-ಹೃದಯಲ್ಲಿ ಚುಚ್ಚುವದಕ್ಕಾಗಿ ಆವೇಶದಿಂದ ಮೇಲ ಕ್ಕೆತ್ತಿದನು. ಆ ಚೂರಿಯ ಹದನಾದ ತುದಿಯು ಮೇಲಿನ ಕಬ್ಬಿಣಸಲಾಕಿಗೆ ತಗಲಲು, ಕೋಲುಮಿಂಚಿನಂತೆ ಪ್ರಕಾಶಬಿದ್ದಿತು. ಅಷ್ಟರಲ್ಲಿ ಭುಜಂಗ ರಾಯನು ಅವನ ಆ ಕೈಯನ್ನು ಕಸುವಿನಿಂದ ಒತ್ತಿಹಿಡಿದನು. ಪಂತನೂ ಎದ್ದುನಿಂತು ಬೇರೆ ಕೈಯನ್ನು ಒತ್ತಿಹಿಡಿದನು. ಜಮಾದಾರನು ಆ ಚೂರಿ ಯನ್ನು ಕಸಿದನು. ಹೀಗೆ ಆ ಮೂವರೂ ಫಾಕ್ಸನ ಮೈಮೇಲೆ ಏರಿ ಹೋದರೂ ಅವನು ಇವರಿಗೆ ಒಮ್ಮೆಲೆ ಬಗ್ಗಲಿಲ್ಲ. ಕಡೆಗೆ ಆ ಮೂವರೂ ಸಾಹಸಬಟ್ಟು ಅವನ ಕೈ, ಕಾಲುಗಳಿಗೆ ಜೋಡು ಜೋಡು ಬೇಡಿ ಜೋಡಿಸಿ, ಟೊಂಕಕ್ಕೆ ಒಂದು ಕಬ್ಬಿಣ ಸರಪಳಿಯಿಂದ ಕಟ್ಟಿ, ಅವನನ್ನು ಅಲ್ಲಿಯ ಒಂದು ಕಂಬಕ್ಕೆ ಬಿಗಿದರು

ಹೀಗೆ ಫಾಕ್ಸನು ಆಕಸ್ಮಿಕವಾಗಿ ಪಂತಾದಿಗಳಿಂದ ಬಂಧಿಸಲ್ಪಡಲು, ಪಂತನು ಫಾಕ್ಸನನ್ನು ಕುರಿತು:—"ಯಾಕೆ ಡಾಕ್ಟರಸಾಹೇಬರೇ, ಪಂತನು ಸತ್ತುಹೋದನೋ ಜೀವದಿಂದಿರುವನೋ ಎಂಬದರ ಖಾತ್ರಿಯಾಯಿತೆ?" ಎಂದು ನುಡಿದು ಗಹಗಹಿಸಿ ನಕ್ಕನು.

ಡಾಕ್ಟರನಾದರೂ ಸೊಕ್ಕಿನಿಂದಲೇ ನಕ್ಕು:—ಎಲೇ ಪಂತಾ, ಎಲ್ಲಿಯ ವರೆಗೆ ಈ ಫಾಕ್ಸನು ಜೀವಂತನಿರುವನೋ ಅಲ್ಲಿಯ ವರೆಗೆ ನೀನು ಈಗ ಸಾಯದಿದ್ದರೂ, ಸಾಯುಲಿಕ್ಕೆ ತಡವಿಲ್ಲೆಂದು ತಿಳಿ, ಎಂದೆಂದು ತನ್ನ ಕೈ ಬೇಡಿಗಳನ್ನು ಎದುರಿಗಿನ ಕಬ್ಬಿಣದ ಕಂಬದ ಮೇಲೆ ಬಡಿಯಲು, ಬೇಡಿ ಗಳಿಗೂ ಕಂಬಕ್ಕೂ ಕೂಡಿಯೇ ಬಲವಾದ ನೆಗ್ಗು ಬಿದ್ದವು. ಕೂಡಲೆ ರಾಯನು ಕೊಳಲನ್ನೂದಲು, ಸಮೀಪದಲ್ಲಿ ಹುದುಗಿಕೊಂಡಿದ್ದ ಸಶಸ್ತ್ರ ಶಿಪಾಯಿಗಳ ಟೋಳಿಯು ಅಲ್ಲಿಗೆ ಬಂತು ಅವರ ಸ್ವಾಧೀನಕ್ಕೆ ಫಾಕ್ಸನನ್ನು ಒಪ್ಪಿಸಿ, ಇವನನ್ನು ಒಳ್ಳೇ ಭದ್ರವಾದ ಪಹರೆಯಲ್ಲಿ ತುರಂಗಿಗೆ ಸಾಗಿಸಿ ರೆಂದು ಹೇಳಿ, ಪಂತಾದಿಗಳು ಲಾಂಗಮನ್ನನ ಮನೆಯ ಕಡೆಗೆ ನಡೆದರು. ಕೆಳಗಿನ ಗದ್ದಲವನ್ನೂ ಫಾಕ್ಸನು ಪಂತಾದಿಗಳಿಂದ ಬಂಧಿಸಲ್ಪಟ್ಟಿದ್ದನ್ನೂ ತಿಳಿದ ಗೋಪೀಚಂದನು ಎತ್ತೋ ಮಾಯವಾದನು. ಪಂತಾದಿಗಳಿಗೆ ಅವನ ಪತ್ತೆಯೇ ಹತ್ತಲಿಲ್ಲ.

ಫಾಕ್ಸನನ್ನು ಸೆರೆಹಿಡಿದು ಸಾಗಿಸಿದ ಕೆಲಹೊತ್ತಿನಲ್ಲಿಯೇ ಆ ಸುದ್ದಿ

ಯೆಲ್ಲ ಆ ಸಿದ್ಧದೇವಪುರದ ಸಮೀಪದ ವಾಳ್ಯಗಳಲ್ಲೆಲ್ಲ ಪ್ರತಿಧ್ವನಿಗೊಂಡಿತು. ಜೊನ್ಸಳಿಗೂ ಅದು ತೀವ್ರವೇ ಗೊತ್ತಾಯಿತು. ಆಗ ಅವಳು ಮುಂದೇನು ಮಾಡಬೇಕೆಂಬದನ್ನು ಆಲೋಚಿಸಿ ನಿರ್ಧರಿಸುವದಕ್ಕಾಗಿ ತನ್ನ ಶಯನಾಗಾರಕ್ಕೆ ಹೋಗಿ, ಒಳಗಿಂದ ಬಾಗಿಲವನ್ನಿಕ್ಕಿಕೊಂಡು ಇನ್ನು ಹಾಸಿಗೆಯ ಮೇಲೆ ಬಿದ್ದುಕೊಳ್ಳತಕ್ಕವಳಿದ್ದಳು; ಅಷ್ಟರಲ್ಲಿ ಪಂತನಿಂದ ಪ್ರೇರಿಸಲ್ಪಟ್ಟ ಜೊನ್ಸಳ ಒಬ್ಬ ದಾಸಿಯು ಬಾಗಿಲ ಬಡಿದಳು.

"ಯಾರೆ"ಂದು ಜೊನ್ಸಳು ಕೂಗಲು, "ನಾನು; ಬಾಗಿಲ ತೆರೆ, ಹೇಳುವೆನು" ಎಂಬ ಲಲನಾ ಶಬ್ದವು ಕೇಳಿಸಿತು. ಕೂಡಲೆ ಅವಳು ಬಾಗಿಲ ತೆರೆದು ನೋಡುತ್ತಾಳೆ, ಎದುರಿಗೆ ಪಂತನು ಕೆಲ ಜನ ಸಶಸ್ತ್ರ ಪೋಲೀಸ ಕರ್ಮಚಾರಿಗಳೊಂದಿಗೆ ನಿಂತುಕೊಂಡಿದ್ದು, ತನ್ನನ್ನು ಕರೆದ ದಾಸಿಯು ಮುಗುಳುನಗೆಯಿಂದ ಹೊರಟು ಹೋಗುತ್ತಿರುತ್ತಾಳೆ. ಆಗ ಅವಳ ಪಿತ್ಥವು ಕೆರಳಿತು; ಕಣ್ಣು ಮತ್ತು ಮುಖಗಳು ಕೆಂಪಡರಿದವು; ತುಟಿಗಳು ನಡುಗಹತ್ತಿದವು; ಸಿಟ್ಟು ಬೆಂಕಿಯಾದಳು. ಕೂಡಲೆ ಅವಳು ಧಾವಿಸುತ್ತ ಹೋಗಿ, ಎಡಗೈಯಿಂದ ಆ ದಾಸಿಯ ಕೂದಲನ್ನು ಹಿಡಿದು ಜಗ್ಗಿ ನಿಲ್ಲಿಸಿ, ಬಲಗೈಯಿಂದ ತನ್ನ ಸೀರೆಯಲ್ಲಿ ಬಚ್ಚಿಟ್ಟಿದ್ದ ಹದನಾದ ಕಠಾರಿಯನ್ನು ಹಿರಿದು ಅವಳ ಹೊಟ್ಟೆಯಲ್ಲಿ ಚುಚ್ಚಿದಳು! ಅದರ ತುದಿಯು ಅವಳ ಬೆನ್ನಲ್ಲಿ ಹೊರಬಿದ್ದಿತು!! ಇದನ್ನೆಲ್ಲ ಬರೆಯುವ-ಓದುವದಕ್ಕೆ ಎಷ್ಟು ವೇಳೆಯು ಹಿಡಿಯುವದೋ ಅದರ ಶತಾಂಶ ಕಾಲವು ಸಹ ಜೊನ್ಸಳಿಗೆ ಆ ಕ್ರೂರ ಕರ್ಮವನ್ನು ಮಾಡಲಿಕ್ಕೆ ಹಿಡಿಯಲಿಲ್ಲ. ಹೊಟ್ಟೆಯಲ್ಲಿ ಕಠಾರಿಯು ನೆಟ್ಟ ಕೂಡಲೆ ಆ ಬಡ ದಾಸಿಯು ಚಿಟ್ಟನೆ ಚೀರಿ:—"ಅಪ್ಪಾ, ಸತ್ತೆನು-ಸತ್ತೆನು" ಎಂದವಳೇ ನೆಲಕ್ಕೆ ಬಿದ್ದುಬಿಟ್ಟಳು. ಅವಳ ದೇಹದಿಂದ ಚಿಮ್ಮುವ ಬಿಸಿಬಿಸಿ ರಕ್ತದಿಂದ ಆ ಮನೆಯಲ್ಲ ರಕ್ತಪೂರ್ಣವಾಯಿತು. ಅಲ್ಲಿದ್ದವರ ಬಟ್ಟೆ-ಬರೆ-ದೇಹಗಳ ಮೇಲೆ ಆ ರಕ್ತದ ಎಷ್ಟೋ ಹನಿಗಳು ಸಿಡಿಯಹತ್ತಿದವು. ಅಷ್ಟರಲ್ಲಿ ಜೊನ್ಸಳು ಆ ಕಠಾರಿಯನ್ನು ಹಿರಿದು, ಅದರಿಂದ ಇನ್ನು ಪಂತನನ್ನೂ ಇರಿಯತಕ್ಕವಳು ಆ ಖೂನಿನ ದೃಶ್ಯವನ್ನು ಕಂಡು ಭುಜಂಗರಾಯನೂ, ಜಮಾದಾರನೂ ತುಸ ಹಿಂದೆ ಸರಿದರು; ಆದರೆ ಹಿಂಜರಿಯುವ ಸಮಯವಿದಲ್ಲೆಂದು ಪಂತನು ಒಮ್ಮೆಲೆ ಹೋಗಿ, ಅವಳ ಕಠಾರಿಯುಕ್ತ ಬಲಗೈಯನ್ನು ಒತ್ತಿ ಹಿಡಿದನು. ಅದನ್ನು ಕಂಡು ಭುಜಂಗ

ರಾಯನೂ, ಜಮಾದಾರನೂ ಅವನ ಸಹಾಯಕ್ಕೆ ಬಂದರು. ಆಗ ಆ ಸಾಹಸಿಯು ಬಲಗೈಯೊಳಗಿನ ಕಠಾರಿಯನ್ನು ತಿರವಿದ್ದ ತನ್ನ ಎಡಗೈಯಲ್ಲಿ ಹಿಡಿದುಕೊಂಡು, ಒಮ್ಮೆಲೆ ಪಂತನನ್ನು ಬಲವಾಗಿ ಚುಚ್ಚಹೋದಳು; ಆದರೆ ದೈವವಶಾತ್ ಅದು ಅವನಿಗೆ ಬಡಿಯದೆ, ಜಮಾದಾರನ ರಟ್ಟೆಯಲ್ಲಿ ನೆಟ್ಟಿತು. ಅದರಿಂದ ವಿಹ್ವಲನಾಗಿ ಅವನೂ ಚೀರುತ್ತ ನೆಲಕ್ಕುರುಳಿದನು! ಪಂತನು ಅದೇ ಕಾಲಕ್ಕೆ ಅವಳ ಎರಡೂ ಕೈಗಳನ್ನು ಹಿಂದಿನಿಂದ ಬಲವಾಗಿ ಹಿಡಿದು, ಅವಳನ್ನು ಬೊಗ್ಗಿಸಿದನು. ಭುಜಂಗರಾಯನು ಅವಳ ಕೈಗೂ, ಕಾಲಿಗೂ ಜೋಡು ಬೇಡಿಗಳನ್ನು ಜಡಿದನು. ಹೀಗಾಗಿ ಅಂದು ಜೊನ್ಸಳು ಪಂತನಿಂದ ಸೆರೆಹಿಡಿಯಲ್ಪಟ್ಟಳು.

ಜೊನ್ಸಳನ್ನು ಸೆರೆಹಿಡಿಯುವದು ಎಷ್ಟು ಸುಲಭವೆಂದು ಪಂತನು ಗೃಹಿಸಿದ್ದನೋ ಅಷ್ಟು ಅದು ಕಠಿಣವಾಯಿತು. ಜೊನ್ಸಳಂಥ ಶಕ್ತಿಸಂಪನ್ನ, ಸಮಯಚತುರ, ಕ್ರೂರ ಸ್ತ್ರೀಯನ್ನು ಅವನು ಇದುವರೆಗೂ ನೋಡಿರಲಿಲ್ಲ. ಅವಳು ಒಬ್ಬಳನ್ನು ಕೊಂದು, ಒಬ್ಬನನ್ನು ಗಾಯಗೊಳಿಸಿದ ನಂತರ ಕೈ ವಶವಾಗಬೇಕಾದರೆ ಪಂತಾದಿಗಳ ಪೂರ್ವಜನ್ಮಗಳ ಸುಕೃತವೆಲ್ಲ ತೀರಿ ಹೋಗಿತ್ತು. ತನ್ನನ್ನು ಹಿಡಿದು ಬೇಡಿತೊಡಿಸಿದ ಬಳಿಕ ಜೊನ್ಸಳು ಪಂತನನ್ನು ಕುರಿತು ಒಳ್ಳೇ ದಿಟ್ಟತನದಿಂದ:—ಪಂತನೇ, ನಿನ್ನ ಸುದೈವವೆಂದೇ ನೀನಿಂದು ನನ್ನ ಏಟಿನಿಂದ ಬದುಕಿದೆ. ಇಲ್ಲದಿದ್ದರೆ ನಾನು ಇಂದು ನಿನ್ನ ರಕ್ತದಿಂದ ಸ್ನಾನಮಾಡಿ ನನ್ನ ಮನೋಬಯಕೆಯನ್ನು ಈಡೇರಿಸಿಕೊಳ್ಳುತ್ತಿದ್ದೆನು, ಎನ್ನಲು, ಪಂತನು ಅವಳನ್ನು ಮತ್ತೆ ಮಾತಾಡಗೊಡದೆ:—ಡಾ. ಫಾಕ್ಸನ ಮಿಂಡೆಗೆ ಅದೊಂದು ಆಶ್ಚರ್ಯದ ಮಾತಲ್ಲ! ಎಂದನು.

ಜೊನ್ಸ:—ಏನಂದಿ? ನಾನು ಫಾಕ್ಸನ ಸೂಳೆಯೆ? ಇದು ತೀರ ಸುಳ್ಳು. ಇದನ್ನು ನಿನಗಾರು ಹೇಳಿದರು?

ಪಂತ:—ನಿನ್ನ ಮಿಂಡ-ಫಾಕ್ಸನೇ ಹೇಳಿದನು. ಇಷ್ಟೇ ಅಲ್ಲ, ನೀನು ವಿಷಪ್ರಯೋಗ ಮಾಡಿ ಲಾಂಗಮನ್ನನ ಮನೆಯೊಳಗಿನ ಮೂರು ಪ್ರಾಣಗಳನ್ನು ಹರಣಮಾಡಿರುವಿ.

ಜೊನ್ಸ:—ಇದೆಲ್ಲವೂ ಸುಳ್ಳೇ. ಇದನ್ನೆಲ್ಲ ಫಾಕ್ಸನೇ ಹೇಳಿದನೇನು? ಅವನು ಅಂದಿದ್ದರೆ ನಾನು ಅದಕ್ಕೆ ಒಪ್ಪುತ್ತೇನೆ. ಪಂತ, ಇನ್ನು ನನ್ನನ್ನೆಲ್ಲಿಗೆ ಒಯ್ಯುವಿರಿ?

"ಎಲ್ಲಿಗೆ ಕಳಿಸುವದರಿಂದ ನಿನ್ನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವು ಲಭಿಸುವದೋ ಅಂಥ ಯೋಗ್ಯ ಸ್ಥಳಕ್ಕೇ ನಿನ್ನನ್ನು ಕಳಿಸುವೆವು" ಎಂದು ಪಂತನು ಅನ್ನಲು, ಜೊನ್ಸಳು ಕ್ರೋಧಭರದಿಂದ:—ಪಂತಾ, ನಾಗಸರ್ಪಕ್ಕಿಂತಲೂ ಭಯಂಕರವಾದ ಈ ಜೊನ್ಸಳನ್ನು ತಡವಿ ಇಂದು ನೀನು ಚಲೋ ಕೆಲಸ ಮಾಡಲಿಲ್ಲ. ನೀನು ಇಂದು ನಾಗರಹಾವಿನ ಹೆಡೆಯ ಮೇಲೆ ಆಘಾತ ಮಾಡಿದಂತಾಗಿರುತ್ತದೆ. ಇದರ ಪ್ರತಿಫಲವು ನಿನಗೆ ತೀವ್ರವೇ ದೊರೆಯದಿರಲಾರದು, ಎಂದು ಗಟ್ಟಿಯಾಗಿ-ಒದರಿ ಹೇಳಿದಳು.

ಬಳಿಕ ಭುಜಂಗರಾಯನು ಅವಳನ್ನು ಸಶಸ್ತ್ರ ಪೋಲೀಸರೊಂದಿಗೆ ಜೇಲಖಾನೆಗೆ ಕಳಿಸಿದನು. ಫಾಕ್ಸ ಹಾಗು ಜೊನ್ಸರನ್ನು ಕಬ್ಬಿಣಗಜಗಳ ಬೇರೆ ಬೇರೆ, ಆದರೆ ಒಂದಕ್ಕೊಂದು ಹೊಂದಿದ್ದ ಭದ್ರವಾದ ಕೋಣೆಗಳಲ್ಲಿ ಕೂಡಿ, ಬಾಗಿಲುಗಳಿಗೆ ಭದ್ರವಾದ ಕೀಲಿಗಳನ್ನು ಹಾಕಿದರು; ಹಾಗು ಅವರ ಕೋಣೆಯ ಎದುರಿಗೆ ಸತತವಾದ ಸಶಸ್ತ್ರ ಪಹರೆಯನ್ನಿಟ್ಟರು.

---

## ೧೨ ಚಲುವೆಯ ಚಾಪಲ್ಯ.



ಯಾವ ದಿವಸ ಡಾ. ಫಾಕ್ಸ ಹಾಗು ಜೋನ್ಸ ಇವರನ್ನು ಸೆರೆ ಹಿಡಿದರೋ, ಆ ರಾತ್ರಿಯ ೨ನೇ ಪ್ರಹರದಲ್ಲಿ ಆಕಾಶದಲ್ಲೆಲ್ಲ ಘನವಾದ ಮೋಡಗಳುದ್ಭವಿಸಿದವು. ಭೂಮಿಯಿಂದ ಆಕಾಶದವರೆಗೂ ಕಾರ್ಗತ್ತಲೆ. ಕಣ್ಣಲ್ಲಿ ಬೊಟ್ಟು ತಿವಿದರೂ ಕಾಣದು. ಗಾಳಿಯು ಕಟ್ಟಾದ್ದರಿಂದ ಉಸಿರಾಡಿಸಲಿಕ್ಕೆ ಕೂಡ ಆತಂಕ. ಎಲ್ಲ ಕಡೆಗೂ ನಿಶ್ಶಬ್ದ. ಇಂಥ ಭಯಂಕರವಾದ ರಾತ್ರಿಯಲ್ಲಿ ಕೈಕಾಲುಗಳಲ್ಲಿ ಬಲವಾದ ಬೇಡಿಗಳನ್ನು ಧರಿಸಿದ್ದ ಫಾಕ್ಸನು ತನ್ನ ಕೋಣೆಯಲ್ಲಿ ಗೇಣೆತ್ತರವಾದ ಧೂಳದಲ್ಲಿ ಬಿದ್ದುಕೊಂಡು ನಿಶ್ಚಿಂತ ಪುರುಷನಂತೆ ಘೊರ್ ಘೊರ್ ಎಂದು ಉಸಿರು ಬಿಡುತ್ತ ನಿದ್ರೆ ಮಾಡುತ್ತಿದ್ದನು. ಪಕ್ಕದ ಕೋಣೆಯಲ್ಲೇ ಜೊನ್ಸಳು ಒತ್ತಟ್ಟಿಗ ಸ್ವಸ್ಥವಾಗಿ ಕುಳಿತುಕೊಂಡಿದ್ದಳು. ಆ ಭೀಕರವಾದ ಸಮಯದಲ್ಲಿ ಆ ಸೆರೆಮನೆಯ ಉಳಿದ ಭಾಗಗಳಲ್ಲೆಲ್ಲಿಯೂ ದೀಪವಿರದಿದ್ದರೂ, ಈ ಫಾಕ್ಸ-ಜೊನ್ಸರ ಕೋಣೆಯ ಎದುರಿಗೆ ಒಂದು ಮಂದ ಪ್ರಕಾಶದ ಕಂದೀಲು

ಉರಿಯುತ್ತಿತ್ತು. ಒಬ್ಬ ಸಶಸ್ತ್ರ ಪಹರೆಯುವನು ಕ್ಷಣ ಸಹ ನಿಲ್ಲದೆ ಇತ್ತಿಂದ ಅತ್ತ ಅತ್ತಿಂದ ಇತ್ತ ಆ ಬೆಳಕಿನಲ್ಲಿ ತಿರುಗಾಡುತ್ತಿದ್ದನು. ಆ ದೀಪದ ಮಂದ ಪ್ರಕಾಶವು ಕಟಾಂಜನದೊಳಗಿಂದ ಹಾಯ್ದು ಜೊಸ್ನಳ ಮುಖದ ಮೇಲೆ ಬಿದ್ದಿತ್ತು. ಆಗ ಅವಳ ಆ ಮುಖದಲ್ಲಿ ಚಿಂತೆ, ಅಸಮಾಧಾನ, ವಿಷಣ್ಣತೆ ಮುಂತಾದ ಯಾವ ದುಶ್ಚಿಹ್ನಗಳೂ ತೋರುತ್ತಿರದೆ, ಒಂದಿಷ್ಟು ಪ್ರಫುಲ್ಲವಾಗಿಯೇ ಕಾಣುತ್ತಿತ್ತು. ಪಹರೆಯುವನು ಪ್ರತಿಸಾರೆ ಅಡ್ಡಾಡುವಾಗ ಆ ಕೋಣೆಯ ಬಾಗಿಲ ಬಳಿಗೆ ನಿಂತು, ಅವಳ ಮುಖದ ಕಡೆಗೆ ಒಂದು ಬಗೆಯ ಆಶಾಯುಕ್ತ ದೃಷ್ಟಿಯಿಂದ ನೋಡಿ ನೋಡಿ ಹೋಗುತ್ತಿದ್ದನು. ಅಂದಿನ ಆ ಚಂದ್ರಶೂನ್ಯ, ನಕ್ಷತ್ರಶೂನ್ಯ, ಪ್ರಕಾಶಶೂನ್ಯ, ಶಬ್ದಶೂನ್ಯ, ಮೇಘಯುಕ್ತ, ಅಂಧಕಾರಯುಕ್ತ, ಭೀಕರವಾದ ರಾತ್ರಿಯಲ್ಲಿ ಆ ಜೊಸ್ನಳ ಪ್ರಫುಲ್ಲ ಮುಖವು ಆ ಪಹರೆಯುವನಿಗೆ ಎಷ್ಟು ಸುಂದರವಾಗಿ ತೋರಿರಬಹುದೆಂಬದನ್ನು ವಾಚಕರೇ, ನೀವೇ ತರ್ಕಿಸಿಕೊಳ್ಳಿರಿ. ಬರ ಬರುತ್ತ ಆ ಸೌಂದರ್ಯಾವಲೋಕನದಿಂದ ಪಹರೆಯುವನ ಹೃದಯವು ತಲ್ಲಣಿಸಹತ್ತಿತು. ಆಗಾಗ್ಗೆ ಸುಮ್ಮನೆ ತನ್ನನ್ನು ನೋಡಿ ಹೋಗುತ್ತಿದ್ದ ಆ ಪಹರೆಯುವನ ಮುಖಚರ್ಯೆಯ ಮೇಲಿಂದ ಈ ಪತಂಗವು ತನ್ನ ರೂಪಜ್ಯೋತಿಗೆ ಆಹುತಿಯಾಗುವದೆಂದು ಗೊತ್ತಾಗಲು, ಪಹರೆಯುವನು ತನ್ನ ಮುಖದ ಕಡೆಗೆ ನೋಡುತ್ತಿರುವಾಗ, ಜೊಸ್ನಳು ಒಂದು ತೀಕ್ಷ್ಣ ಕಟಾಕ್ಷವನ್ನು ಅವನ ಮೇಲೆ ಎಸೆದಳು. ಆ ಬಾಣದಿಂದ ಆ ಬಡ ಪಹರೆಯುವನು ಸ್ತಂಭಿತನಾದನು; ಅವನು ಸಚೇತನನಿದ್ದರೂ ಅಚೇತನನಾದನು; ಅವನ ಆಪಾದ ಮಸ್ತಕದ ವರೆಗೂ ಒಂದು ಬಗೆಯ ವಿದ್ಯುತ್ ಪ್ರವಾಹವು ಸಂಚರಿಸಿದಂತಾಯ್ತು. ಕೈ-ಕಾಲು ನಡುಗಹತ್ತಿ, ಎದೆಯು ಧಡ ಧಡ ಎಂದು ಹಾರಲಾರಂಭಿಸಿ, ಕಣ್ಣೆದುರಿಗೆ ಏನೂ ಕಾಣದಾಯಿತು; ಕಿವಿಯಲ್ಲಿ ಭೊಂ ಭೊಂ ಎಂಬ ವಿಚಿತ್ರ ನಾದವಾಗಿ, ಮೈಮೇಲೆ ರೋಮಾಂಚಗಳು ಕೂಡ ಕಾಣಿಸಿಕೊಂಡವು. ಆಗ ಅವನು ಒಮ್ಮೆಲೆ ತನ್ನ ದೃಷ್ಟಿಯನ್ನು ಬೇರೆ ಕಡೆಗೆ ಹೊರಳಿಸಿ, ಅಲ್ಲಿಂದ ಲಗುಬಗೆಯಾಗಿ ನಡೆದನು; ಹಾಗು ಕ್ಷಣಹೊತ್ತು ನಿಂತು, ಒಂದು ದೀರ್ಘವಾದ ನಿಟ್ಟುಸಿರುಬಿಟ್ಟನು. ಆದರೂ ಅವನ ಹೃತ್ಕಂಪವು ಕಡಿಮೆಯಾಗಲಿಲ್ಲ. ಆ ಪಹರೆಯುವನು ತನಗೆ ಹೀಗೆ ಆಕಸ್ಮಿಕವಾಗಿ ಏನಾಯಿತೆಂಬದನ್ನು ತಿಳಿಯಲು ಸಮರ್ಥನಾಗದಿದ್ದರೂ,

ಚಲುವೆಯಾದ ಜೊನ್ಸಳು ಅದನ್ನು ಕೂಡಲೆ ತಿಳಕೊಂಡಳು. ಅದರಿಂದ ಆ ಪಹರೆಯುವನು ಮತ್ತೆ ಆ ಬಾಗಿಲ ಬಳಿಗೆ ಬರಲು, ಅವಳು ಅವನನ್ನು ಕುರಿತು ಒಳ್ಳೇ ಮೃದುಮಧುರ ವಾಣಿಯಿಂದ:—"ಶಿಪಾಯಿಮಾವಾ, ನನ್ನ ಸಲುವಾಗಿ ನಿನಗಿಂದು ಬಹು ಕಷ್ಟವಾಗುತ್ತದಲ್ಲವೆ?........" ಎನ್ನಲು,

ಪಹರೆಯುವನು ಅವಳನ್ನು ಮುಂದೆ ಮಾತಾಡಗೊಡದೆ:—ಇಲ್ಲರೀ-ಇಲ್ಲ; ನಾನು ನನ್ನ ಕರ್ತವ್ಯವನ್ನೇ ಮಾಡುತ್ತಿರುವೆನು.

ಜೊನ್ಸಳು ಮತ್ತೊಂದು ತೀಕ್ಷ್ಣಬಾಣವನ್ನು ಅವನ ಮೇಲೆ ಎಸೆದು:-ಶಿಪಾಯಿಮಾವಾ, ನೀನು ಏನೇ ಅನ್ನು; ಆದರೆ ಈ ನಿನ್ನ ಚಾಕರಿಯು ಮನುಷ್ಯಮಾತ್ರರಿಗೆ ತಕ್ಕದ್ದಲ್ಲ. ಈ ಮಧ್ಯರಾತ್ರಿಯಲ್ಲಿ ನಾಗರಹಾವಿನಂತೆ ಹೆಂಡತಿಯನ್ನೆದೆಗವಚಿಕೊಂಡು ಮಲಗುವ ಸುಖವೆತ್ತ? ಈ ಕಠಿಣ ಬಂದೂಕನ್ನು ಹೆಗಲಮೇಲಿಟ್ಟುಕೊಂಡು ಸ್ವಲ್ಪವೂ ವಿರಾಮವಿಲ್ಲದೆ ಇತ್ತಿಂದತ್ತ ತಿರುಗಾಡುವದೆತ್ತ?

ಪಹರೆ:—ಯಾರ ಉಪ್ಪನ್ನುಣ್ಣುವೆವೋ ನಾವು ಅವರ ಚಾಕರಿಯನ್ನು ಮಾಡದಿದ್ದರೆ ನಡೆದೀತೇ?

ಬಳಿಕ ಜೊನ್ಸಳು ಅವನೊಡನೆ ಹಲವು ಬಗೆಯ ಹರಟೆ ಕೊಚ್ಚಿದಳು; ಹಲವು ಸುಖದುಃಖ ಪ್ರಸಂಗಗಳ ಉದಾಹರಣೆ ಕೊಟ್ಟಳು; ಗಂಡಹೆಂಡಿರ, ಅಪಕ-ಮಾಪಕರ ವಿರಹವ್ಯಥೆಗಳನ್ನು ಚೆನ್ನಾಗಿ ವರ್ಣಿಸಿದಳು. ಹೀಗೆ ಅವಳು ಪಹರೆಯುವನ ವಿಷಯವಾಗಿ ಒಳ್ಳೇ ಸಹಾನುಭೂತಿಯನ್ನು ತೋರಿಸಿದಳು. ಅವಳ ವೀಣಾಮಂಜುಳವಾದ ಶಬ್ದಗಳು ಪಹರೆಯುವನ ಕಿವಿಗೆ ಒಳ್ಳೇ ಇಂಪಾಗಿ ಕೇಳಿಸಿದವು. ಆಗ ಅವಳು:—ಶಿಪಾಯಿಮಾವಾ, ನಿನ್ನ ಹೆಂಡತಿಯೆಲ್ಲಿರುವಳು? ಆಕೆಯು ದೇಶದಲ್ಲಿದ್ದರೆ, ನೀನು ಅಲ್ಲಿಗೆ ಹೋಗಿ ಬಂದು ಎಷ್ಟು ದಿನಗಳಾದವು? ಆಕೆಗೆ ಮಕ್ಕಳು-ಮರಿಗಳೇನಾದರೂ ಆಗಿವೆಯೊ? ಅವಳು ನಿನ್ನನ್ನಗಲಿ ಹೇಗೆ ಇರುವಳು? ನಾನೇ ನಿನ್ನ ಹೆಂಡತಿಯಾಗಿದ್ದರೆ, ಒಂದು ರಾತ್ರಿ ಕೂಡ ನಿನ್ನನ್ನಗಲಿ ಇರುತ್ತಿರಲಿಲ್ಲ, ಎಂದು ಅನ್ನಲು,

ಪಹರೆ:—ನೀವು ದೊಡ್ಡವರು-ಶ್ರೀಮಂತರು, ನೀವು ಏನನ್ನಾದರೂ ಮಾಡಬಲ್ಲಿರಿ. ನಿಮಗೆ ಹೊಟ್ಟೆ-ಬಟ್ಟೆಗಳ ಚಿಂತೆಯಿಲ್ಲ. ಹೊಟ್ಟೆಯು ನಮ್ಮಂಥ ಬಡವರ ಎದುರಿಗೆ ಯಾವಾಗಲೂ ಬಂದು ನಿಲ್ಲುತ್ತದೆ. ನನ್ನ

ಹೆಂಡತಿಯು ಇಲ್ಲಿಲ್ಲ. ನಮ್ಮ ದೇಶದಲ್ಲಿರುತ್ತಾಳೆ. ನಾನು ಮೂರು ವರ್ಷಗಳ ಹಿಂದೆ ಎರಡು ತಿಂಗಳ ರಜೆಪಡಕೊಂಡು ಹೋಗಿದ್ದೆನು. ನನ್ನ ಹೆಂಡತಿಗೆ ಎರಡು ಜನ ಗಂಡುಹುಡುಗರೂ ಆರುತಿಂಗಳ ವಯಸ್ಸಿನ ಒಂದು ಹೆಣ್ಣುಕೂಸೂ ಇರುತ್ತಾರೆ.

ಪಹರೆಯುವನ ಭಾಷಣವನ್ನು ಕೇಳಿ, ಜೊನ್ಸಳು: -ಶಿಪಾಯಿಮಾವಾ, ಮೂರು ವರ್ಷಗಳಿಂದ ನೀನು ಊರಿಗೆ ಹೋಗದಿರಲು,— ನಿನ್ನ ಹೆಂಡತಿಯೂ ಇಲ್ಲಿಗೆ ಬರದಿರಲು, ನಿನ್ನ ಹೆಂಡತಿಗೆ ಈಗ ಆರು ತಿಂಗಳಕೂಸು ಇರುವದೆನ್ನುವೆಯಲ್ಲ? ಎನ್ನಲು, ಆ ಪಹರೆಯುವನು ಒಳ್ಳೇ ಗಂಭೀರ ದನಿಯಿಂದ:—ನೀವು ಹೀಗೇಕನ್ನುವಿರಿ? ನಾನು ಪ್ರತಿತಿಂಗಳಿಗೆ ನಮ್ಮ ಮನೆಗೆ ಪತ್ರ ಕಳಿಸುತ್ತೇನೆ, ಅವರಿಂದಲೂ ನನಗೆ ನಿಯಮಿತವಾಗಿ ಪ್ರತ್ಯುತ್ತರಗಳು ಬರುತ್ತಿರುತ್ತವೆ. ಇದೇ ಕ್ರಮದಿಂದ ನನ್ನ ಹಿರೇ ಮಗನೂ ಹುಟ್ಟಿರುತ್ತಾನೆ.

''ಎಲೇ ಮೂರ್ಖ ಶಿಪಾಯಿಮಾವಾ, ಪತ್ರಗಳ ಬರಹೋಗುವದರಿಂದೆಲ್ಲಾದರೂ ಮಕ್ಕಳು ಹುಟ್ಟುತ್ತವೆಯೋ?''

''ನಮ್ಮ ದೇಶದಲ್ಲಿ ಪತ್ರಗಳಿಂದಾಗದ ಕೆಲಸಗಳೇ ಇಲ್ಲ.''

ಇದನ್ನು ಕೇಳಿ ಜೊನ್ಸಳು ಬಿದ್ದು ಬಿದ್ದು ನಕ್ಕಳು.

ಆಗ ಆ ಪಹರೆಯುವನು:—ಇಲ್ಲರೀ, ನನ್ನ ಹೆಂಡತಿಯು ನನ್ನನ್ನು ಬಹಳ ಪ್ರೀತಿಸುವಳು.

ಜೊನ್ಸ:—ನಿನ್ನ ಹೆಂಡತಿಯು ನನಗಿಂತಲೂ ಸುಂದರಿಯಿರುವಳೇ? ಶಿಪಾಯಿಮಾವಾ, ಇಲ್ಲಿ ನೀನು ಹೆಗಲ ಮೇಲೆ ಬಂದೂಕನ್ನಿಟ್ಟುಕೊಂಡು ಈ ಮಧ್ಯರಾತ್ರಿಯಲ್ಲಿ ಕೈದಿಗಳ ಪಹರೆ ಮಾಡುತ್ತಿರುವೆಯಷ್ಟೇ? ಆದರೆ ಅಲ್ಲಿ ನಿಮ್ಮ ಮನೆಯಲ್ಲಿ ನಿನ್ನ ಹೆಂಡತಿಯ ಪಹರೆ ಮಾಡುವವರಾರು? ಆಕೆಯನ್ನಾರಾದರೂ ಸುಲಿದರೆ?

ಪಹರೆಯುವನ ಮುಖವು ಇಷ್ಟಗಲವಾಯಿತು. ಆವನು ಒಳ್ಳೇ ಖುಷಿಯಿಂದ:—ಛೇ, ಛೇ, ರತ್ನದ ಮುಂದೆ ಸೀಸದ ಬೆಳಕೇ? ಬೆಲೆಯುಳ್ಳ ರತ್ನವನ್ನು ಬಿಟ್ಟು ಸೀಸವನ್ನು ಸುಲಿಯುವವರಾರು?

ಜೊನ್ಸ:—ಹಾಗಾದರೆ ನಾನೊಳ್ಳೇ ಸುಂದರ ರತ್ನವೇನು? ನಿನ್ನ ಮನಸ್ಸಿಗೆ ತಕ್ಕವಳಾಗಿರುವೆನೇನು? ಶಿಪಾಯಿಮಾವಾ, ನಿನ್ನರೂಪ, ಸೌಂದರ್ಯ,

ಎದೆಕಟ್ಟು ಇವೆಲ್ಲವನ್ನು ನೋಡಿ ನನ್ನ ಮನಸ್ಸು ಬಹಳ ಚಂಚಲವಾಗಿದೆ. ದೇವರು ಮಹಾ ನೀಚನು. ನನ್ನನ್ನು ನಿನ್ನಂಥ ಸುಂದರ ತರುಣನಿಗೆ ಒಪ್ಪಿಸದೆ, ಈ ನೀಚ (ಅತ್ತ ಮಲಗಿದ್ದ ಘಾಕ್ಸನ ಕಡೆಗೆ ಬೊಟ್ಟು ಮಾಡಿ ತೋರಿಸಿ) ಅರಸಿಕ ಕೊಲೆಗಡಕನ ಕೊರಳಿಗೆ ಕಟ್ಟಿರುವನು. ಮಾವಾ, ನೀನು ಹೇಗಾದರೂ ಮಾಡಿ ನನ್ನನ್ನು ನಿನ್ನ ಚರಣದಾಸಿಯನ್ನಾಗಮಾಡಿಕೊಂಡರೆ, ಉಭಯತರ ಜೀವನವೂ ಸುಖಮಯವಾಗಲಿಕ್ಕಿಲ್ಲವೆ? ಎಂದಂದು ಮತ್ತೊಂದು ಅತಿತೀಕ್ಷ್ಣ ಕಟಾಕ್ಷವನ್ನು ಅವನ ಮೇಲೆ ಬೀರಿದಳು.

"ಛೇ, ಛೇ, ನೀವು ನನ್ನ ಕೂಡೇಕೆ ಬಂದೀರಿ? ಬಂದರೆ ನಿಮ್ಮನ್ನು ನಾನು ಅಂಗೈಮೇಲಿನ ಗುಳ್ಳಿಯಂತೆ ಸಲಹುವೆನು."

"ನಾನಂತೂ ನಿನ್ನನ್ನು ಆಗಲೆ ಮನಸ್ಸಿನಿಂದ ವರಿಸಿಬಿಟ್ಟಿರುವೆನು. ನೀನು ಹೇಗಾದರೂ ಮಾಡಿ ಈ ಬಾಗಿಲು ತೆರೆದು ಬಂದರೆ, ನಾನೂ ನೀನೂ ಒಂದೆರಡು ಘಂಟೆಗಳವರೆಗೆ ಸುಖಸಲ್ಲಾಪಾಸಕ್ತರಾಗೋಣ; ಇಲ್ಲವೆ ನನ್ನನ್ನೇ ಹೊರಗೆ ಕರೆದುಕೋ. ನಾನಿಲ್ಲಿರುವವರೆಗೂ ದಿನಾಲು ರಾತ್ರಿ ಈ ನನ್ನ ಪಿಶಾಚಿ ಗಂಡನು ಮಲಗಿದಾಗ ನಾನೂ ನೀನೂ ಕೆಲವು ತಾಸುಗಳನ್ನು ಸುಖಾನಂದದಲ್ಲಿ ಕಳೆಯೋಣ."

ಜೊನ್ಸಳ ಈ ನುಡಿಯಿಂದ ಆ ಪಹರೆಯವನು ಹಣ್ಣಾದನು. ಅವನ ಬಾಯಿಗೆ ನೀರೊಡೆಯಿತು. ಕೂಡಲೆ ಅವನು:—ನನ್ನ ಹತ್ತಿರ ಒಂದು ಹಳೇ ಕೀಲಿ ಕೈ ಅದೆ. ಅದು ಈ ತುರಂಗದೊಳಗಿನ ಪ್ರತಿಯೊಂದು ಕೀಲಿಗೂ, ಬೇಡಿಗೂ ನಡೆಯುತ್ತದೆ, ಎಂದಂದು, ಅದರಿಂದ ಜೊನ್ಸಳ ಕೋಣೆಯ ಬಾಗಿಲದ ಕೀಲಿ ತೆಗೆದನು; ಕ್ಷಣಾರ್ಧದಲ್ಲಿ ಜೊನ್ಸಳ ಕೈ ಹಾಗು ಕಾಲುಗಳ ಬೇಡಿಗಳನ್ನೂ ತೆಗೆದಿಟ್ಟನು.

ಆ ಕೂಡಲೆ ಜೊನ್ಸಳು ಒಳ್ಳೇ ಪ್ರೇಮಭರದಿಂದ ಆ ಪಹರೆಯವನ ಎರಡೂ ಕೈಗಳನ್ನು ತನ್ನ ಕೈಯಿಂದ ಒತ್ತಿಹಿಡಿದು, ಅವನಿಗೆ ಗಾಢಾಲಿಂಗನ ಕೊಡುತ್ತ ಅವನ ಮುಖಕ್ಕೆ ಮುಖಹಚ್ಚಿ ಚುಂಬಿಸಿದಳು. ಕ್ಷಣಕಾಲ ಅವರ ಆ ಪ್ರೇಮಸಮ್ಮಿಲನವು ನಡೆದಿರಲು, ಆ ಶಿಪಾಯಿಯು ಒಮ್ಮೆಲೆ ನೆಲಕ್ಕೆ ಬಿದ್ದು ಕೈಕಾಲುಗಳನ್ನು ಚಟಪಟ ಬಡಿದು, ಚೇತನಾವಿಹೀನನಾದನು. ಬಳಿಕ ಜೊನ್ಸಳು ಅಪ್ಪಿಕೊಳ್ಳುವಾಗ ಅವನ ಬೆನ್ನಿನಲ್ಲಿ ಚುಚ್ಚಿದ್ದ ಒಂದು

ತೀಕ್ಷ್ಣವಿಷಾಕ್ತ ಸೂಜಿಯನ್ನು ಹಿರಿದುಕೊಂಡು ತನ್ನ ಹೆಳಲಿನಲ್ಲಿ ಚುಚ್ಚಿಕೊಂಡಳು.

ಪಹರೆಯುವನು ಸತ್ತುಬೀಳಲು, ಈ ವರೆಗೆ ನಿದ್ರೆಯ ಸೋಗಿನಿಂದ ಬಿದ್ದುಕೊಂಡಿದ್ದ ಫಾಕ್ಸನು ಎದ್ದು ಕುಳಿತು ಜೊನ್ಸಳನ್ನು ಕುರಿತು:—"ಕೆಲಸವಾಯಿತೆ?" ಎನ್ನಲು, ಜೊನ್ಸಳು ಪಹರೆಯುವನ ಜೇಬಿನೊಳಗಿನ ಆ ಕೀಲಿಯ ಕೈಯಿಂದ ಫಾಕ್ಸನ ಕೋಣೆಯ ಕೀಲಿಯನ್ನೂ, ಅವನ ಕೈ ಕಾಲುಗಳ ಬೇಡಿಗಳನ್ನೂ ನಿರಾಯಾಸವಾಗಿ ತೆಗೆದು:—ಇಗೋ, ಈಗ ಕೆಲಸವಾದಂತಾಯಿತು, ಎಂದು ಉತ್ತರವಿತ್ತಳು.

ಫಾಕ್ಸ:—ನಿನ್ನಲ್ಲಿ ಇಂಥ ಸಾಹಸವಿರುವದೆಂತಲೇ ನಾನು ನಿನ್ನನ್ನಿಷ್ಟು ಪ್ರೀತಿಸುವದು. ಅದಿರಲಿ; ನಾವು ಇಲ್ಲಿ ಮಾಡತಕ್ಕ ಕೆಲಸಗಳನೇಕಿರುವವು. ನಡೆ ಹೋಗೋಣ, ಎಂದಂದು, ಜೊನ್ಸಳ ಕೈಹಿಡಿದು ಆ ಜೇಲಖಾನೆಯ ಪ್ರಶಸ್ತವಾದ ಅಂಗಳಕ್ಕೆ ನಡೆದನು. ಅವರೀರ್ವರೂ ಆ ಘನವಾದ ಅಂಧಃಕಾರದಲ್ಲಿ ಕೆಲ ಹೆಜ್ಜೆಗಳನ್ನು ಸಾಗಿಹೋದಬಳಿಕ ಫಾಕ್ಸನು ಜೊನ್ಸಳನ್ನು ತಡೆದು ನಿಲ್ಲಿಸಿ,—ನಾನು ಈಗ ತಿರುಗಿ ಬರುವೆನು. ನೀನು ಇಲ್ಲಿಯೇ ನಿಲ್ಲು, ಎಂದಂದು, ಭರದಿಂದ ಪುನಃ ತನ್ನ ಕೋಣೆಯ ಬಳಿಗೆ ಹೋಗಿ, ಅಲ್ಲಿ ಸತ್ತುಬಿದ್ದಿದ್ದ ಪಹರೆಯುವನ ಬಂದೂಕನ್ನೂ, ಬಾಕನ್ನೂ ತಕ್ಕೊಂಡನಲ್ಲದೆ, ಸಮೀಪದ ಶಸ್ತ್ರಾಗಾರದ ಬಾಗಿಲ ತೆರೆದು, ಅಲ್ಲಿಯ ಮತ್ತೊಂದು ಬಂದೂಕನ್ನೂ, ಕೆಲವು ಕಾಡತೂಸುಗಳನ್ನೂ ತಕ್ಕೊಂಡನು. ಬಳಿಕ ಅವನು ತನ್ನನ್ನು ಸೆರೆಯಿಟ್ಟಿದ್ದ ಕೋಣೆಯೊಳಗೆ ಹೊಕ್ಕು ಆ ಬಾಕಿನ ತುದಿಯಿಂದ ಗೋಡೆಯ ಮೇಲೆ,

"ಪಂತನೇ, ಸಾವಧನಾಗಿರು; ಇನ್ನೊಂದೇ ವಾರದಲ್ಲಿ ನಾನು ನಿನ್ನನ್ನು ಕೊಲ್ಲದಿದ್ದರೆ ನನ್ನ ಹೆಸರು ಫಾಕ್ಸನಲ್ಲ.

ನಿನ್ನ ಚಿರಶತ್ರು, ಫಾಕ್ಸ"

ಎಂಬ ಅಕ್ಷರಗಳನ್ನು ಕೊರೆದು, ಮತ್ತೆ ಜೊನ್ಸಳ ಬಳಿಗೆ ಹೋದನು. ಅವರೀರ್ವರೂ ಆ ಘನವಾದ ಅಂಧಃಕಾರದಲ್ಲಿ ತಮ್ಮ ಕ್ರೂರ ಕರ್ಮಗಳಿಂದ ಮತ್ತಿಷ್ಟು ಕಪ್ಪಾಗಿ ಬೆರೆತು ಪೂರ್ವದಿಕ್ಕಿನ ಕಡೆಗೆ ನಡೆದರು.

---

## ೧೩ ಪಲಾಯನ.

ಹೀಗೆ ಅವರು ಆ ಪಹರೆಯುವನನ್ನು ಕೊಂದು, ಆ ಜೇಲಿನ ಪೂರ್ವ ದಿಕ್ಕಿನ ಗೋಡೆಯ ಕಡೆಗೆ ನಡೆದಿರಲು, ಮಳೆಯು ಬೀಳಹತ್ತಿತು. ಆಕಾಶದಲ್ಲೆಲ್ಲ ಕಾರ್ಮೋಡ. ಗಾಳಿಯ ಸುಳುವು ಕೂಡ ಇಲ್ಲ. ಇಂಥ ಸ್ಥಿತಿಯಲ್ಲಿ ಬಹು ದೊಡ್ಡ ಮಳೆಯು ಏಕೋಪ್ರಕಾರವಾಗಿ ಬೀಳಲಾರಂಭಿಸಿತು. ಆ ಜೇಲಿನ ಸುತ್ತಲೂ ನಾಲ್ಕೈದು ಆಳು ಎತ್ತರದ ಭವ್ಯವಾದ ಗಚ್ಚಿನ ಗೋಡೆಗಳಿದ್ದವು. ಆ ಜೇಲಿನ ಉತ್ತರದಿಕ್ಕಿಗೆ ಬಾಗಿಲವಿತ್ತು. ಬಾಗಿಲ ಬಳಿಯಲ್ಲಿ ನಾಲ್ಕು ಜನ ಸಶಸ್ತ್ರ ಶಿಪಾಯರ ಸತತ ಪಹರೆಯಿದ್ದು, ಆ ಸುತ್ತಲಿನ ಗೋಡೆಯ ಮೇಲೂ ಆಗಾಗ್ಗೆ ತಿರುಗಾಡುತ್ತಿರುವ ಕೆಲ ಜನ ಸಶಸ್ತ್ರ ಪಹರೆಯುವರು ತಮ್ಮ ಕರ್ತವ್ಯವನ್ನು ಎಡೆಬಿಡದೆ ನಡಿಸಿದ್ದರು. ಆಗ ಅಂಥ ಕಾರ್ಮೋಡಗಳು ಕವಿದು, ದೊಡ್ಡಮಳೆ ಬೀಳುತ್ತಿದ್ದರೂ ಆ ಜನರು ತಮ್ಮ ಕರ್ತವ್ಯವನ್ನು ಪಾಲಿಸುತ್ತಲೇ ಇದ್ದರು. ಅದರಿಂದ ಫಾಕ್ಸಾದಿಗಳು ಉತ್ತರದಿಕ್ಕಿನ ಬಾಗಿಲಕಡೆಗೆ ತೆರಳದೆ, ಪೂರ್ವ ದಿಕ್ಕಿನ ಗೋಡೆಯ ಕಡೆಗೆ ನಡೆದಿದ್ದರು

ಜೇಲಿನ ಪೂರ್ವದಿಕ್ಕಿನ ಗೋಡೆಯ ಬಳಿಗೆ ಒಂದು ವಿಸ್ತೃತವಾದ ಬಹು ಪುರಾತನದ ಆಲದಮರವಿದ್ದಿತು. ಫಾಕ್ಸ-ಜೊನ್ಸರು ಆ ಆಲದಮರದ ಬಳಿಗೆ ತಲುಪಿದರು. ಅಷ್ಟರಲ್ಲಿ ಆ ಮರದ ಹತ್ತರ ಗೋಡೆಯ ಮೇಲಿಂದ ಹಾಯ್ದು ಹೋಗುತ್ತಿದ್ದ ಪಹರೆಯುವನು ಮುಂದೆ ನಡೆದಿದ್ದ ತನ್ನ ಸಂಗಡಿಗನನ್ನು ಕುರಿತು ಉಚ್ಚಸ್ವರದಿಂದ:—"ಹೋ-ಹೋ-ಹೋ" ಎಂದು ಒದರಿದನು. ಅವನೂ ದೂರಿನಿಂದ ಅದೇ ಶಬ್ದವನ್ನು ಪ್ರತಿಯಾಗಿ ಉಚ್ಚರಿಸಿದನು. ಜೇಲಿನೊಳಗಿನ ಎಲ್ಲ ಕೈದಿಗಳನ್ನು ನೈವುಯುರೆ ದುಡಿಸುತ್ತಿದ್ದದರಿಂದ ಅವರೆಲ್ಲರೂ ರಾತ್ರಿಯಲ್ಲಿ ಗಾಢವಾಗಿ ಮಲಗಿಕೊಂಡು ಬಿಡುತ್ತಿರಲು, ಜೇಲಖಾನೆಯ ಸುತ್ತಲಿನ ಅಷ್ಟು ಎತ್ತರವಾದ ಗೋಡೆಯ ಮೇಲೇಕೆ ಪಹರೆಯನ್ನಿಟ್ಟಿದ್ದರೆಂದು ವಾಚಕರು ಪ್ರಶ್ನ ಮಾಡಬಹುದು. ಅದಕ್ಕೆ ಉತ್ತರವಿಷ್ಟೇ, ಕೈದಿಗಳು ನಿದ್ರೆಮಾಡಲಿ-ಎಚ್ಚತ್ತಿರಲಿ; ಶಿಕ್ಷೆಯನ್ನನುಭವಿಸುವ ಮನಸ್ಸಿರಲಿ-ಇರದಿರಲಿ; ಶಿಕ್ಷೆಯ ಅವಧಿಯ ವರೆಗೆ ಒಣಲುಸಾಬರಿಗೆ ಹೋಗದಿರಲಿ-ಓಡಿಹೋಗುವ ಉಪಟಳಕ್ಕೆ ಪ್ರವೃತ್ತರಾಗಲಿ ಹೇಗಿದ್ದರೂ

ಸರಕಾರದವರು ನೇಮಿಸಿದ ಪಹರೆಯು ತನ್ನ ಕೆಲಸನ್ನು ಪಹರೆಯುವನು ಮಾಡಲೇ ಬೇಕಲ್ಲವೆ? ದಿನದ ಪಹರೆಯಲ್ಲಿ ಅಷ್ಟು ಜಾಗರೂಕತೆಯನ್ನು ವಹಿಸದಿದ್ದರೂ ಅಭ್ಯಂತರವಿರಲಿಲ್ಲ; ಆದರೆ ಇಂದು ಫಾಕ್ಸ-ಜೊನ್ಸರಂಥ ನಾಮಾಂಕಿತ ನೀಚರನ್ನು ಜೇಲಿನಲ್ಲಿ ತಂದು ಹಾಕಿದ್ದರಿಂದ, ಈ ದಿನದ ಪಹರೆಯು ಬಗ್ಗೆ ಹೆಚ್ಚು ತತ್ಪರರಾಗಿರತಕ್ಕದ್ದೆಂದು ಪಂತ-ಭುಜಂಗರಾಯರಿಂದ ಉದ್ದಿಶ್ಯಪೂರ್ವಕವಾಗಿ ಪಹರೆಯುವರು ಆಜ್ಞಾಪಿಸಲ್ಪಟ್ಟಿದ್ದರು. ಅಂತೇ ಅವರು ಅಂದಿನ ಆ ಭೀಷಣವಾದ ಕತ್ತಲು-ಮಳೆಗಳಲ್ಲಿ ತಮ್ಮ ಕರ್ತವ್ಯವನ್ನು ಸತತವಾಗಿ ನಡಿಸಿದ್ದರು ಅಷ್ಟರಲ್ಲಿ ಉತ್ತರದಿಕ್ಕಿನ ಪಹರೆಯುವನು ರಾತ್ರಿಯ ಒಂದು ಗಂಟೆಯನ್ನು ಬಾರಿಸಿದನು. ಅದನ್ನು ಕೇಳಿ ಫಾಕ್ಸನು ಮುಗುಳುನಗೆಯಿಂದ ಜೊನ್ಸಳ ಕಡೆಗೆ ನೋಡಿದನು. ಅವನ ಆ ನಗೆಯು ಉದ್ದೇಶವಿಷ್ಟೇ, ತಮ್ಮ ಮುಂದಿನ ಕೆಲಸಕ್ಕೆ ಇನ್ನೂ ಬೇಕಾದಷ್ಟು ಸಮಯವಿದೆಯೆಂದು. ಬಳಿಕ ಅವನು ಜೊನ್ಸಳನ್ನು ಕುರಿತು:— ಪ್ರಿಯೇ, ನಾವು ತಕ್ಕ ಸಮಯಕ್ಕೆ ಇಲ್ಲಿಗೆ ಬಂದೆವು ಈ ಪ್ರಸಂಗದಲ್ಲಿ ನಮ್ಮ ಗೋಪೀಚಂದನು ತನ್ನ ಕರ್ತವ್ಯವನ್ನು ಯಥಾಪ್ರಕಾರವಾಗಿ ಮಾಡಿದರೆ, ನಾವು ಕ್ಷಿಪ್ರದಲ್ಲಿಯೇ ಇಲ್ಲಿಂದ ಪಾರಾಗಿ ಹೋಗುವೆವು, ಎಂದು ಮೆಲ್ಲಗೆ ನುಡಿದು, ಆ ಆಲದ ಮರದ ಹತ್ತರದ ಗೋಡೆಗೆ ಕಿವಿಹಚ್ಚಿ ನಿಂತನು. ಅಷ್ಟರಲ್ಲಿ ಗೋಡೆಯ ಮೇಲಿನ ಪಹರೆಯುವನೂ ಬಹುದೂರ ನಡೆದು ಹೋಗಿದ್ದನು. ಫಾಕ್ಸನು ಗೋಡೆಗೆ ಕಿವಿಯಾನಿಸಿ ನಿಂತ ಕೆಲವು ಕ್ಷಣಗಳಲ್ಲೇ ಅದಕ್ಕೆ ಆಚೇಬದಿಯಿಂದ ಬಡಿದು ಬಡಿದು ಸಪ್ಪಳ ಮಾಡುವಂತೆ ಕೇಳಿಸಿತು. ಆ ಸಪ್ಪಳವನ್ನು ಕೇಳಿ ಫಾಕ್ಸನು ಹರ್ಷಪ್ರಫುಲ್ಲನಾದನು. ಬಳಿಕ ಫಾಕ್ಸನೂ ಗೋಡೆಯನ್ನು ಬಡಿದನು; ಅತ್ತಣಿಂದ ಪುನಃ ಗೋಡೆ ಬಡಿದ ಸಪ್ಪಳವಾಯಿತು. ಆಗ ಫಾಕ್ಸನು ಜೊನ್ಸಳಿಗೆ:—ನಮ್ಮ ಗೋಪೀಚಂದನು ಇಮಾನವಂತನು. ಅಂತೇ ಅವನು ಇಂಥ ಭೀಕರವಾದ ರಾತ್ರಿಯಲ್ಲಿ ಕೂಡ ಕರ್ತವ್ಯಪರಾಙ್ಮುಖನಾಗಿಲ್ಲ, ಎನ್ನಲು,

ಜೊನ್ಸ:—ಗೋಪೀಚಂದನು ಈಗ ಏನು ಮಾಡುವನು? ಈ ಗೋಡೆಗೆ ಕನ್ನತೋಡಿ ನಮ್ಮನ್ನು ಆಚೆಗೆ ಕರೆದೊಯ್ಯುವನೋ? ಇದಂತೂ ಬಹು ಅಗಲಾದ ಗಚ್ಚಿನ ಗೋಡೆಯು. ಅದರಿಂದ ಅವನು ನಮ್ಮನ್ನು ಯಾವ ಬಗೆಯಾಗಿ ದಾಟಿಸುವನೋ ತಿಳಿಯದು.

ಫಾಕ್ಸ:—ನಾನು ಅವನಿಗೆ ಮೊದಲೇ ತಿಳಿಸಿಟ್ಟಿರುವದೇನಂದರೆ:— ಪ್ರಸಂಗವಶಾತ್ ನಾನು ಈ ತುರಂಗದಲ್ಲಿ ಬಿದ್ದರೆ, ನೀನು ಅಂದೇ ಮಧ್ಯ ರಾತ್ರಿಯ ನಂತರ ಪೂರ್ವ ದಿಕ್ಕಿನ ಈ ಆಲದ ಮರದ ಹೊರಬದಿಯ ಗೋಡೆಯ ಹತ್ತರ ಬಂದು, ಗೋಡೆ ಬಡಿದು ಸಪ್ಪಳ ಮಾಡು; ನನ್ನ ಪ್ರತಿ ಶಬ್ದವು ಕೇಳಿದ ಕೂಡಲೆ ಒಂದು ಉದ್ದನ್ನ ಹಗ್ಗದ ತುದಿಯನ್ನು ಇತ್ತ ಕಡೆಗೆ ಒಗೆ; ಅಂದರೆ ನಾನು ಅದನ್ನು ಹಿಡಿದು ಗೋಡೆಯನ್ನೇರಿ ಪಾರಾಗುವೆನು, ಎಂದು. ಆ ಪ್ರಕಾರ ಗೋಪೀಚಂದನು ಈಗ ಹೊರಬದಿಗೆ ಬಂದಿರುತ್ತಾನೆ. ಇಷ್ಟರಲ್ಲಿ ಅವನಿಂದ ಹಗ್ಗವೂ ಒಗೆಯಲ್ಪಡುವದು, ಎಂದು ನುಡಿಯುತ್ತಿರಲು, ಗೋಡೆಯ ಮೇಲಿಂದ ಒಂದು ದಪ್ಪನ್ನ ನೂಲಿನಹಗ್ಗದ ತುದಿಯು ಭರ್ರೆಂದು ಬಂದು, ಕೆಳಗೆ ಬಿದ್ದಿತು.

ಕೂಡಲೆ ಫಾಕ್ಸನು ಕಸುವಿನಿಂದ ಅದನ್ನು ೨-೩ ಸಾರೆ ಜಗ್ಗಿ ನೋಡಿದನು. ಅದು ಆಚೇ ಬದಿಗೆ ಗಟ್ಟಿಯಾಗಿ ಕಟ್ಟಿದೆಯೆಂಬದು ಖಾತ್ರಿಯಾಗಲು, ಅವನು ಆ ತುದಿಯನ್ನು ಆ ಆಲದಮರದ ಒಂದು ಬಲವಾದ ಬೇರಿಗೆ ಚನ್ನಾಗಿ ಕಟ್ಟಿದನು. ಬಳಿಕ ಅವನು ಜೊನ್ಸಳ ಸೀರೆಯ ಸೆರಗನ್ನು ತನ್ನ ಟೊಂಕಕ್ಕೆ ಕಟ್ಟಿಕೊಂಡು, ಬಾಯಲ್ಲಿ ಒಂದು ಬಂದೂಕ ಹಾಗು ಬಾಕನ್ನು ಹಿಡಿದನು; ಜೊನ್ಸಳಿಗೂ ಒಂದು ಬಂದೂಕನ್ನು ಬಾಯಿಯಲ್ಲಿ ಹಿಡಿಯಲಿಕ್ಕೆ ಹೇಳಿ, ಆ ಹಗ್ಗ ಹಿಡಿದು ಸರಸರನೆ ಏರಹತ್ತಿದನು. ಮೊದಲೇ ನೂಲಿನ ಹಗ್ಗ, ಮೇಲಾಗಿ ಮಳೆಯಿಂದ ಹೆಚ್ಚಾಗಿ ತೊಯ್ದಿತ್ತು; ಅಲ್ಲದೆ ಫಾಕ್ಸನು ಹೆಚ್ಚು-ಕಡಿಮೆಯಾಗಿ ಜೊನ್ಸಳ ದೇಹಭಾರವನ್ನೂ ಹೊರಬೇಕಾಗಿತ್ತು. ಇಂಥ ಪ್ರಸಂಗದಲ್ಲಿ ಆ ಹಗ್ಗವು ಅವನ ಕೈಯಿಂದ ಜಾರುತ್ತಿತ್ತೆಂದು ಹೇಳಬೇಕೇಕೆ? ಆದರೂ ಆ ದಾನವ ಸದೃಶ ಶಕ್ತಿಸಂಪನ್ನನು ಹಿಂದೇಸವನೆ ಮೇಲಕ್ಕೇರುತ್ತಲೇ ಇದ್ದನು. ಅವನಿಗೆ ಆ ಎತ್ತರವಾದ ಗೋಡೆಯ ತುದಿಯು ಸಿಗಲಿಕ್ಕೆ ಇನ್ನು ಮೂರೇ ಮೊಳದ ಅಂತರವುಳಿದಿತ್ತು. ಅಷ್ಟರಲ್ಲಿ ಈ ಮೊದಲಿನ ಪಹರೆಯವನು "ಹೋ ಹೋ ಹೋ" ಎಂದು ಧ್ವನಿಗೊಡುತ್ತ ಇವರು ಏರುತ್ತಿದ್ದ ಗೋಡೆಯಹತ್ತರವೇ ಬಂದನು.

ಆಗ ಫಾಕ್ಸನು ಹತವೀರ್ಯನಾದನು; ಕೈಗಳು ಭಗ ಭಗ ಉರಿಯ ಹತ್ತಿದವು; ಭಯಂಕರವಾದ ಮಳೆಯ ಹೊಡತದಿಂದ ಅವನ ಬಟ್ಟೆಬರೆಗಳೆಲ್ಲ ತೊಯ್ದು ತೊಪ್ಪಡಿಯಾದ್ದರಿಂದ ಅವನಿಗೆ ಈ ಮೊದಲೇ ನಡುಗು

ಹುಟ್ಟಿತ್ತು; ಆದರೆ ಈಗಿನ ವಿಶೇಷ ಶ್ರಮದಿಂದ ಅವನ ಶರೀರಕ್ಕೆಲ್ಲ ಬೆವರೊಡೆಯಿತು; ಇನ್ನು ತಮ್ಮ ಪ್ರಯತ್ನಗಳೆಲ್ಲ ಮಣ್ಣುಗೂಡಿದಂತಾದವೆಂದು ಅವನು ಬಾಯಿ ಬಾಯಿ ಬಿಡಹತ್ತಿದನು; ಆ ಶಿಪಾಯಿಗೆ ಗೋಡೆಯ ಮೇಲಿನ ನಮ್ಮ ಹಗ್ಗವು ಕಂಡರೆ, ಇಲ್ಲವೆ ಅವನು ಅದನ್ನು ಎಡವಿದರೆ ನಮ್ಮ ಕೆಲಸ ಮುಗಿಯಿತೆಂದು ಹತಾಶನಾದನು; ಆದರೆ ಆ ಸ್ಥಿತಿಯಲ್ಲಿ ಒಂದು ಕ್ಷಣಕ್ಕಿಂತ ಹೆಚ್ಚು ವೇಳೆಯನ್ನು ಅವನು ಕಳೆಯಲಿಲ್ಲ. ಎಂದಿನಂತೆ ಆ ಸಂಕಟ ಸಮಯದಲ್ಲಿ ಅವನು ದ್ವಿಗುಣಿತ-ಚತುರ್ಗುಣಿತ ಬಲವಂತನಾದನು; ಹಾಗು ಗೋಡೆಯ ತುದಿಯವರೆಗಿನ ಮೂರು ಮೊಳದ ಹಗ್ಗವನ್ನು ಬಹು ತೀವ್ರವಾಗಿ ಏರಿ ಹೋಗಿ, ಗೋಡೆಯನ್ನು ಹತ್ತದೆ, ಒಂದೇ ಕೈಯಿಂದ ಹಗ್ಗವನ್ನು ಹಿಡಿದು, ತನ್ನ ಹಾಗು ಜೊನ್ಸಳ ದೇಹ ಭಾರವನ್ನು ವಹಿಸಿ, ಇನ್ನೊಂದು ಕೈಯಲ್ಲಿ ಬಾಯೊಳಗಿನ ಬಾಕನ್ನು ಸಜ್ಜಾಗಿ ಹಿಡಿದು ನಿಂತನು. ಇಷ್ಟರಲ್ಲಿ ಆ ಪಹರೆಯವನು ಅಲ್ಲಿಗೇ ಬಂದನು. ಅವನಿಗೆ ಆ ನೂಲಿನ ಹಗ್ಗವು ಆ ಘನವಾದ ಅಂಧಕಾರದಲ್ಲಿ ಕಾಣಿಸದಿದ್ದರೂ, ಅವನು ಅದನ್ನು ಎಡವಿದನು. ಕೂಡಲೆ ಅವನಿಗೆ ಸಂಶಯವುಂಟಾಗಲು, ಅವನು ನೆಲಕ್ಕೆ ಕುಳಿತು ಹಗ್ಗದ ಮೇಲೆ ಕೈಯಾಡಿಸಹತ್ತಿ, ಹಿಂದಿನಿಂದ ಬರುತ್ತಿದ್ದ ತನ್ನ ಜೊತೆಗಾರನಿಗೆ ಇನ್ನು ಏನೋ ಹೇಳತಕ್ಕವನು; ಅಷ್ಟರಲ್ಲಿ ಫಾಕ್ಸನು ತನ್ನ ಕೈಯೊಳಗಿನ ಬಾಕಿನಿಂದ ಅವನ ಎದೆಗೆ ಬಲವಾಗಿ ತಿವಿದನು. ಅದು ಅವನ ಹೃದಯದಲ್ಲಿ ನಟ್ಟು ಬೆನ್ನಲ್ಲಿ ಪಾರಾಯಿತು. ಆಗ ಆ ಕಾವಲುಗಾರನು ಗಟ್ಟಿಯಾಗಿ ಚೀರಹೋದನು. ಅವನಿಗೆ ಅವಸಾನವು ಸಾಲದಾಯಿತು. ಅದರಿಂದ "ಅಯ್ಯೋ-ಸತ್ತೆನು" ಎಂಬ ಶಬ್ದಗಳು ಮೆಲ್ಲಗೆ ಅವನ ಬಾಯಿಂದ ಹೊರಟವು. ಅದೇ ಕಾಲಕ್ಕೆ ಧರ್ಮಾಧರ್ಮ ಸಂಯೋಗದಿಂದ ಆಕಾಶದಲ್ಲಿ ಗಟ್ಟಿಯಾಗಿ ಗುಡುಗಿನ ಸಪ್ಪಳವಾದುದರಿಂದ, ಅವನಿಂದ ೨೫-೩೦ ಹೆಜ್ಜೆ ಹಿಂದೆ ಬರುತ್ತಿದ್ದ ಎರಡನೇ ಕಾವಲುಗಾರನಿಗೆ ಆ ಶಬ್ದಗಳು ಕೇಳಿಸಲಿಲ್ಲ.

ಮೊದಲನೇ ಕಾವಲುಗಾರರನ್ನು ಆಹತಗೊಳಿಸಿದ ಕ್ಷಣಾರ್ಧದಲ್ಲೇ ಫಾಕ್ಸನು ಜೊನ್ಸಳೊಡನೆ ಗೋಡೆಯನ್ನೇರಿದನು; ಹಾಗು ಆ ಕಾವಲುಗಾರನ ದೇಹವನ್ನು ಆಚೇಬದಿಗೆ ಸರಿಸಿಟ್ಟು, ತಾನೂ ಜೊನ್ಸಳೂ ಆಚೇಬದಿಯ ಹಗ್ಗವನ್ನು ಹಿಡಿದು ಕೆಳಗೆ ಇಳಿಬಿದ್ದು ನಿಂತು, ಮೊದಲಿನಂತೆ ಕೈ-

ಯೊಳಗೆ ಬಾಕನ್ನು ಹಿಡಿದು ಸಜ್ಜಾದನು. ಫಾಕ್ಸನು ಹೀಗೆ ತತ್ಪರನಾಗು ವಷ್ಟರಲ್ಲಿ ಆ ೨ನೇ ಕಾವಲುಗಾರನೂ "ಹೋ-ಹೋ-ಹೋ" ಎಂದು ಓಡ ರುತ್ತ ಅಲ್ಲಿಗೇ ಬಂದನು. ಕೂಡಲೆ ಫಾಕ್ಸನು ಅವನಿಗೂ ಅವನ ಸಂಗಡಿ ಗನ ಗತಿಗಾಣಿಸಿದನು. ಬಳಿಕ ಫಾಕ್ಸನು ಮತ್ತೆ ಮೇಲೇರಿ ಬಂದನು. ಜೊನ್ಸಳು ಕೆಳಗಿಳಿದು ಹೋದಳು. ಅವನು ಆ ಎರಡೂ ಹೆಣಗಳನ್ನು ಒಂದಕ್ಕೊಂದು ಹೊಂದಿಸಿ ಆ ಗೋಡೆಯ ಮಧ್ಯದಲ್ಲಿ ಮಲಗಿಸಿದನು; ಹಾಗು ಅವುಗಳ ಶಸ್ತ್ರಾಸ್ತ್ರಗಳನ್ನು ತಕ್ಕೊಂಡು ತಾನೂ ಇಳಿದು ನಡೆದನು. ಪ್ರಸಂಗ ಸಾಧಿಸಿದಾಗ ಹೀಗೆ ಅನಾಯಾಸವಾಗಿ ದೊರೆತ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುವ ಪರಿಪಾಠವೇ ಅವನದಾಗಿತ್ತು.

ಕೆಳಗಿಳಿದು ಬಂದಕೂಡಲೆ ಗೋಪೀಚಂದನು ಅವರೆದುರಿಗೆ ಒಂದು ಅ ವೆಯ ಗಂಟನ್ನು ಚಲ್ಲಿದನು. ಅವರಿಬ್ಬರೂ ತಮ್ಮ ಮೊದಲಿನ ಪೋಷಾ ಕುಗಳನ್ನು ತೆಗೆದು, ಆ ಗಂಟನೊಳಗಿನ ಬೇರೆ ಪೋಷಾಕನ್ನು ಧರಿಸಿದರು; ಹಾಗು ಗೋಪೀಚಂದನನ್ನುದ್ದೇಶಿಸಿ:—ಗೋಪೀ, ನೀನು ಇನ್ನು ಇಲ್ಲಿಯೇ ಎಲ್ಲಿಯಾದರೂ ಅಡಗಿಕೊಂಡಿದ್ದು, ಇಲ್ಲಿ ಏನೇನು ನಡೆಯುವದೆಂಬದನ್ನು ನಾಳೆ ರಾತ್ರಿ ನಮಗೆ ತಿಳಿಸು. ನಾನು ಜೊನ್ಸಳೊಡನೆ ನಮ್ಮ ಆ ಶರಾವತೀ ತೀರದ ಗುಪ್ತತೋಟಕ್ಕೆ ಹೋಗುತ್ತೇನೆ. ನೀನು ನಾಳೆಗೆ ಅಲ್ಲಿಗೇ ಬಾ, ಅಂದರೆ ಭೆಟ್ಟಿಯಾಗುವದು.

ಗೋಪೀ:—ಧಣಿಯರೇ, ಈ ಬಗೆಯ ಮಳೆಯಲ್ಲಿ ನೀವು ತುಂಬಿ ಹರಿಯುವ ಆ ಹೊಳೆಯನ್ನು ಧಾಟುವ ಬಗೆ ಹೇಗೆ? ಒಂದು ವೇಳ ಹೇಗಾದರೂಮಾಡಿ ನೀವು ಪಾರಾದೀರಿ; ಆದರೆ ಜೊನ್ಸಳು ದಾಟುವದೆಂತು?

ಫಾಕ್ಸ:—ಆ ಬಗ್ಗೆ ನಿನಗೇಕೆ ಚಿಂತೆ? ಮುನ್ನೋಡಿ ನಿನ್ನ ಕೆಲಸ ಮಾಡೆಂದರಾಯಿತು. ಇನ್ನು ಹೆಚ್ಚು ಮಾತಾಡಲಿಕ್ಕೆ ನನಗೆ ಸಮಯವಿಲ್ಲ, ಎಂದವನೇ ಜೊನ್ಸಳೊಡನೆ ಕ್ಷಣಾರ್ಧದಲ್ಲಿ ಮಾಯವಾದನು.

ರಾತ್ರಿಯ ಎರಡು ಹೊಡೆದು ಮೂರು ಹೊಡೆಯುತ್ತ ಬಂದರೂ ಜೇಲಿನ ಪೂರ್ವದಿಕ್ಕಿನ ಗೋಡೆಯ ಮೇಲೆ ಪಹರೆ ಮಾಡುತ್ತಿದ್ದ ಪಹರೆ ಯವರಿಬ್ಬರೂ ಉತ್ತರದಿಕ್ಕಿನ ಚಾವಡಿಗೆ ಬರಲಿಲ್ಲ. ಆ ಪಹರೆಯವರ ಸರತಿಯು ೨ ಗಂಟೆಗೇ ಮುಗಿಯುತ್ತಿತ್ತು; ಆದರೆ ಭಯಂಕರವಾದ ಮಳೆಯಹೊಡತಕ್ಕೆ ಬೇಸತ್ತು ಎಲ್ಲಿಯಾದರೂ ತುಸಹೊತ್ತು ಮರೆಗೆ

ಕುಳಿತಿರಬಹುದೆಂದು ಅವರ ಬದಲಿಯು ಸರತಿಯವರು ಅಂದುಕೊಂಡು, ಚಾವಡಿಯಲ್ಲೇ ಬತ್ತಿಸೇದುತ್ತ ಕುಳಿತರು. ಬಹಳ ಹೊತ್ತಾದರೂ ಬಾರದ್ದರಿಂದ ಅವರಲ್ಲಿಯ ಒಬ್ಬನು ಅವರ ಅನುಸಂಧಾನಕ್ಕೆ ನಡೆದನು. ಅವನು ಉತ್ತರದಿಕ್ಕಿನ ಗೋಡೆಯನ್ನು ದಾಟಿ ಪೂರ್ವದಿಕ್ಕಿನ ಗೋಡೆಯನ್ನು ಅರ್ಧದವರೆಗೆ ಕ್ರಮಿಸಿದರೂ ಅವನಿಗೆ ಅವರ ಸುಳುವು ಹತ್ತಲಿಲ್ಲ. ಅವನು ಮತ್ತೆ ಕೆಲಹೆಜ್ಜೆ ನಡೆದು ಆ ಆಲದಮರದ ಹತ್ತರಕ್ಕೆ ಬರಲು, ಏನನ್ನೋ ಎಡವಿ ದೊಪ್ಪನೆ ಬಿದ್ದನು. ಇನ್ನು ತುಸ ಹೆಚ್ಚು ಜೋಲಿ ಹೋಗಿದ್ದರೆ, ಅವನು ಆಚೇ ಬದಿಯ ಕಂದಕಕ್ಕೇ ಬೀಳತಕ್ಕವನು. ಆಗಲವನು ತನ್ನಲ್ಲಿಯ ವಿದ್ಯುಲ್ಲತೆಯ ಬ್ಯಾಟರಿಯ ಕೀಲನ್ನೊತ್ತಿ ನೋಡುತ್ತಾನೆ, ಗೋಡೆಯ ಮೇಲೆ ಎರಡು ಹೆಣಗಳು ಮಲಗಿಸಲ್ಪಟ್ಟಿವೆ. ಬಳಿಕಲವನು ಆ ಬೆಳಕನ್ನು ಆ ಹೆಣಗಳ ಮುಖಗಳ ಹತ್ತರ ಒಯ್ದು ನೋಡಲು, ಅವರೀರ್ವರೂ ಪಹರೆಯವರು ಯಾರಿಂದಲೋ ಭಯಂಕರವಾಗಿ ಸಂಹರಿಸಲ್ಪಟ್ಟಿರುವರೆಂಬದು ಅವನ ನಿದರ್ಶನಕ್ಕೆ ಬಂದಿತು.

ಕೂಡಲೆ ಅವನು ತನ್ನ ಜೊತೆಗಾರನನ್ನು ಕರೆದು ಅವನನ್ನಲ್ಲಿ ನಿಲ್ಲಿಸಿ, ತಾನು ಜಮಾದಾರನ ಕಡೆಗೆ ಹೋಗಿ, ನಡೆದ ವರ್ತಮಾನವನ್ನು ತಿಳಿಸಿದನು. ಕೂಡಲೆ ಜಮಾದಾರನು ಜೇಲಿನೊಳಗಿನ ಭಯಸೂಚಕ ಬಿಗಿಲ್ಲನ್ನೂದಲು, ಎಲ್ಲ ಪಹರೆಯವರೂ, ವಾರ್ಡರರೂ, ಶಿಪಾಯಿಗಳೂ, ಜೇಲರನೂ ಕ್ಷಣಾರ್ಧದಲ್ಲಿ ಜೇಲಿನ ಮುಖ್ಯಬಾಗಿಲ ಬಳಿಗೆ ಕಲೆತರು. ಪಹರೆಯವನಿಂದ ನಡೆದ ಸಂಗತಿಯನ್ನು ತಿಳಿದು, ಭುಜಂಗರಾಯಾದಿಗಳಿಗೆ ಫಾಕ್ಸಾದಿಗಳ ಕೃತ್ಯವೇ ಇದೆಂದು ಖಾತ್ರಿಯಾಯಿತು ಬಳಿಕ ಅವರು ಜೇಲಿನೊಳಗೆ ಹೋಗಿ, ಫಾಕ್ಸನನ್ನೂ ಜೊನ್ಸನನ್ನೂ ಬಂಧಿಸಿಟ್ಟಿದ್ದ ಕೋಣೆಗಳನ್ನು ಶೋಧಿಸಿದರು. ಅಲ್ಲಿಯ ಪಹರೆಯವನ ಹೆಣವನ್ನೂ ಕೋಣೆಯ ಗೋಡೆಯ ಮೇಲೆ ಬಾಕಿನ ತುದಿಯಿಂದ ಬರೆದ ಸಂಗತಿಯನ್ನೂ ನೋಡಿದರು; ಹಾಗು ಆ ಕೂಡಲೆ ಅವರನ್ನು ಹಿಡತರುವದಕ್ಕಾಗಿ ಶಿಪಾಯಿಗಳ ಬೇರೆ ಬೇರೆ ಟೋಳಿಗಳನ್ನು ಬೇರೆ ಬೇರೆ ಕಡೆಗೆ ರವಾನಿಸಿದರು; ಕಾರವಾರ, ಧಾರವಾಡ, ಶಿಮೊಗ್ಗಾ ಮುಂತಾದ ಹೊಂದಿದ ಜಿಲ್ಲೆಗಳ ಎಲ್ಲ ಪೋಲೀಸ ಠಾಣ್ಯಗಳಿಗೂ ಆ ಫಾಕ್ಸ-ಜೊನ್ಸರ ಪಲಾಯನದ ವರ್ತಮಾನವು ತಂತಿಯ ಮೂಲಕ ತಿಳಿಸಲ್ಪಟ್ಟಿತು.

———

## ೧೪ ಮೃತ್ಯುಕ್ಕೆ ಮೃತ್ಯು!

ಸಿದ್ಧದೇವಪುರದ ಜೇಲಿನಿಂದ ರಾತ್ರಿಯ ಸರಾಸರಿ ೨ಕ್ಕೆ ಹೊರಟ ಫಾಕ್ಸನು ಜೊನ್ಸಳೊಡನೆ ಆ ಭಯಂಕರ ಕತ್ತಲೆ, ಮಳೆ, ಕಟ್ಟಡವಿಗಳಲ್ಲಿ ದಾರಿಯನ್ನು ಕ್ರಮಿಸುತ್ತ ಹನ್ನೆರಡು ಮೈಲು ದೂರದಲ್ಲಿದ್ದ ಶರಾವತೀ ತೀರಕ್ಕೆ ಬಂದಾಗ ನಾಲ್ಕು ಹೊಡೆದಿರಬಹುದು. ಆಗ ಶರಾವತೀ ನದಿಯು ಎರಡೂ ದಂಡೆಗಳನ್ನು ಹೊರಸೂಸಿ ಹರಿಯುತ್ತಿತ್ತು. ಪ್ರವಾಹದ ವೇಗವು ಹೆಚ್ಚಾಗಿದ್ದದರಿಂದ "ಭೋ'' ಎಂಬ ಕಠೋರ ಶಬ್ದದಿಂದ ಕಿವಿಗಳು ಗಡ ಚಿಕ್ಕುತ್ತಿದ್ದವು. ಆ ನದಿಯು ಗುಡ್ಡ, ದರಿ, ಕಂದರಗಳಲ್ಲೇ ಹೆಚ್ಚಾಗಿ ಹರಿಯುತ್ತಿರುವದರಿಂದ, ಆ ನಾದವು ಪ್ರತಿಧ್ವನಿಗೊಂಡು, ಸುತ್ತಲಿನ ಅರಣ್ಯದೊಳಗಿನ ಹಿಂಸ್ರಮೃಗಗಳನ್ನು ಚದರಿಸಿಬಿಡುತ್ತಿತ್ತು. ಹೊಳೆಯ ದಂಡೆಗುಂಟ ಆಕಾಶಸ್ಪರ್ಶಿಗಳಾದ ವೃಕ್ಷಗಳು ನೆಲೆಗೊಂಡಿರುವದರಿಂದ, ಸಮೀಪಕ್ಕೆ ಹೋಗುವವರೆಗೂ ಹೊಳೆಯ ಪ್ರವಾಹವು ಎಷ್ಟಿದೆಯೆಂಬದು ಕಾಣಿಸುವದಿಲ್ಲ. ಮೇಲಾಗಿ ಅಂದು ಆಕಾಶದ ತುಂಬೆಲ್ಲ ಘನವಾದ ಕಾರ್ಮೋಡಗಳು ಕಿಕ್ಕಿರಿದಿದ್ದವು. ಅದರಿಂದ ಸುತ್ತಲೂ ಗಾಢಾಂಧ ಕಾರವು ಮುಸುಗಿತ್ತು. ಹೊಳೆಯು ಎಷ್ಟು ಬಂದಿದೆ? ಇತ್ತ ಎಲ್ಲಿ ಈಸ ಬಿದ್ದರೆ ಪರತೀರದ ಇಂಥಲ್ಲಿಗೆ ಸಹಜವಾಗಿ ತಲುಪಬಹುದೆಂಬದಾವುದೂ ತಿಳಿಯುತ್ತಿರಲಿಲ್ಲ. ಆದ್ದರಿಂದ ನಿರುಪಾಯನಾಗಿ ಫಾಕ್ಸನು ಜೊನ್ಸಳೊ ಡನೆ ಆ ಹೊಳೆಯ ಧಡದಲ್ಲಿ ಕೆಲಹೊತ್ತು ಸುಮ್ಮನೆ ಕುಳಿತುಕೊಂಡನು.

ಗಳಿಗೆರಡು ಗಳಿಗೆಗಳನ್ನು ಕಳೆದರೂ ನದಿಯ ಪ್ರವಾಹವು ಕಡಿಮೆ ಯಾಗಲಿಲ್ಲ; ಬೆಳಕು ಬೀಳಲಿಲ್ಲ. ಇನ್ನು ಇಲ್ಲಿ ಹೆಚ್ಚು ವೇಳೆ ಕಳೆಯುವದು ಯುಕ್ತವಲ್ಲೆಂದು ಬಗೆದು, ಜೊನ್ಸಳೊಡನೆ ಫಾಕ್ಸನು ಆ ನದಿಯ ಪ್ರವಾಹ ದಲ್ಲಿ ಧುಮುಕಿದನು. ಇಬ್ಬರೂ ಒಳ್ಳೇ ಶಕ್ತಿಸಂಪನ್ನರಾದುದರಿಂದ, ಒಳ್ಳೇ ಕಸುವಿನಿಂದ ಒಂದೇಸವನೆ ಈಸತೊಡಗಿದರು. ಆದರೂ ಪ್ರವಾ ಹದ ವೇಗದ ಮುಂದೆ ಅವರ ಆಟವು ನಡೆಯದಾಯಿತು. ಪ್ರವಾಹದ ಮಧ್ಯ-ಪ್ರದೇಶಕ್ಕೆ ಹೋಗುವಷ್ಟರಲ್ಲಿ ಜೊನ್ಸಳ ಕೈಸೋತವು. ಅವಳು ಗುಟುಕುನೀರು ಕುಡಿಯುತ್ತ ಸೆಳವಿನೊಡನೆ ನಡೆದಳು. ಅವಳಿಗಿಂತಲೂ

ಹತ್ತೆಂಟುಮಾರು ಮುಂದೆ ಸಾಗಿದ್ದ ಫಾಕ್ಸನ ಕೈಗಳಾದರೂ ಸೋತಿದ್ದರೂ, ಅವನು ಜೊನ್ಸಳ ಆ ಅವಸ್ಥೆಯನ್ನು ಕಂಡು, ಭರದಿಂದ ಅವಳೆಡೆಗೆ ಹೋಗಿ ಅವಳನ್ನು ಹಿಡಿದು ನಿಲ್ಲಿಸಿ:—ಪ್ರಿಯೇ, ಉಳಿದ ಪಥವನ್ನು ಇನ್ನು ನೀನು ಕ್ರಮಿಸಲಾರೆ. ನೀನು ನನ್ನ ಡುಬ್ಬವನ್ನು ಹಿಡಿದುಕೊಂಡು ಬಾ ನಾನು ನಿನ್ನನ್ನು ಸುರಕ್ಷಿತವಾಗಿ ಆಚೇ ದಂಡೆಗೆ ಒಯ್ಯು ವೆನು, ಎಂದು ಹೇಳಲು, ಅವಳು ಅವನ ಬೆನ್ನ ಮೇಲೆ ಕುಳಿತಂತೆ ಅವಚಿ ಕೊಂಡು ಸಾಗಿದಳು

ಮೊದಲೇ ಕೈಸೋತು ಸಾವಕಾಶವಾಗಿ ಈಸುತ್ತ ನಡೆದಿದ್ದ ಫಾಕ್ಸನು ಈಗ ಜೊನ್ಸಳನ್ನು ಸಾವರಿಸಿಕೊಂಡು ಹೋಗುವ ಪ್ರಸಂಗವುಂ ಟಾದುದರಿಂದ ಅವನೂ ದಣಿದನು. ಆದರೂ ನಿರುಪಾಯನಾಗಿ ಜೀವ ವನ್ನೇ ಪಣಕ್ಕೆ ಹಚ್ಚಿದವನಂತೆ ಅವನು ಶಕ್ತಿಮೀರಿ ಹೆಣಗಿ, ಪರ ತೀರದ ಕಡೆಗೆ ನಡೆದಿದ್ದನು. ಅಷ್ಟರಲ್ಲಿ ಆಚೇ ದಂಡೆಯ ಮೇಲಿನ ಒಂದು ವಿಶಾಲ ವಾದ ಅಲದ ಮರದ ಪ್ರವಾಹಕ್ಕೆ ತಲುಪಿದ್ದ ಜಡೆಯ ತುದಿಯು ಅವನ ಕೈಗೆ ಹತ್ತಿತು. "ಸಾಯುವವನಿಗೆ ಕಡ್ಡಿಯ ಆಧಾರವೆ"ಂಬಂತೆ, ಫಾಕ್ಸನು ಅದನ್ನು ಹಿಡಿದುಕೊಂಡು ನಿಂತು ತುಸ ದಣಿವು ಆರಿಸಿಕೊಳ್ಳಬೇಕೆಂದನು; ಆದರೆ ಅವನ ವೈರಿಯು-ಅವನನ್ನು ಸದಾ ಹಿಂಬಾಲಿಸುತ್ತಿದ್ದಂಥ ಮನೋ ರಮೆಯು ಅದೇ ಗಿಡದ ಟೊಂಗೆಯ ಮೇಲೆ ಕುಳಿತುಕೊಂಡಿದ್ದರಿಂದ ಅದು ಸಾಧಿಸಲಿಲ್ಲ.

ಫಾಕ್ಸನು ಜೊನ್ಸಳೊಡನೆ ಆ ಆಲದ ಮರದ ಬಳಿಗೆ ಬರುವಷ್ಟರಲ್ಲಿ ಅರುಣೋದಯ ಸಮಯವಾಗಿತ್ತು. ಆಕಾಶದೊಳಗಿನ ಪೂರ್ವ ದಿಕ್ಕಿನ ಮೋಡಗಳು ಒಂದೊಂದೇ ಆಗಿ ಚದರಿ ಹೋಗಹತ್ತಿದ್ದವು. ಹೊಳೆಯ ಪಾತ್ರದಲ್ಲಿ ಮೂಡಣ ದಿಕ್ಕಿನ ಪ್ರಕಾಶವು ಅಲ್ಪ ಸ್ವಲ್ಪವಾಗಿ ಬೀಳಲಾರಂಭಿ ಸಿತು. ಇಷ್ಟರಲ್ಲಿ ಆ ವಿಶಾಲವಾದ ವಟವೃಕ್ಷದ ಕೊಂಬೆಯ ಮೇಲಿಂದ ಖೋ-ಖೋ ಎಂಬ ಹೃದಯ ವಿದಾರಕ ನಗೆಯ ಧ್ವನಿಯುಂಟಾಗಿ, ಅದು ಸೆಳವು ನೀರಿನ ಪ್ರವಾಹದಲ್ಲಿ ಪ್ರತಿಧ್ವನಿಗೊಂಡಿತು! ಎಂಥ ಎದೆಗಾರ ನಿದ್ದರೂ ಆಗಿನ ಆ ವಿಕಟಹಾಸ್ಯವನ್ನು ಕೇಳಿ ಕೈ-ಕಾಲು ನಡುಗಿಸದೆ ಇರುವ ಸಂಭವವಿರಲಿಲ್ಲ. ಆದರಿಂದ ಮೊದಲೇ ವಿಶೇಷ ಶ್ರಮದಿಂದಲೂ, ಚಳಿಯಿಂದಲೂ ತ್ರಸ್ತನಾಗಿದ್ದ ಫಾಕ್ಸನು ಆ ದನಿಯನ್ನು ಕೇಳಿ, ಥರಗುಟ್ಟಿ

ನಡುಗಹತ್ತಿದನು. ನೀರೊಳಗೆ ಇಳಿಬಿದ್ದಿದ್ದ ಆಲದ ಮರದ ಬೇರನ್ನು ಆಧಾರವಾಗಿ ಹಿಡಿದು ನಿಂತಿದ್ದ ಅವನ ಕೈಗಳು ಆ ಕೊಂಬೆಯಿಂದ ಸಡಿಲಾಗಹತ್ತಿದವು. ಅದರಿಂದ ಮೊದಲೇ ಅಸ್ಥಿರವಾಗಿದ್ದ ಅವನ ಚಿತ್ತವು ಮತ್ತಿಷ್ಟು ಅಸ್ಥಿರವಾಯಿತು. ಆಗ ಅವನು ಆ ವಿಕಟಹಾಸ್ಯಧ್ವನಿಯು ಕೇಳಬರುವ ಕಡೆಗೆ-ಅಂತರಿಕ್ಷದ ಕಡೆಗೆ ನೋಡಲಾರಂಭಿಸಿದನು. ಮೊದಮೊದಲು ಅವನಿಗೇನೂ ಕಾಣಿಸಲಿಲ್ಲ. ಹೆಚ್ಚು ಹೊತ್ತು ಟಕ ಮಕವಾಗಿ ಅತ್ತ ನೋಡಲು, ಯಾವದೊಂದು ವ್ಯಕ್ತಿಯು ಆ ಆಲದ ಮರದ ಕೊಂಬೆಯ ಮೇಲೆ ಕುಳಿತಿದ್ದು, ತಮ್ಮನ್ನು ನೋಡಿ ಅದು ಹೀಗೆ ನಗುತ್ತಿರುವದೆಂಬದು ಅವನಿಗೆ ಗೋಚರವಾಯಿತು.

ಅಷ್ಟರಲ್ಲಿ ಆ ವೃಕ್ಷಾರೋಹಿ ಹೆಂಗಸು:—ಯಾಕೋ ಪ್ರಾಣನಾಥಾ, ಹೇಗಿದೆ ನಿನ್ನ ಅವಸ್ಥೆ? ಈ ದಾಸಿ ಯಾರೆಂಬದು ಈಗಲಾದರೂ ತಿಳಿಯಿತೇನು? ಎಂದು ಪ್ರಶ್ನಮಾಡಲು,

ಆ ಮಾತಿನ ದನಿಯನ್ನು ಗುರ್ತಿಸಿ ಫಾಕ್ಸನು ಮನಸ್ಸಿನಲ್ಲಿ ಹೆಚ್ಚಾಗಿ ಅಂಜಿದನು. ಶ್ರಮದಿಂದ ಮೊದಲೇ ಬಿಳುಪೇರಿದ್ದ ಅವನ ಮುಖವು ಮತ್ತಿಷ್ಟು ಬಿಳುಪಾಯಿತು. ಅವನ ಶರೀರದೊಳಗಿನ ಶಕ್ತಿಯೆಲ್ಲ ಒಮ್ಮೆಲೆ ಪಾತವಾದಂತಾಯಿತು. ಆ ದನಿಯು ಅವನಿಗೆ ಸ್ಥಿರಪರಿಚಿತಳಾಗಿದ್ದ ಅವನ ಮನೋರಮೆಯದಾಗಿತ್ತು. ಆಗ ಮತ್ತೊಮ್ಮೆ ಅವನು ಮನೋರಮೆಯ ಕಡೆಗೆ ದಿಟ್ಟಿಸಿ ನೋಡಿದನು ಅವಳು ತನ್ನ ಕೈಯೊಳಗಿನ ನಿಡಿದಾದ ಚೂರಿಯಿಂದ ಫಾಕ್ಸನು ಆಧಾರವಾಗಿ ಹಿಡಿದುಕೊಂಡಿದ್ದ ಆ ಆಲದ ಮರದ ಜಡೆಯನ್ನು ಕೊಯ್ಯಲುದ್ಯುಕ್ತಳಾಗಿದ್ದಳು ಅದನ್ನು ಕಂಡು ಫಾಕ್ಸನು ಕ್ರೋಧಸಂತಪ್ತನಾದನು. ಆದರೂ ಅವನು ಅದನ್ನು ನುಂಗಿಕೊಂಡು ಮನೋರಮೆಯನ್ನು ಕುರಿತು:—ಪ್ರಿಯೇ, ಮನೋರಮೇ, ಇಂಥ ಹೊತ್ತಿನಲ್ಲಿ ನೀನಿಲ್ಲೇಕೆ ಬಂದಿರುವೆ?

"ಅದನ್ನೆಲ್ಲ ಕಟ್ಟಿಕೊಂಡು ನೀನೇನುಮಾಡುವದು?" ಎಂದೆನ್ನುತ್ತ ಮನೋರಮೆ:—ಇಲ್ಲಿಗೇಕೆ ಬಂದಿರುವೆನೆಂದು ಕೇಳುವಿಯಷ್ಟೇ? ನೀನು ನಿನ್ನ ಈಗಿನ ಪ್ರಿಯತಮೆಯೊಡನೆ ಜಲಕೇಳಿಯಾಟವನ್ನು ಹೇಗೆ ಆಡುವಿಯೋ ಎಂಬದನ್ನು ಕಣ್ಣಾರೆ ನಿರೀಕ್ಷಿಸುವ ಸಲುವಾಗಿ ಬಂದಿರುತ್ತೇನೆ, ತಿಳಿಯಿತೇ? ಎಂದಂದು ಮತ್ತೆ ಖೊ-ಖೊ ಎಂದು ಗಟ್ಟಿಯಾಗಿ ನಕ್ಕು

ಬಿಟ್ಟಳು. ಆ ಹುಚ್ಚಿಯ ಆ ವಿಕಟಹಾಸ್ಯವು, ಗುರುಗಂಭೀರ ಪ್ರವಾಹದ ವಜ್ರನಾದವನ್ನು ಹಿಂದೂಡಿ ಎಲ್ಲೆಲ್ಲಿಯೂ ಪ್ರತಿಧ್ವನಿಗೊಂಡಿತು. ಅದ ರಿಂದ ಘಾಕ್ಸನಿಗೆ ಪುನಃ ಶಕ್ತಿಪಾತವಾದಂತಾಯಿತು. ಬಳಿಕ ಮನೋ ರಮೆಯು:—ವಿನಾಯಕಾ, ಕೇಶವಾ, ಇನ್ನು ನಿನಗೆ ಹೆಚ್ಚು ಸಮಯವಿಲ್ಲ. ನೀನು ನಿನ್ನ ಆಯುಷ್ಯದೊಳಗಿನ ಸಮಸ್ತ ಪಾಪಮಯ ಪ್ರಸಂಗಗಳನ್ನು ಸ್ಮರಿಸಿ, ಈ ಶ್ರೀ ಜಗದುದ್ಧಾರಕರ್ತ್ರಿ ಗಂಗೆಯ ಬಳಿಯಲ್ಲಿ ಕ್ಷಮೆ ಯನ್ನು ಬೇಡಿಕೋ. ಅದರಂತೆ ಒಬ್ಬ ಮುಗ್ಧೆಯನ್ನು ಹಿಂಸಿಸುವದರಿಂದ, ಅವಳು ನಾಗಿಣಿಯಂತೆ ಪ್ರಕ್ಷುಬ್ಧಳಾಗಿ, ಮುಯ್ಯಕ್ಕೆ ಮುಯ್ಯ ತೀರಿಸಿ ಕೊಳ್ಳುವ ಪ್ರಸಂಗವನ್ನು ಹೇಗೆ ಸಾಧಿಸಿಕೊಳ್ಳುವಳೆಂಬದನ್ನು ನನ್ನನ್ನು ನೋಡಿ ಮನವರಿಕೆ ಮಾಡಿಕೊಂಡು ಮುಂದಿನ ಜನ್ಮಗಳಲ್ಲಾದರೂ ಇಂಥ ನಾರೀ-ಹೃದಯವಿದಾರಣದ ಮಹಾ ಘೋರಕೆಲಸಕ್ಕೆ ಕೈಹಾಕಬೇಡ. ನೀನು ನನ್ನಂಥ ಸ್ನೇಹಮಯಿಯಾದ ಗೃಹಿಣಿಗೆ ಪ್ರೇಮದಾಶೆಯನ್ನು ಬೀರಿ, ನನ್ನನ್ನು ಭ್ರಷ್ಟಳನ್ನಾಗಿ ಮಾಡಿ ತ್ಯಜಿಸಿದ್ದಲ್ಲದೆ, ಈಗ ಮತ್ತೊಬ್ಬ ಯುವತಿ ಯನ್ನು ಕಟ್ಟಿಕೊಂಡು ಸಂಚರಿಸುತ್ತಿರುವೆ. ನೀಚಾ, ನಿನ್ನ ದುಷ್ಕೃತಿ ಗಳಿಗೆ ಎಣೆಯೇ ಇಲ್ಲ. ನೀನು ಈಗಲಾದರೂ ನಿನ್ನ ಪಾಪ-ಪುಣ್ಯಗಳನ್ನು ಚೆನ್ನಾಗಿ ಮನನಮಾಡಿಕೊಂಡು ಜಗದೀಶನಿಗೆ ಮರೆಹೊಗು. ಹೂ, ತಡ ಮಾಡಬೇಡ. ಇನ್ನು ಹೆಚ್ಚು ಸಮಯವಿಲ್ಲ, ಎಂದೆನ್ನುತ್ತ ಆ ಜಡೆಯನ್ನು ಪುನಃ ಕೊಯ್ಯಹತ್ತಿದಳು.

ಘಾಕ್ಸನು ಮನೋರಮೆಯ ಮಾತುಗಳಿಗೇನೂ ಉತ್ತರ ಕೊಡದೆ ಕ್ಷಣಕಾಲ ಸುಮ್ಮನೆ ಇದ್ದನು. ಬಳಿಕ ಅವನು:—ಪ್ರಿಯೇ ಮನೋ ರಮೆ, ಅದನ್ನೆಲ್ಲ ಕಟ್ಟಿಕೊಂಡು ಈಗೇನು ಮಾಡುವದು? ಆ ನನ್ನ ಎಲ್ಲ ಅಪರಾಧಗಳನ್ನೂ ಕ್ಷಮಿಸಿ, ನನ್ನನ್ನು ಈ ಸಂಕಟದೊಳಗಿಂದ ಪಾರು ಮಾಡು. ನೀನು ನಿನ್ನ ಸೀರೆಯ ಸೆರಗನ್ನು ಕೆಳಗಿಳಿಬಿಡು; ಅದನ್ನು ಹಿಡಿ ಕೊಂಡು ನಾನು ಮರವನ್ನು ಏರುತ್ತೇನೆ. ಈ ಜಡೆಯಿಂದ ನನ್ನ ಕೈ- ತಪ್ಪಿದರೆ, ಅಗೋ ಆ ಸಮೀಪದ ಮಡುವಿಗೆ ಸಿಲುಕಿ, ನಾವು ಮುಳುಗು ವದು ಖಂಡಿತ. ಆದುದರಿಂದ ನನ್ನನ್ನು ಈಗ ಬದುಕಿಸು; ರಕ್ಷಿಸು. ಇನ್ನು ಒಂದು ಕ್ಷಣಸಹ ನಾನೀ ಅವಸ್ಥೆಯಲ್ಲಿ ನಿಲ್ಲಲಾರೆನು, ಎಂದನು.

"ನೀನು ಇನ್ನು ಹೆಚ್ಚು ಕಾಲ ಜೀವಿಸಬಾರದೆಂದೇ ನಾನು ಈ ಕೆಲ

ಸಕ್ಕೆ ತೊಡಗಿರುತ್ತೇನೆ" ಎಂದವಳೇ ಮನೋರಮೆಯು ಆ ಜಡೆಯನ್ನು ಮತ್ತಿಷ್ಟು ಕಸುವಿನಿಂದ ಕೊಯ್ಯಲಾರಂಭಿಸಿದಳು.

ಆಗ ಫಾಕ್ಸನು ನಡುಗುವ ದನಿಯಿಂದ:-ಮನೋರಮೆ, ಈ ಸರ್ವ ನಾಶದ ಉದ್ಯೋಗವನ್ನು ಮುಂದರಿಸಬೇಡ. ನನ್ನನ್ನು ನೀರಲ್ಲಿ ಮುಳು ಗಿಸಿ ಕೊಲ್ಲಬೇಡ. ಬದುಕಿಸು; ಬದುಕಿಸು..........

"ನಿನ್ನ ಅಪರಾಧಕ್ಕೆ ಕ್ಷಮೆಯಿಲ್ಲ. ಕೇಶವಾ, ಒಂದೇ ಬಾಣದಿಂದ ಎರಡು ಹಕ್ಕಿಗಳನ್ನು ಕೊಲ್ಲುವ ಈ ಅಪೂರ್ವಸಂಧಿಯನ್ನು ನಾನು ಕಳೆ ಕೊಳ್ಳಬಹುದೆ? ಈ ಜಡೆ ಕೊಯ್ಯುವದರಿಂದ ನಿನ್ನ ಸೇಡು ತೀರಿಸಿಕೊಂಡ ಸಮಾಧಾನವು ನನಗುಂಟಾಗುವದಲ್ಲದೆ, ಈ ನನ್ನ ಸವತಿಯ ಸೇಡನ್ನೂ ತೀರಿಸಿಕೊಳ್ಳುವ ಹವ್ಯಾಸವು ಪೂರ್ತಿಯಾಗುವದು. ಎಂದೆನ್ನುತ್ತ ತನ್ನ ಚೂರಿಯಿಂದ ಅವಳು ಆ ಜಡೆಯ ಎಳೆಗಳನ್ನು ಒಂದೊಂದೇ ಆಗಿ ಛೇದಿ ಸುತ್ತಿದ್ದಳು.

ಆಗ ಫಾಕ್ಸನು ಕ್ರೋಧಭರದಿಂದ:-ನೀಚಳೇ, ಪಿಶಾಚಿಯೇ, ಸಾಕು ಮಾಡು ನಿನ್ನ ಈ ವಾಕ್ಪಾಂಡಿತ್ಯವನ್ನು. ಈ ಪ್ರಸಂಗದಿಂದ ನಾನು ಹೇಗಾದರೂ ಒಂದುವೇಳೆ ಉಳಿದರೆ, ನಿನ್ನ ರುಂಡವನ್ನು ದಿಂಡದಿಂದ ಬೇರೆಮಾಡದೆ ಈ ಫಾಕ್ಸನು ಎಂದೂ ಬಿಡಲಿಕ್ಕಿಲ್ಲ. ಎಚ್ಚರಿಕೆ!

ಹುಚ್ಚ ಮನೋರಮೆಯು ಮತ್ತೊಮ್ಮೆ ಖೊ ಖೊ ಎಂದು ನಕ್ಕು ತನ್ನ ಜಡೆಕಡಿಯುವ ಕೆಲಸವನ್ನು ಭರದಿಂದ ಸಾಗಿಸಿದಳು; ಹಾಗು ಬಾಯಿಂದ:—ರಾಕ್ಷಸಾ, ನಿನ್ನ ಜೀವ ಬದುಕಿಸುವ ಉದ್ಯೋಗಕ್ಕೆ ಹತ್ತು ಅಂದರಾಯಿತು. ನನ್ನ ಸಂರಕ್ಷಣದ ಭಾರವನ್ನು ದೇವರೇ ವಹಿ ಸಿರುವನು. ನಾನು ನಿನ್ನ ಪಾಲಿನ ಪಿಶಾಚಿಯಷ್ಟೇ? ಪಿಶಾಚಿಯ ಬಳಿ ಯಲ್ಲಾದ್ಯರೂ ದಯೆಯ ಭಿಕ್ಷೆಯನ್ನು ಬೇಡುವದುಂಟೇ? ಎನ್ನಲು,

ಜೊನ್ನಳು ಕರುಣಾಸ್ವರದಿಂದ ಮನೋರಮೆಯನ್ನು ಕುರಿತು:— ಅಕ್ಕಾ, ಮನೋರಮೆ, ಈ ಪ್ರಸಂಗದಲ್ಲಿ ನೀನು ನನ್ನ ಮೇಲೆ ದಯಮಾಡ ದಿದ್ದರೆ ಮತ್ತಾರು ಮಾಡುವವರು? ಇವರ ಸರ್ವಾಪರಾಧಗಳನ್ನು ಕ್ಷಮಿಸಿ, ನಿನ್ನ ಈ ತಂಗಿಯ ಕಡೆಗೆ ನೋಡಿ ದಯೆತೋರು.

ಒಮ್ಮೆಲೆ ಕುದಿಬಂದ ಕ್ರೋಧಾವೇಶದಿಂದ ಮನೋರಮೆಯು ಜೊನ್ನ ಳಿಗೆ:—ಛೀ, ದೆವ್ವಾ, ಸುಮ್ಮನಿರು. ಈ ಸಾಯುವ ಸಮಯದಲ್ಲಿ ನಿನ್ನ

ಕುಲದೇವರನ್ನು ಸ್ಮರಿಸು. ಸುಮ್ಮನೆ ಯಾಕೆ ಬಡಬಡಿಸುವೆ?

ಮನೋರಮೆಯು ಈ ನುಡಿಗಳನ್ನು ಕೇಳಿ ಜೊನ್ಸಳು ಸಿಟ್ಟುಬೆಂಕಿಯಾದಳು. ಅವಳ ಮುಖವು ಆರಕ್ತವರ್ಣವನ್ನು ಧರಿಸಿತು. ತುಟಿಗಳು ಥರಗುಟ್ಟಿ ನಡುಗಲಾರಂಭಿಸಿದವು. ಕಣ್ಣುಗಳಿಂದ ಕೆಂಡಗಳೇ ಹೊರಬೀಳುತ್ತಿರುವಂತೆ ಭಾಸವಾಯಿತು. ಆಗ ಅವಳು ಹುಬ್ಬುಗಂಟಿಕ್ಕಿ ಆವೇಶಭರದಿಂದ:—ಹುಚ್ಚೀ-ಮನೋರಮೇ, ಈ ಕುತ್ತದಿಂದ ಪಾರಾಗಿ ಒಂದುವೇಳೆ ನಾನು ಬದುಕಿ ಉಳಿದರೆ, ಈ ದೆವ್ವನ ಗುರುತನ್ನು ನಿನಗೆ ಚನ್ನಾಗಿ ಮಾಡಿಕೊಟ್ಟೇನು. ನನ್ನ ಸಾಹಸವನ್ನೇ ನೋಡಬೇಕಾಗಿದ್ದರೆ ಇಂಥ ಈ ಆಸನ್ನಾವಸ್ಥೆಯಲ್ಲಿಯೂ ಈ ಜೊನ್ಸಳು ನಿನಗೆ ಅದನ್ನು ತೋರಿಸುವಳು ನೋಡು. ಇದರಿಂದ ನಾನು ಮೊದಲು ಸಾಯುವೆನೋ-ನೀನು ಸಾಯುವೆಯೋ ತಿಳಿಯಲಿ, ಎಂದಂದು ಈ ವರೆಗೆ ತನ್ನ ಟೊಂಕದಲ್ಲಿ ಗವಸಣಿಗೆಯೊಳಗೆ ಬಚ್ಚಿಟ್ಟುಕೊಂಡಿದ್ದ ತನ್ನ ಚಿಕ್ಕ ಕಠಾರಿಯನ್ನು ಹಿರಿದು ಒಳ್ಳೇ ವೇಗದಿಂದ ಮನೋರಮೆಯ ಮೇಲೆ ಬೀಸಿದಳು!

ಆ ಕಠಾರಿಯು ಮನೋರಮೆಯ ಎಡಗೈಯಲ್ಲಿ ಆಮೂಲಪರಿಯಂತವಾಗಿ ನೆಟ್ಟಿತು. ಅವಳು ಆ ಕೈಯಿಂದ ಜಡೆಯನ್ನು ಹಿಡಿದು, ಬಲಗೈಯೊಳಗಿನ ಚೂರಿಯಿಂದ ಅದನ್ನು ಕಡಿಯುತ್ತಿದ್ದಳು ಕಠಾರಿಯು ಒಳ್ಳೇ ಬಲವಾಗಿ ಬಂದು ನೆಟ್ಟದ್ದರಿಂದ ಅವಳ ಕೈಯೊಳಗಿಂದ ಬಳಬಳನೆ ರಕ್ತವು ಪುಟಿದು, ಅದು ಕೆಳಭಾಗದಲ್ಲಿದ್ದ ಫಾಕ್ಸ-ಜೊನ್ಸರ ಮೇಲೆ ಅಭಿಷೇಕಪಾತ್ರೆಯೊಳಗಿನ ವಾರಿಯಂತೆ ಎರಚಲಾರಂಭಿಸಿತು! ಆದರೂ ಆ ಉನ್ಮಾದಿನಿಯಾದ ಮನೋರಮೆಯು ಅತ್ತಕಡೆಗೆ ಕೊಂಚವೂ ಲಕ್ಷ್ಯಕೊಡದೆ ತನ್ನ ಕೆಲಸವನ್ನು ಒಂದೇಸವನೆ ಸಾಗಿಸಿದ್ದಳು.

ಜೊನ್ಸಳ ಕಠಾರಿಯ ಏಟಿನಿಂದಾದರೂ ಮನೋರಮೆಯು ತನ್ನ ಕೆಲಸವನ್ನು ಬಿಟ್ಟಳೇನೆಂದು ಫಾಕ್ಸನು ಮೋರೆಯೆತ್ತಿ ನೋಡಲಿಕ್ಕೂ, ಮನೋರಮೆಯ ವಾಮಹಸ್ತದೊಳಗಿನ ರಕ್ತಪ್ರವಾಹವು ಅವನ ಕಣ್ಣು-ಮೂಗು-ಬಾಯಿಗಳಲ್ಲಿ ಬಂದು ಬೀಳಲಿಕ್ಕೂ ಗಂಟೇಬಿದ್ದಿತು! ಅಷ್ಟರಲ್ಲಿ ಮನೋರಮೆಯ ಕಾರ್ಯವೂ ಪೂರಯಿಸಿತು. ಆ ಆಲದ ಜಡೆಯ ಕಡೆಯ ಎಳೆಗೆ ಮನೋರಮೆಯ ಕೈಗತ್ತಿಯ ಒಂದು ಬಲವಾದ ಏಟು ಬೀಳಲು, ಅದು ಖಡಡಡೆಂದು ಕೆಳಗೆ ಕಳಚಿತು. ಆ ಕೂಡಲೆ ಫಾಕ್ಸನೂ-ಜೊನ್ಸಳೂ

ಒಮ್ಮೆಲೆ ನೀರಲ್ಲಿ ಮುಳುಗಿ ಕಾಣದಾದರು! ಆಗ ಮನೋರಮೆಯು ಖೊ-ಖೊ-ಖೊ ಎಂದು ಈ ಮೊದಲಿಗಿಂತಲೂ ಒಳ್ಳೇ ಗಟ್ಟಿಯಾಗಿ ನಕ್ಕು ಚಪ್ಪಾಳೆ ಬಾರಿಸಿದಳು. ಆಕೆಯ ನಗೆಯ ಪ್ರತಿಧ್ವನಿಯು ಅಡಗುವಷ್ಟ ರಲ್ಲಿ ಫಾಕ್ಸ-ಜೊನ್ಸರ ದೇಹಗಳು ಸಮೀಪದ ಮಡುವಿನಲ್ಲಿ ಮುಳುಮುಳುಗಿ ಏಳುತ್ತಿದ್ದುದು ಕಾಣಹತ್ತಿತು.

ಇಷ್ಟರಲ್ಲಿ ಬೆಳ್ಳಗೆ ಬೆಳಗಾಯಿತು. ಆಕಾಶದೊಳಗಿನ ಮೇಘಗಳೆಲ್ಲ ಮಾಯವಾಗಿ, ಪೂರ್ವ ದಿಕ್ಕಿನಲ್ಲಿ ತೇಜಃಪುಂಜನಾದ ದಿನಮಣಿಯು ತನ್ನ ಹೊಂಬಣ್ಣದ ಕಿರಣಗಳನ್ನು ಹೊರಚಾಚುತ್ತ ಭೂಲೋಕದ ಪ್ರಾಣಿಗಳಲ್ಲಿ ಇಷ್ಟಕಾರ್ಯಸ್ಫೂರ್ತಿಯನ್ನುಂಟುಮಾಡಹತ್ತಿದ್ದನು. ಆ ಶರಾವತೀ ನದಿಯ ತಟಪ್ರಾಂತದೊಳಗಿನ ಪಕ್ಷಿಗಳು ತಮ್ಮ ಗೂಡುಗಳನ್ನು ತೊರೆದು, ಎಲ್ಲೆಲ್ಲಿಯೂ ಕಿಲಿಬಿಲಿ ಶಬ್ದವನ್ನು ಗೆಯ್ಯುತ್ತ ಸಂಚರಿಸಲಾರಂಭಿಸಿದವು. ಆದರೂ ನಡನಡುವೆ ನಮ್ಮ ಆ ಉನ್ಮಾದಿನಿ ಮನೋರಮೆಯ ಖೊ-ಖೋ ಎಂಬ ವಿಕಟಹಾಸ್ಯ ಧ್ವನಿಯು ಯಾವಾಗಾದರೊಮ್ಮೆ ಆ ತಟಪ್ರಾಂತ ನಿವಾಸಿಗಳಿಗೆ ಕೇಳಿಸುತ್ತಲೇ ಇದ್ದಿತು.



## ೧೫ ಈ ಯುವಕನಾರು?

ಆ ಫಾಕ್ಸ-ಜೋನ್ಸರ ಪಲಾಯನವಾಗಿ ಒಂದು ವಾರವಾಗಿರಬಹುದು. ವರ್ಷಾಕಾಲವು ಪೂರಯಿಸಿ, ಶರದೃತುವು ತನ್ನ ಮುಂಗಾಲನ್ನೂರಹತ್ತಿತ್ತು. ಗೆರಸಪ್ಪೆಯ ಬಳಿಯ ಶರಾವತೀ ತೀರವು. ಮೂರೂಸಂಜೆಯಡಗಿ ರಾತ್ರಿಯು ಕ್ರಮಕ್ರಮವಾಗಿ ಮುಂದರಿಯುತ್ತಲಿತ್ತು. ಶುಕ್ಲಪಕ್ಷದ ಪಂಚಮಿಯ ತಿಥಿಯು. ಆಕಾಶದಲ್ಲೆಲ್ಲೂ ಮೋಡವಿರಲಿಲ್ಲ. ಮುಂಬೆಳದಿಂಗಳ ಸೊಬಗು. ಅದರಲ್ಲಿಯೂ "ಶರಚ್ಚಂದ್ರ ದಿವಾಕರೌ" ಎಂಬಂತೆ ಚಂದ್ರನ ಪ್ರಕಾಶವು ಸೂರ್ಯನ ತೇಜವನ್ನು ಸರಿಗಟ್ಟುತ್ತಿತ್ತು. ಹೊಳೆಯ ಧಡದಲ್ಲಿ ಹೆಚ್ಚಾಗಿ ಜನರಿರಲಿಲ್ಲ. ಧಾರವಾಡ ಪ್ರಾಂತದ ಒಬ್ಬ ತರುಣನು ಅಲ್ಲಿಯ ಡೋಣಿಯವರಿಗೆ ಖುಷಿಕೊಟ್ಟು ಅವರ ಡೋಣಿಯಲ್ಲಿ ಹತ್ತಿ ಆಚೇತೀರಕ್ಕೆ ನಡೆದಿದ್ದನು. ಅದು ಆಚೇಧಡಕ್ಕೆ ಇನ್ನೂ ತಲುಪಿರಲಿಲ್ಲ. ಇಷ್ಟರಲ್ಲಿ ಒಂದು ವಿಸ್ಮಯಕಾರಕ ದೃಶ್ಯವು ಆ ನಾವಿಕರ, ಆದರೆ ವಿಶೇಷವಾಗಿ ಆ ತರುಣನ ಚಿತ್ತವನ್ನು ಹೆಚ್ಚಾಗಿ ಆಕರ್ಷಿಸಿಬಿಟ್ಟಿತು.

ಅಂಥ ಆ ಪ್ರಶಾಂತವಾದ ಆದರೆ ನಾರೀಪ್ರಕೃತಿಗೆ ಭೀಕರವಾದ ಸಮಯದಲ್ಲಿ ಆಚೇ ಧಡದ ಕೇವಲ ನಿರ್ಜನವಾದ ಪ್ರದೇಶದಲ್ಲಿ ಒಂದು ವಿಶಾಲವಾದ ವೃಕ್ಷದ ಕವಿನೆಳಲಲ್ಲಿ ಒಬ್ಬ ಸ್ತ್ರೀಯು ಕುಳಿತುಕೊಂಡಂತೆ ಆ ನೌಕಾರೋಹಿಗಳೆಲ್ಲರಿಗೂ ಕಾಣಹತ್ತಿತು. ಆ ಡೋಣಿಯು ಆಚೇ ಧಡಕ್ಕೆ ಎಲ್ಲಿಗೆ ತಲುಪುತ್ತಿತ್ತೋ ಅಲ್ಲಿಂದ ಬಹು ದೂರದವರೆಗೆ ಜನವಸತಿಯ ಗ್ರಾಮಗಳಿರಲಿಲ್ಲ. ಮಂದಗತಿಯಿಂದ ಸಾಗಿದ್ದ ನಾವು ಆ ಧಡಕ್ಕೆ ಮುಟ್ಟುವಷ್ಟರಲ್ಲಿ ರಾತ್ರಿಯ ಮೊದಲನೇ ಪ್ರಹರವು ಕಳೆಯುತ್ತ ಬಂದಿತ್ತು. ಅದರಿಂದ ಆಕಾಶದ ಮೇಲಿನ ಚಂದ್ರನು ಕ್ಷಿತಿಜಕ್ಕೆ ಮುಟ್ಟಲಿಕ್ಕೆ ಇನ್ನು ಹೆಚ್ಚು ವಿಲಂಬವಿರಲಿಲ್ಲ. ದಂಡೆಯ ಮೇಲಿನ ಘನ-ಘನ ವೃಕ್ಷಗಳ ದಟ್ಟವಾದ ಹರಿ-ಕೊಂಬಿಗಳೊಳಗಿಂದ ಹಾಯುವ ಚಂದ್ರಪ್ರಕಾಶವು ಭೂಮಿಗೆ ಮುಟ್ಟುವದು ದುಸ್ತರವಾಗಹತ್ತಿತು ಅದರಿಂದ ಆ ವ್ಯಕ್ತಿಯು ಕುಳಿತಲ್ಲಿ ಮುಸಮುಸಕಾದ ಪ್ರಕಾಶವು ಬೀಳುತ್ತಿತ್ತು. ಅದಕ್ಕಾಗಿ ಅವಳು ಹೆಂಗಸೋ ಗಂಡಸೋ? ತರುಣಿಯೊ-ವೃದ್ಧಳೊ? ಎಂಬದಾವುದೂ ನಾವಿನಲ್ಲಿ ಕುಳಿತವರಿಗೆ ತಿಳಿಯದಾಯಿತು. ಅದರಿಂದ ಆ ಯುವಕನು ಆ ನಾವಿಕರನ್ನು

ಕುರಿತು ತವಕದಿಂದ:—ಸಂಜೀವಾ, ಈ ಡೋಣಿಯನ್ನು ಅಗೋ ಆ ಗಿಡದ ಕೆಳಗೆ ಕಾಣುವ ಆ ವ್ಯಕ್ತಿಯ ಬಳಿಗೆ ಬೇಗನೆ ತೆಗೆದುಕೊಂಡು ನಡೆ, ಎಂದೆನ್ನಲು, ಕೂಡಲೆ ನೌಕೆಯು ಭರದಿಂದ ಅತ್ತ ಸಾಗಿತು. ಆ ಗಿಡದ ಕೆಳಗೆ ಬಿಳೀ ವಸ್ತ್ರದಿಂದ ತನ್ನ ಮೈಯನ್ನೆಲ್ಲ ಮುಚ್ಚಿಕೊಂಡಿದ್ದ ಹುಬ್ಬ ಹೆಣ್ಣುಮಗಳು ನೌಕೆಯ ಕಡೆಗೇ ನೋಡುತ್ತ ನಿಂತುಕೊಂಡಿದ್ದಳು. ಆ ವಸ್ತ್ರದೊಳಗಿಂದ ಆಕೆಯ ಮುಖದ ಎಷ್ಟು ಭಾಗವು ಕಾಣುತ್ತಿತ್ತೋ ಅಷ್ಟರಿಂದಲೇ ಅವಳೊಳ್ಳೇ ಸೌಂದರ್ಯವತಿಯೂ, ಪ್ರೌಢಳೂ ಇರುವಂತೆ ಭಾಸವಾಗುತ್ತಿತ್ತು. ನೌಕೆಯು ಪರತೀರವನ್ನು ತಲುಪಲಿಕ್ಕೆ ಇನ್ನು ಹೆಚ್ಚು ದೂರಿರಲಿಲ್ಲ. ಇದನ್ನು ಕಂಡು ಆ ಘೋಷಾ (ಬುರುಕೆ) ಹಾಕಿಕೊಂಡಿದ್ದ ಹೆಣ್ಣುಮಗಳು ಲಗುಬಗೆಯಿಂದ ನದಿಯ ಪಾತ್ರದಲ್ಲಿಳಿದು, ತನ್ನ ಮೊಣಕಾಲಿಗೆ ನೀರು ಬರುವ ವರೆಗೆ ನೌಕೆಯ ಕಡೆಗೆ ಬಂದು, ನೌಕೆಯೊಳಗಿನ ಆ ಧಾರವಾಡ ಪ್ರಾಂತದ ತರುಣನನ್ನುದ್ದೇಶಿಸಿ ದೈನ್ಯದಿಂದ:—ಮಹಾರಾಯರೇ, ನಾನು ಒಳ್ಳೇ ಪೇಚಿನಲ್ಲಿ ಸಿಕ್ಕಿರುವೆನು; ಅದಕ್ಕಾಗಿಯೇ ನಾನು ಇಷ್ಟು ರಾತ್ರಿಯಲ್ಲಿ ಈ ನಿರ್ಜನ ಪ್ರದೇಶಕ್ಕೆ ಒಬ್ಬೊಂಟಿಗಳಾಗಿ ಬಂದಿರುತ್ತೇನೆ. ಇಂಥ ಸಂಕಟ ಸಮಯದಲ್ಲಿ ನನಗೆ ಸಹಾಯ ಮಾಡುವವರಾದರೂ ಯಾರಿರುವರು? ಅಂತೆಯೇ ನಾನೀಗ ಈ ಹೊಳೆಯಲ್ಲಿ ದುಮುಕಿ ಸಾಯುತ್ತೇನೆ. ಈ ಮೊದಲೇ ಮುಳುಗಿ ಬಿಟ್ಟಿದ್ದರೆ, ನಿಮ್ಮ ಅಂಜಿಕೆಯೇ ನನಗಿರಲಿಲ್ಲ; ಆದರೆ ಹೊಳೆಯಲ್ಲಿ ಬರುತ್ತಿರುವ ಈ ನೌಕೆಯನ್ನು ಇದುವರೆಗೂ ನಾನು ನೋಡಿರಲಿಲ್ಲ. ನನ್ನ ಆತ್ಮಗತ ವಿಚಾರದಲ್ಲಿಯೇ ನಾನು ಮಗ್ನಳಾಗಿ ಬಿಟ್ಟಿದ್ದು ಇದಕ್ಕೆ ಕಾರಣವು; ಆದ್ದರಿಂದ ಮಹಾಶಯ ನಾನಿನ್ನು ಈ ಪ್ರವಾಹದಲ್ಲಿ ದುಮುಕುವೆನು, ಎಂದವಳೇ ಒಮ್ಮೆಲೆ ನಡುಮಟ ನೀರಲ್ಲಿ ಪ್ರವೇಶಿಸಿ, ಇನ್ನು ಮುಳುಗತಕ್ಕವಳು; ಅಷ್ಟರಲ್ಲಿ ಆ ಯುವಕನ ಡೋಣಿಯು ಅವಳ ಹತ್ತರವೇ ಬರಲು, ಆವನು ಹಿಂದುಮುಂದಿನ ವಿಚಾರವನ್ನೇನೂ ಮಾಡದೆ, ಒಮ್ಮೆಲೆ ಡೋಣಿಯಿಂದ ಕೆಳಗೆ ಜಿಗಿದು, ಅವಳನ್ನು ಗಟ್ಟಿಯಾಗಿ ಹಿಡಿದು ನಿಲ್ಲಿಸಿ:-ಭಗಿನೀ, ನಿನಗೆ ಏನಾಗಿದೆಯೆಂಬದನ್ನಾದರೂ ಹೇಳು; ನನ್ನ ಶಕ್ತಿಮೀರಿ ನಾನು ನಿನಗೆ ಸಹಾಯ ಮಾಡುತ್ತೇನೆ, ಎಂದನು.

ಆಗ ಆ ರಮಣಿಯು ಅವನ ಕೈಕೊಸರಿಕೊಂಡು, ನೀರಲ್ಲಿ ಮುಳು

ಗಲು ಪ್ರಯತ್ನಪಡುತ್ತ:—ಮಹಾನುಭಾವರೇ, ನಾನು ಕುಲಸ್ತ್ರೀಯು. ಇಷ್ಟು ರಾತ್ರಿಯಲ್ಲಿ ಇಂಥ ನಿರ್ಜನ ಪ್ರದೇಶದಲ್ಲಿ ಪರಪುರುಷರೊಡನೆ ಮಾತಾಡುವದು ನನಗೆ ತಕ್ಕದ್ದಲ್ಲ; ನಿಮಗೂ ಭೂಷಣವಲ್ಲ. ನನ್ನ ಸಂಕಟಕ್ಕೇ ಆಗಿದ್ದರೆ ನಾನೀಗ ಸಂತೋಷದಿಂದ ಪ್ರಾಣಕೊಡುತ್ತಿದ್ದೆನು; ಆದರೆ ನನ್ನ ಸ್ವಾಮಿಯು-ಗಂಡನು ಮನೆಯಲ್ಲಿ ಹಾಸಿಗೆ ಹಿಡಿದಿರುವನು. ಆವನ ಸಂರಕ್ಷಣವನ್ನು ಇನ್ನಾರು ಮಾಡುವರು? ಅವನು ಆ ಬೇನೆಯಿಂದ ಬದುಕುವನೋ ಇಲ್ಲವೋ! ಯಾರಾದರೂ ಈಗಿಂದೀಗಲೇ ನನ್ನನ್ನು ನನ್ನ ಮನೆಗೆ ಮುಟ್ಟಿಸಿದ್ದರೆ ಒಳಿತಾಗುತ್ತಿತ್ತು; ಹಾಗೆ ಆಗುವದು ಶಕ್ಯವಿಲ್ಲೆಂತಲೇ ನಾನೀಗ ಸಾಯುತ್ತಿರುವೆನು, ಎಂದು ನುಡಿದಳು.

ಯುವಕ:—ನಿನ್ನ ಮನೆಯು ಇಲ್ಲಿಂದ ಎಷ್ಟು ದೂರಿರುವದು?

ರಮಣಿ:-ವಿಶೇಷ ದೂರಿಲ್ಲ. ಅಗೋ ಅತ್ತ ದಕ್ಷಿಣದಿಕ್ಕಿಗೆ ಕಾಣುವ ಆ ಮಾವಿನ ತೋಪಿನ ಹತ್ತರವೇ ಒಂದು ಹಳ್ಳಿಯಿದೆ. ಆ ಹಳ್ಳಿಯ ಹತ್ತರವೇ ನಮ್ಮ ತೋಟಕ್ಕೆ ಹೋಗುವ ಕಾಲುದಾರಿಯಿದೆ; ಆದರೆ ಇಂಥ ರಾತ್ರಿಯಲ್ಲಿ ಆ ಹಳ್ಳಿಯ ಹತ್ತರದ ಆ ಕಾಲುದಾರಿಯಿಂದ ಒಬ್ಬೊಂಟಿಗಳಾಗಿ ಹೊರಟರೆ, ಯಾವ ಕಾಮುಕ-ನೀಚರ ಉಪಸರ್ಗವಾದರೂ ಆದೀತೆಂಬ ಭಯದಿಂದ ನಾನೀಗ ಪ್ರಾಣಕ್ಕೆರವಾಗುತ್ತೇನೆ ಸರಿಯಿರಿ, ನನ್ನ ನಿಶ್ಚಯವನ್ನು ಕೊನೆಗಾಣಿಸುವೆನು.

ಆಗ ಯುವಕನು ಅವಳನ್ನು ನೀರಹೊರಗೆ ಜಗ್ಗಿಕೊಂಡು ಬಂದು:- ಭಗಿನೀ, ನೀನು ನಿನ್ನ ಜೀವದಮೇಲೆ ಇಷ್ಟು ಉದಾರಳಾಗುವದುಚಿತವಲ್ಲ. ಈ ಮೊದಲು ಹೇಳಿದಂತೆ ನಾನು ನಿನಗೆ ಶಕ್ತಿಮೀರಿ ಸಹಾಯ ಮಾಡುವೆನು; ಆದರೆ ನಿನ್ನ ಹಾಗು ನಿನ್ನ ಸ್ವಾಮಿಯ ಸಂಗತಿಯನ್ನಷ್ಟು ನನಗೆ ತಿಳಿಸು, ಎಂದು ಬಿನ್ನಯಿಸಲು,

ರಮಣಿ:—ನನ್ನ ಗಂಡನು ಕಳೆದ ಎರಡು ವರ್ಷಗಳಿಂದ ಬೇನೆಯಿಂದ ತೊಳಲುತ್ತಿರುವನು. ಎಷ್ಟೋ ಜನ ವೈದ್ಯರಿಗೆ ತೋರಿಸಿದ್ದಾಯಿತು; ಔಷಧ ಕೊಡಿಸಿದ್ದಾಯಿತು; ಆದರೆ ಒಬ್ಬರಿಗೂ ಅವನ ಬೇನೆಯ ಪರೀಕ್ಷೆಯಾಗಲಿಲ್ಲ. ಒಬ್ಬರ ಔಷಧದಿಂದಲೂ ರೋಗವು ಹಿಮ್ಮೆಟ್ಟಲಿಲ್ಲ. ಒಬ್ಬೊಬ್ಬ ವೈದ್ಯರಾಜರು ಅವನಿಗೆ ಒಂದು ಪ್ರಕಾರದ ವಾಯುರೋಗವೆಂದರು. ಆ ಪ್ರಕಾರ ಉಪಚಾರವನ್ನೂ ಮಾಡಿದರು ಅವನಿಗೆ ಯಾರಿಂ-

ಹಲೂ ಗುಣವುುಖವಿಲ್ಲ ಬೇನೆಯು ದಿನೇ ದಿನೇ ಬೆಳೆಯುತ್ತಲೇಇದೆ ಮೊದ ಮೊದಲು ಅವನಿಗೆ ದಿನಕ್ಕೊಂದುಸಲ ಮೂರ್ಛೆ ಬರುತ್ತಿತ್ತು. ಇತ್ತೀಚೆಗೆ ದಿನಕ್ಕೆ ನಾಲ್ಕಾರು ಸಾರೆ ಬರಹತ್ತಿತು. ಈದಿನನಂತೂ ತಾಸು-ತಾಸಿಗೆ ಮೂರ್ಛೆ ಬರುತ್ತಲಿದೆ. ಮೊನ್ನೆ ಗೋಕರ್ಣ ಕ್ಷೇತ್ರದಿಂದ ನಮ್ಮಲ್ಲಿಗೆ ಒಬ್ಬ ಋಷಿಸದೃಶ ಮನುಷ್ಯನು, ಬಡವರ ಮನೆಗೆ ಭಾಗೀರಥಿಯು ಬಂದ ಹಾಗೆ ತಾನಾಗಿಯೇ ಬಂದಿದ್ದನು. ಅವನು ಈ ರೋಗಕ್ಕಾಗಿ ಒಂದು ಗಿಡಮೂಲಿಕೆಯನ್ನು ತೋರಿಸಿರುವನು. ನಿನ್ನೆ ಅದನ್ನು ಒಮ್ಮೆ ಉಪಯೋಗಿಸಿದ್ದೆನು. ಅದರಿಂದ ಎಷ್ಟೋ ಗುಣ ಕಂಡಿತು. ಅಂತೆಯೇ ನಾನಿಂದು ಪುನಃ ಆ ಗಿಡಮೂಲಿಕೆಯನ್ನು ಶೋಧಿಸುತ್ತ ಮನೆಯಿಂದ ಇಷ್ಟು ದೂರ ಬಂದೆನು; ಆದರೆ ನನ್ನ ದುರ್ದೈವದಿಂದ ಅದು ಇಂದು ನನಗೆ ಲಭಿಸಲೂ ಇಲ್ಲ; ರಾತ್ರಿಯಾದುದರಿಂದ ಮನೆಗೆ ತಿರುಗಿ ಹೋಗಲೂ ಸಾಧ್ಯವಾಗಲಿಲ್ಲ. ಅತ್ತ ನನ್ನ ಗಂಡನು ಮನೆಯಲ್ಲಿ ಬೆಳಿಗ್ಗೆಯೇ ಮೂರ್ಛೆಬಂದು ಬಿದ್ದಿರುವನು. ಅವನ ಗತಿಯು ಈಗೇನಾಗಿದೆಯೋ ದೇವರೇ ಬಲ್ಲ! ರಾಯರೇ, ಅಲ್ಲಿ ಏನಾದರೂ ಅವ್ಯವಸ್ಥೆಯಾಗಿದ್ದರೆ ನಾನು ನಿಮ್ಮನ್ನು ಅಲ್ಲಿಗೆ ಕರೆದೊಯ್ದಾದರೂ ಮಾಡುವದೇನು? ಅಂತೆಯೇ ನನಗೀಗ ಮರಣದ ಹೊರ್ತು ಏನೂ ಬೇಡಾಗಿದೆ. ಬಿಡಿರಿ, ನಾನೀಗ ಈ ಶರಾವತಿಯಲ್ಲಿ ಪ್ರಾಣವನ್ನು ನೀಗಿ ನನ್ನ ಗಂಡನ ಸೇವೆಗಾಗಿ ಪರಲೋಕಕ್ಕೆ ತೆರಳುವೆನು, ಎಂದಳು.

ಆ ಯುವತಿಯ ಆ ಕರುಣಾಪೂರ್ಣ ಸಂಗತಿಯನ್ನು ಕೇಳಿ, ಆ ನವ ತರುಣನಲ್ಲಿ ಅತಿಶಯವಾದ ಕನಿಕರವು ಹುಟ್ಟಿತು. ಅವಳ ಮಾತಿನಲ್ಲಿ ಆ ನಮ್ಮ ಧಾರವಾಡ ಪ್ರಾಂತದ ತರುಣನಿಗೆ ಅಸಂಭವವಾಗಲಿ, ಅಸತ್ಯವಾಗಲಿ ತೋರಲೇ ಇಲ್ಲ! ಕೂಡಲೆ ಅವನು ಆ ಪ್ರೌಢಳನ್ನು ಕುರಿತು:— ಭಗಿನೀ,ನೆ ವೈದ್ಯಕದಲ್ಲಿ ನನಗೂ ಅಲ್ಪ-ಸ್ವಲ್ಪ ಪರಿಶ್ರಮವಿದೆ. ನಾನು ಸದ್ಯಕ್ಕೆ ಮುಂಬಯಿಯ ನ್ಯಾಶನಲ್ ಮೆಡಿಕಲ್ ಸ್ಕೂಲಿನಲ್ಲಿ ಎಂ. ಬಿ. ಬಿ. ಎಸ್. ಪರೀಕ್ಷೆಯ ಕೊನೆಯ ವರ್ಷದ ಕ್ಲಾಸಿನಲ್ಲಿ ಓದುತ್ತಿದ್ದೇನೆ; ಹಾಗು ಊರಿಗೆ ಬಂದಾಗ ತಕ್ಕಮಟ್ಟಿಗೆ ಪ್ರಾಯವ್ಹೇಟ ಪ್ರ್ಯಾಕ್ಟೀಸನ್ನೂ ಮಾಡುತ್ತಿರುತ್ತೇನೆ. ಆದುದರಿಂದ ನಾನು ನಿನ್ನ ಸ್ವಾಮಿಯ ರೋಗ ನಿದಾನ ಮಾಡಿ, ಕೂಡಲೆ ಅವನಿಗೆ ತಕ್ಕ ಔಷಧಿಯನ್ನು ಯೋಜಿಸಬಲ್ಲೆನು. ನಡೆ,

ನಾನು ನಿನ್ನನ್ನು ನಿನ್ನ ಮನೆಗೆ ಕಳಿಸಿ, ನಿನ್ನ ಗಂಡನಿಗೆ ಔಷಧ ಕೊಟ್ಟು ಬರುತ್ತೇನೆ, ಎಂದು ಹೇಳಿ, ತನ್ನ ನಾವಿಕರನ್ನು ಕುರಿತು:—ಅಂಬಿಗರೇ, ನಾನು ಈ ರಮಣಿಯನ್ನು ಈಕೆಯ ಮನೆಗೆ ಮುಟ್ಟಿಸಿ ತೀವ್ರವೇ ಬರುವೆನು. ಅಲ್ಲಿಯವರೆಗೆ ನೀವು ಇಲ್ಲಿಯೇ ವಿಶ್ರಮಿಸಿರಿ. ಈ ತಾಸೆರಡು ತಾಸಿನ ವಿಲಂಬಕ್ಕಾಗಿ ನೀವು ನನ್ನಿಂದ ಇನ್ನಿಷ್ಟು ಪುರಸ್ಕಾರವನ್ನು ಪಡೆಯುವಿರಿ, ಎಂದನು.

ಅದನ್ನು ಕೇಳಿ ಆ ಡೋಣಿಯ ಮುಖ್ಯಸ್ಥನಾದ ಅಂಬಿಗರ ಸಂಜೀವನು ಆ ಉದಾರ ತರುಣನಿಗೆ:—ರಾಯರೇ, ನೀವು ಇಂಥ ಸಾಹಸಕ್ಕೆ ಹೋಗುವದು ಸರಿಯಲ್ಲ. ಈ ರಮಣಿಯು ಯಾರು? ಈಕೆಯ ಮನೆಯು ಎಲ್ಲಿದೆ? ಇವಳ ಮಾತಿನಲ್ಲಿ ಮೋಸವೇನಾದರೂ ಇದೆಯೋ ಹ್ಯಾಗೆ? ಮುಂತಾದುದೊಂದನ್ನೂ ಒರೆಹಚ್ಚದೆ, ಹೀಗೆ ಅಂಧವಿಶ್ವಾಸದಿಂದ ಈ ಅಪರಾತ್ರಿಯಲ್ಲಿ, ಅಪರಿಚಿತ ಸ್ಥಳದಲ್ಲಿ ಇವಳೊಡನೆ ಹೊರಡುವದು ನಮಗೆಂತೂ ಸರಿ ಕಾಣುವದಿಲ್ಲ. ಆದುದರಿಂದ ನೀವು ಬೇಗನೆ ಡೋಣಿಯನ್ನು ಹತ್ತಿರಿ; ನಾವು ಆಚೇ ಧಡಕ್ಕೆ ಹೋಗಿ ನಮ್ಮ ನಮ್ಮ ಬಿಡಾರಗಳನ್ನು ಸೇರಿ, ಸುಖವಾಗಿ ನಿದ್ರೆ ಮಾಡೋಣ, ಎಂದನು.

ಆ ತರುಣನಿಗೆ ಆ ಅಂಬಿಗರ ನುಡಿಯು ರುಚಿಸಲಿಲ್ಲ. ಯಾವ ಕಾರಣದಿಂದಲೋ, ಅಷ್ಟು ಮುಚ್ಚುಮರೆ ಏಕೆ, ಬಲವಾದ ಸ್ತ್ರೀದಾಕ್ಷಿಣ್ಯದ ಮೂಲಕ ಅವನು ಅಲ್ಲಿ ಹೆಚ್ಚು ವೇಳೆಗಳೆಯದೆ, ಆ ರಮಣಿಯೊಡನೆ ಆ ಮಾವಿನ ತೋಪಿನ ಕಡೆಗೆ ಲಗುಬಗೆಯಿಂದ ನಡೆದೇಬಿಟ್ಟನು. ಹೋಗುವಾಗ ಅವನು ಆ ನಾವಿಕರನ್ನು ಕುರಿತು ಮತ್ತೆ:—ನಾನು ಬರುವವರೆಗೆ ನೀವು ಇಲ್ಲಿಯೇ ಡೋಣಿ ಸಹಿತವಾಗಿ ಇರ್ರಿ. ಅಂದರೆ ನಿಮಗೆ ನಿಮ್ಮ ಇಚ್ಛೆಯಂತೆ ಇನಾಮು ಸಿಗುವದು, ಎಂದು ಹೇಳಿದನು.

ಅವನ ಆ ನುಡಿಯನ್ನು ಕೇಳಿ ನಾವಿಕರಿಗೆ ಪರಮ ಸಂತೋಷವೆನಿಸಿದರೂ, ಈ ಉದಾರ ತರುಣನು ಈ ಅಪರಿಚಿತ ರಮಣಿಯ [illegible]ಯಿಂದ ಪಾರಾಗಿ ಬರುವದು ದುಸ್ತರವೇ ಸರಿ! ಎಂದು ಅವರೆಲ್ಲರೂ ಉ[illegible]ಳಿದರು!

ನದೀತೀರದಿಂದ ಹೊರಟ ಆ ಯುವತಿ-ಯುವಕರು ವೇಗದಿಂದ ಆ ಮಾವಿನ ತೋಪಿನ ಕಡೆಗೆ ನಡೆದರು. ಅಲ್ಲಿಯ ವರೆಗೆ ದಾರಿಯಲ್ಲಿ ಹೆಚ್ಚಾಗಿ ಗಿಡ-ಗಂಟೆಗಳಿರಲಿಲ್ಲ; ಅದರಿಂದ ದಾರಿಯೂ ಶೀಘ್ರವಾಗಿ ಕ್ರಮಿಸಿತು.

ಬೇಗ-ಬೇಗನೆ ದಾರೀ ನಡೆಯುವದರ ಕಡೆಗೇ ಅವರಿಬ್ಬರ ಲಕ್ಷ್ಯವಿದ್ದದ ರಿಂದ ನಡುವೆ ಯಾರೂ ಮಾತಾಡಲಿಲ್ಲ, ಸ್ವಲ್ಪ ಹೊತ್ತಿನಲ್ಲಿ ಆ ನಿಬಿಡವಾದ ಮಾವಿನ ತೋಪು ಬಂತು. ಅಲ್ಲಿ ದೊಡ್ಡ ದೊಡ್ಡ ವೃಕ್ಷಗಳು ಶ್ರೇಣಿಗೊಂಡಿ ದ್ದವಾದ್ದರಿಂದ, ಆ ಚಂದ್ರಪ್ರಕಾಶ ವಿಹೀನವಾದ ರಜನಿಯಲ್ಲಿ ಆ ತೋಪಿ ನಲ್ಲಿ ಘನವಾದ ಅಂಧಕಾರವು ನೆಲಿಸಿತ್ತು; ಅದರಿಂದ ಆ ರಮಣಿಯು ಆ ಕಾಲು ದಾರಿಯನ್ನು ಹಿಡಿದು, ಮುಂದೆ ಮುಂದೆ ನಡೆದಿದ್ದಳು. ಅವಳ ಸುಳುವಿನಿಂದ ಆ ತರುಣನು ಅವಳನ್ನನುಸರಿಸಿ ನಡೆದಿದ್ದನು.

ಆ ತರುಣನು ಸರಾಸರಿ ೨೨ ವರ್ಷದವನಿರಬಹುದು. ಅವನ ಮು-ಖವು ಸುಂದರ; ಮೈಬಣ್ಣವು ಅಷ್ಟೊಂದು ಸ್ವರ್ಣವರ್ಣದ್ದಿದ್ದಿಲ್ಲ. ಧಾರ ವಾಡ ಪ್ರಾಂತದ ಹವಾಮಾನಕ್ಕನುಗುಣವಾಗಿ ನಾದಗಪ್ಪಿನದಿತ್ತು; ಆದರೆ ಅದರಿಂದ ಅವನ ರೂಪ-ಸೌಂದರ್ಯಗಳಿಗೆ ಕೊರತೆಯುಂಟಾಗದೆ, ಒಂದು ಬಗೆಯ ಹೊಳಪೇ ತೋರುತ್ತಿತ್ತು. ಆಗಲೆ ಅಲ್ಪ-ಸ್ವಲ್ಪಾಗಿ ಒಡೆದಿರುವ ಮೀಸೆಗಳು ಅವನ ತುಟಿಯನ್ನಲಂಕರಿಸಿದ್ದವು. ಅಚ್ಚ ಕಪ್ಪುಬಣ್ಣದ ಕ್ರಾಪಿನ ಕೂದಲುಗಳಿಂದ ಅವನ ವಿಶಾಲವಾದ ಹಣೆಗೂ ಮುಖಶ್ರೀಗೂ ಶೋಭೆಯುಂಟಾಗಿದ್ದಿತು. ಅವನು ಅಷ್ಟೊಂದು ಎತ್ತರಿದ್ದಿಲ್ಲ; ತೀರ ಪುಡಿ ಯಾಳೂ ಆಗಿರಲಿಲ್ಲ. ಅವನ ದೇಹವು ಹೆಚ್ಚಾಗಿ ಸೊಕ್ಕಿದಂತೆ ತೋರುತ್ತಿರ ದಿದ್ದರೂ; ಕೇವಲ ಶಕ್ತಿಹೀನ ಬಡಕನಂತಿರಲಿಲ್ಲ. ಅವನ ಮೈ-ಕೈಗಳೆಲ್ಲ ಯೋಗ್ಯ ಪ್ರಕಾರದ ಅಂಗಸಾಧನಗಳಿಂದ ಪ್ರಮಾಣಬದ್ಧವಾಗಿದ್ದವು. ಅವನ ಕಣ್ಣು-ಮೂಗು-ಮುಖಚರ್ಯೆಗಳನ್ನು ದಿಟ್ಟಿಸಿ ನೋಡಿದವರಿಗೆ ಇವನು ಸಾಮಾನ್ಯ ಮನುಷ್ಯನಾಗಿರದೆ, ಒಳ್ಳೇ ಚತುರನೂ, ಸಾಹಸಿಗನೂ, ಉದಾರನೂ ಆಗಿರುವನೆಂದು ತಟ್ಟನೆ ಒಡೆದು ಕಾಣುತ್ತಿತ್ತು.

ಅವರಿಬ್ಬರೂ ಎಷ್ಟೋ ಹೊತ್ತು ದಾರಿ ನಡೆದು ಆ ವಿಶಾಲವಾದ ಮಾವಿನ ತೋಪನ್ನು ದಾಟಿ, ಒಂದು ಕಿರಿಗಂಟೆಯ ಅಡವಿಯನ್ನು ಸೇರಿ ದರು. ಅಲ್ಲಿಯೂ ಸೀಳುದಾರಿಯಿಂದಲೇ ಅವರಿಬ್ಬರು ಸಾಗಿದ್ದರು. ದಾರಿ ಕಾಣದೆ ಮುಗ್ಗರಿಸುವದರಿಂದಲೋ ಮತ್ತಾವ ಕಾರಣದಿಂದಲೋ ಆ ರಮಣಿಯ ಸೆರಗು ಹಲಕೆಲವು ಸಾರೆ ಆ ತರುಣನಿಗೆ ತಾಕಿತು. ಒಂದೆ ರಡು ಸಾರೆ ಅವಳ ಕೈಯೂ ಆತನ ಹೃದಯಕ್ಕೆ ತಗಲಿತು. ಬೆಂಕಿಯ ಬಳಿಯಲ್ಲಿಟ್ಟ ಬೆಣ್ಣೆಯು ಹೇಗೆ ತನ್ನಷ್ಟಕ್ಕೆ ತಾನೇ ಕರಗಿ ನೀರಾಗುವದೋ,

ಲೋಹಚುಂಬಕವು ಕಬ್ಬಿಣವನ್ನು ಹೇಗೆ ಬಲವಾಗಿ ತನ್ನೆಡೆಗೆ ಎಳೆಕೊಳ್ಳು ವದೋ ಹಾಗೆ, ಆ ನಿರ್ಜನ ಪ್ರದೇಶದಲ್ಲಿ ಆ ರಮಣಿಯು ಅಂಗಸ್ಪರ್ಶದಿಂದ ಆ ನವತರುಣನ ಶರೀರವು ತನ್ನಷ್ಟಕ್ಕೆ ತಾನೇ ಪುಳುಕಿತವಾಗಲಾರಂಭಿ ಸಿತು. ಮೊದಮೊದಲು ಅವಳ ಸೆರಗು ಬಡಿದಾಗ, ಕೈ ತಾಕಿದಾಗ ಆ ತರುಣನು ಮನದಲ್ಲಿ ಅಂಜಿ ತುಸ ಸಾವಕಾಶವಾಗಿ ನಡೆದು, ಅವಳಿಂದ ಶಕ್ಯವಿದ್ದಷ್ಟು ದೂರ ಇರಲಿಕ್ಕೆ ಪ್ರಯತ್ನಿಸುತ್ತಿದ್ದನು; ಆದರೆ ಬರಬರುತ್ತ ಅವನಿಗೆ ಅದೊಂದು ಇಷ್ಟ ವಿಷಯವೇ ಆಗಿ, ಅವನು ಶಕ್ಯವಾದಷ್ಟು ಅವ ಳಿಗೆ ಹೊಂದಿಯೇ ನಡೆಯಲಾರಂಭಿಸಿದನು. ಎಂಥ ಧೀರ ವೀರನಾದರೂ ತಾರುಣ್ಯದಲ್ಲಿ ಸ್ತ್ರೀ-ವ್ಯಾಮೋಹಕ್ಕೆ ಸಿಲುಕದಿರುವದು ದುಸ್ತರವೇ ಸರಿ!

ಎಷ್ಟೋ ಹೊತ್ತು ದಾರೀ ಕ್ರಮಿಸಿದರೂ ಒಬ್ಬರೂ ಪಿಟ್ಟೆಂದು ಮಾತಾಡುತ್ತಿರಲಿಲ್ಲ. ಈ ದೀರ್ಘವಾದ ಮೌನವು ಮೊದಲೇ ಆ ರಮ ಣಿಯ ವಿಷಯಕ್ಕಾಗಿ ಹೆಚ್ಚಾಗಿ ಆದರ ಭಾವವನ್ನು ಧರಿಸಿದ್ದ ಆ ತರುಣ ನಿಗೆ ಸಹನವಾಗದೆ ಕಡೆಗೆ ಅವನು ಅವಳನ್ನು ಕುರಿತು:—ಭಗಿನೀ, ನಿನ್ನ ಮನೆಯು ಸಮೀಪದಲ್ಲೇ ಇದೆಯೆಂದು ನೀನು ಹೇಳಲಿಲ್ಲವೇ? ಆ ಮಾವಿನ ತೋಟವು ಹೋಗಿ ಎಷ್ಟೋ ಹೊತ್ತಾಯಿತು. ನಿನ್ನ ಮನೆಯು ಇನ್ನೂ ಎಷ್ಟು ದೂರವಿದೆ? ಈ ಕಾಲುದಾರಿಯು ಯಾವ ದಿಕ್ಕಿನ ಕಡೆಗೆ ನಡಿದಿದೆ ಯೆಂಬದನ್ನು ನಾನೀಗ ನಿಷ್ಕರ್ಷಿಸಲಾರೆನು. ಹೊಳೆಯ ದಂಡೆಯಿಂದ ಹೊರಟಾಗ ನಾವು ದಕ್ಷಿಣ ದಿಸೆಯನ್ನು ಹಿಡಿದು ಬಂದಿದ್ದರೂ ನಡುವೆ ನಾವು ಪೂರ್ವ ಪಶ್ಚಿಮ ಉತ್ತರ ದಿಕ್ಕುಗಳ ಕಡೆಗೆ ಹಲವು ಸಾರೆ ಹೊರಳಿ ರುವೆವು. ನಾವು ದಾರಿತಪ್ಪಿ ನಡೆದಿಲ್ಲವಷ್ಟೇ? ಎಂದು ಪ್ರಶ್ನಮಾಡಿದನು.

"ನಾವು ಈಗ ಪಶ್ಚಿಮಾಭಿಮುಖವಾಗಿ ನಡೆದಿದ್ದೇವೆ ಇನ್ನು ಸ್ವಲ್ಪ ದಾರಿ ಕ್ರಮಿಸಿದೆವೆಂದರೆ ನಮ್ಮ ಚಿಕ್ಕತೋಟವು ಹತ್ತುವದು. ಅಲ್ಲಿಗೆ ಹೋದಬಳಿಕ ನಮ್ಮ ಬಂಗ್ಲೆಯು ಕಾಣುವದು! ಅಯ್ಯೋ ಇಷ್ಟೊತ್ತಿಗೆ ನನ್ನ ಗಂಡನ ಅವಸ್ಥೆಯು ಏನಾಗಿದೆಯೋ?" ಎಂದವಳೇ ಅವಳು ನಡು ದಾರಿಯಲ್ಲೇ ತಟ್ಟನೆ ನಿಂತುಬಿಟ್ಟಳು; ಆದರಿಂದ ಸ್ವಾಭಾವಿಕ ನಡಿಗೆಯಿಂದ ಅವಳನ್ನನುಸರಿಸಿ ಬರುತ್ತಿದ್ದ ಆ ತರುಣನು, ಒಮ್ಮೆಲೆ ಬಂದು ಅವಳಿಗೆ ತಾಕಲಾಡಿದನು. ಈ ಆಕಸ್ಮಿಕ ಘರ್ಷಣ ಯೋಗದಿಂದ ಆ ತರುಣನ ದೇಹವು ಮತ್ತಿಷ್ಟು ಪುಳುಕಿತವಾಯಿತು! ಹೀಗೆ ತಾಕಲಾಡಿದ್ದಕ್ಕೆ ಈ

ತರುಣಿಯು ತನಗೇನು ಅನ್ನುವಳೋ ಎಂದು ಭಾವಿಸಿ, ಅವನು ಮನಸ್ಸಿನಲ್ಲಿ ನೊಂದುಕೊಂಡನು; ಆದರೆ ಆ ರಮಣಿಯು ಆ ಬಗ್ಗೆ ಅವನಿಗೇನೂ ದೋಷಕೊಡದೆ, ಮತ್ತೆ ದಾರಿಹಿಡಿದು ನಡೆದಳು.

ಮುಂದೆ ತುಸಹೊತ್ತಿನಲ್ಲಿ ಅವರೀರ್ವರೂ ಆ ರಮಣಿಯ ಬಂಗ್ಲೆಗೆ ತಲುಪಿದರು. ಅದು ಒಂದು ನಿಬಿಡವಾದ ಪುಟ್ಟ ತೋಟದೊಳಗಿತ್ತು. ಆ ತೋಟದೊಳಗೆ ದೊಡ್ಡ ದೊಡ್ಡ ಮಾವಿನ ಗಿಡಗಳು, ತೆಂಗಿನ ಮರಗಳು, ಬಾಳೆಯ ಗಿಡಗಳು, ನಾನಾಬಗೆಯ ಹೂವಿನ ಗಿಡಬಳ್ಳಿಗಳು ಒಂದಕ್ಕೊಂದು ಸುತ್ತುವರಿದು ಒಳ್ಳೇ ದಟ್ಟವಾಗಿ ಬೆಳೆದಿದ್ದವು; ಆದರಿಂದ ತೀರ ಸಮೀಪಕ್ಕೆ ಹೋಗುವವರೆಗೂ ಆ ಬಂಗ್ಲೆಯು ಕಾಣುತ್ತಿರಲಿಲ್ಲ. ಮೇಲಾಗಿ ಅವರು ಅಲ್ಲಿಗೆ ಹೋದಾಗ ಮಧ್ಯರಾತ್ರಿಯ ಸಮಯ. ಅಂದಮೇಲೆ ಅಲ್ಲಿಯ ಕತ್ತಲೆಯನ್ನೇನು ವರ್ಣಿಸುವದದೆ?

ಬಂಗ್ಲೆಯು ಸಮೀಪಿಸಿದ ಕೂಡಲೆ ತರುಣನು:—ಈ ಬಂಗ್ಲೆಯು ನಿಮ್ಮದೇ ಏನು? ಎಂದು ಆ ರಮಣಿಗೆ ಪ್ರಶ್ನಮಾಡಲು, ಅವಳು ಅವನಿಗೆ ಉತ್ತರವನ್ನು ಕೊಡದೆ, ತಲೆಯುಲ್ಲಾಡಿಸಿ ಸಮ್ಮತಿಯನ್ನಿತ್ತಳು. ಬಳಿಕ ಅವಳು:—ಬಹಳ ರಾತ್ರಿಯಾದುದರಿಂದ ನಮ್ಮ ಮನೆಯ ಆಳುಗಳೆಲ್ಲ ಎಲ್ಲೋ ಮಲಗಿಬಿಟ್ಟದ್ದಾರೆ. ಮನೆಯ ಯಜಮಾನರೇ ಜಡ್ಡಿನಿಂದ ಮಲಗಿದ ಬಳಿಕ ಆ ಸೇವಕರನ್ನು ಆತಂಕದಲ್ಲಿಟ್ಟುಕೊಳ್ಳುವವರಾರು? ಎಂದು ನುಡಿದು ಆ ಬಂಗ್ಲೆಯ ಇಕ್ಕಿದ ತಲೆಬಾಗಿಲವನ್ನು ಗಟ್ಟಿಯಾಗಿ ದೂಡಿದಳು. ಅದು ಕಿರ್ರರ್ರ ಎಂದೆನ್ನುತ್ತ ತೆರೆಯಿತು. ಅದರಿಂದ ಅವಳಿಗೆ ಒಂದು ಬಗೆಯ ಹಾಯ್ ಎನಿಸಿದ ಹಾಗಾಯಿತು. ಆಗ ಯುವಕನು ಅವಳಿಗೆ:- ನೀವು ಒಳಗೆ ಹೋಗಿ ಅವರಿಗೆ ಹೇಗಿದೆಯೆಂಬದನ್ನು ನೋಡಿಕೊಂಡು ಬರ್ರಿ. ನಾನು ಇಲ್ಲಿಯೇ ನಿಂತಿರುತ್ತೇನೆ, ಎಂದಂದನು.

ಅದಕ್ಕೆ ಆ ರಮಣಿಯು ಅಸಮ್ಮತಿಯನ್ನಿತ್ತು:—ಛೇ-ಛೇ! ನನಗಾಗಿ ತಾವು ಇಷ್ಟು ದಾರಿ ಕ್ರಮಿಸಿ ಬಂದು, ಈ ನನ್ನ ಮನೆಯ ಹೊರಗೆ ನಿಲ್ಲಬೇಕೇ? ಇದು ನನಗೂ ತಮಗೂ ಕೂಡಿಯೇ ಲಾಂಛನಾಸ್ಪದವು. ತಾವು ನನ್ನೊಡನೆ ಒಳಗೆ ನಡೆಯಿರಿ; ಆದರೆ ಒಳಗೆ ದೀಪದ ಬೆಳಕೆಲ್ಲೂ ಕಾಣಲೊಲ್ಲದು. ಆ ನೀಚ ಸೇವಕರು ಎತ್ತ ಮಲಗಿರುವರೋ ಯಾರಿಗೆ ಗೊತ್ತು? ಅವರನ್ನು ಶೋಧಿಸಿ ದಂಡಿಸುವ ಸಮಯವಿದಲ್ಲ. ತಾವು

ನನ್ನ ಕೈಹಿಡಿದು ನನ್ನೊಡನೆ ಬಂದುಬಿಡಿರಿ. ನಾನು ತಮ್ಮನ್ನು ನನ್ನ ಗಂಡನು ಬಿದ್ದುಕೊಂಡಿರುವ ಕೋಣೆಗೆ ಒಯ್ಯುತ್ತೇನೆ. ಅಲ್ಲಿ ದೀಪವಿದ್ದೇ ಇರುವದು. ಇರದಿದ್ದರೂ ನಾನು ಹಚ್ಚುವೆನು, ಎಂದಂದು ಆ ಯುವಕನ ಉತ್ತರದ ದಾರಿ ಕೂಡ ನೋಡದೆ ಅವನ ಕೈ ಹಿಡಿದು ನಡೆದಳು.

ನಮ್ಮ ಆ ತರುಣನು ಮೊದಲೇ ಉನ್ಮತ್ತನು. ಅವನ ಲಗ್ನವಿನ್ನೂ ಆಗಿರಲಿಲ್ಲ. ಅದರಿಂದ ಸ್ತ್ರೀಶರೀರ ಸಂಪರ್ಕದ ಅನುಭವವು ಅವನಿಗೆ ಸ್ವಲ್ಪ ಕೂಡ ಇರಲಿಲ್ಲ. ಅದರಲ್ಲಿಯೂ ಆ ಮಧ್ಯರಾತ್ರಿಯ ಕತ್ತಲಲ್ಲಿ, ಆ ಅಪರಿಚಿತ ನಿರ್ಜನ ಸ್ಥಳದಲ್ಲಿ, ಆ ಸುಮಿಷ್ಟ-ಸುಂದರ-ಸುಕೋಮಲೆಯ ಆಕಸ್ಮಿಕ ಹಸ್ತಸ್ಪರ್ಶದಿಂದ ಅವನ ಮೈಯೆಲ್ಲ ಥರಗುಟ್ಟಿ ನಡುಗಿತು. ಬೆವರಿನಿಂದ ಆಪಾದ-ಮಸ್ತಕದ ವರೆಗಿನ ಅವನ ದೇಹವು ಆರ್ದ್ರವವಾಯಿತು. ಆಗೆ ಕೆಲವುಟ್ಟಿಗೆ ಅವನ ಶಕ್ತಿಪಾತವೂ ಆದಂತಾಯಿತು. ಅದರಿಂದಲೂ, ನಿಬಿಡವಾದ ನಾರೀ ದಾಕ್ಷಿಣ್ಯದಿಂದಲೂ ಅವಳ ಕೈಯೊಳಗಿನ ತನ್ನ ಕೈಯನ್ನು ಬಿಡಿಸಿಕೊಳ್ಳುವದು ಅವನಿಗೆ ದುಸ್ತರವೆನಿಸಿತು!

ಹೀಗೆ ಅವರೀರ್ವರೂ ಆ ಕಾರ್ಗತ್ತಲೆಯಲ್ಲಿ ಹಲವು ಸಾರೆ ಹಲವು ಪಾವಟಿಗೆಗಳನ್ನೇರಿ, ಇಳಿದು, ಕಡೆಗೆ ಒಂದು ಅಚ್ಚುಕಟ್ಟಾದ ಕೋಣೆಗೆ ಹೋದರು. ಅಲ್ಲಿ ಒಂದು ಮೂಲೆಯಲ್ಲಿ ಒಂದು ದೀಪವು ಮಿಣುಕು-ಮಿಣುಕಾಗಿ ಉರಿಯುತ್ತಿದ್ದು, ಒಬ್ಬ ಪುಷ್ಟಕಾಯದ ಮನುಷ್ಯನು ಚಪ್ಪರ ಪಲ್ಲಂಗದ ಮೇಲೆ ಗೊರಕೆ ಹೊಡೆಯುತ್ತ ಮಲಗಿಕೊಂಡಿದ್ದನು. ಅದನ್ನು ಕಂಡು ಆ ನಮ್ಮ ತರುಣನಿಗೆ ಪರಮ ವಿಸ್ಮಯವಾಯಿತು. ಆ ಮನುಷ್ಯನಾರು, ಆ ರಮಣಿಯಾರು? ಎಂಬ ಬಗ್ಗೆ ಆ ತರುಣನಂತೆ ನಮ್ಮ ವಾಚಕರಿಗೂ ಜಿಜ್ಞಾಸೆಯುಂಟಾಗಿರಬಹುದು; ಆದರೆ ಅದನ್ನೆಲ್ಲ ಇಲ್ಲಿ ಹೇಳುತ್ತ ಕೂಡ್ರದೆ, ಆ ರಮಣಿಯೊಡನೆ ಬಂದ ಆ ತರುಣನಾರೆಂಬದನ್ನಷ್ಟೇ ಇಲ್ಲಿ ತಿಳಿಸಿ, ಈ ಪ್ರಕರಣವನ್ನು ಮುಗಿಸುವೆವು.

ಆ ನಮ್ಮ ಧಾರವಾಡ ಪ್ರಾಂತದ ತರುಣನು ಬೇರೆ ಯಾರೂ ಆಗಿರದೆ, ಈ ಕಾದಂಬರಿಯ ನಾಯಕಿಯಾದ ಅಂಬಿಕೆಯ ನಿಯೋಜಿತಪತಿಯು, ಡಾ|| ಮನೋಹರನು; ಧಾರವಾಡ ಜಿಲ್ಲೆಯೊಳಗಿನ ಹಾನಗಲ್ಲಲ್ಲಿದ್ದ ವಸಂತರಾಯ ದೇಸಾಯರ ಮಗನು.



## ೧೬ ವಿಶ್ವಾಸಘಾತ!

ಆ ರಮಣಿಯು ಆ ಮಲಗಿದ ಮನುಷ್ಯನ ಮುಖವನ್ನು ನೋಡಿದ ವಳೇ ಅಳುವ ದನಿಯಿಂದ ಡಾಕ್ಟರ-ಮನೋಹರನನ್ನು ಕುರಿತು:—"ಮಹಾನುಭಾವರೇ, ಬೇಗನೆ ಇತ್ತ ಬನ್ನಿರಿ. ಈ ವರೆಗೆ ನಾನು ಯಾತಕ್ಕಾಗಿ ಹೆದರುತ್ತಿದ್ದೆನೋ ಅದೇ ಸ್ಥಿತಿಯು ಇಲ್ಲಿ ಪ್ರಾಪ್ತವಾಗಿಬಿಟ್ಟದೆ. ಇವರು ಹೀಗೆ ಮೂರ್ಛೆ ಹೊಂದಿ ಎಷ್ಟೊತ್ತಾಗಿದೆಯೊ ಯಾರು ಬಲ್ಲರು? ಅಯ್ಯೋ ದೇವರೇ! ಇನ್ನು ಇವರ ಗತಿಯು ಏನಾಗುವದೋ" ಎಂದಂದು ಮೋರೆಯ ಮೇಲೆ ಸೆರಗು ಜಗ್ಗಿಕೊಂಡಳು.

ಮನೋಹರ:—"ಅಂಜಬೇಡಿರಿ, ಅಷ್ಟು ಅಂಜುವ ಕಾರಣವಿಲ್ಲ" ಎಂದೆನ್ನುತ್ತ ಆ ರೋಗಿಯ ಹತ್ತರವಿದ್ದ ದೀಪವನ್ನು ಪ್ರಕಾಶಮಾನವಾಗಿ ಮಾಡಿ, ಆ ರೋಗಿಯ ಎರಡೂ ಕಣ್ಣುಗಳ ರೆಪ್ಪೆಗಳನ್ನು ತೆರೆತೆರೆದು ನೋಡಿದನು. ಅವುಗಳೊಳಗಿನ ಗೊಂಬೆಗಳು ಆ ಉಜ್ವಲ ದೀಪದ ಬೆಳಕಿಗೆ ಕೊಂಚವೂ ಅಲ್ಲಾಡಲಿಲ್ಲ ಅದರಿಂದ ಇವನು ನಿಜವಾದ ರೋಗಿಯಲ್ಲೆಂದೂ, ರೋಗಿಯ ನಟಣೆಯನ್ನು ಉತ್ಕೃಷ್ಟವಾಗಿ ಮಾಡುವನೆಂದೂ ಮನೋಹರನ ಖಾತ್ರಿಯಾಯಿತು; ಆದರೆ ಹಾಗೆಂದು ಆ ರಮಣಿಗೆ ತಿಳಿಸುವ ಧೈರ್ಯವು ಅವನಿಗೆ ಉಂಟಾಗಲಿಲ್ಲ ಅದರಿಂದ ಆ ದೀಪವನ್ನು ರೋಗಿಯ ಮುಖದ ಹತ್ತರ ತರಲಿಕ್ಕೆ ಆ ರಮಣಿಗೆ ತಿಳಿಸಿದನು. ಅದರಂತೆ ಅವಳು ತರಲು, ಮನೋಹರನು ಆ ರೋಗಿಯ ಒಂದು ಕಣ್ಣನ್ನು ಮುಚ್ಚಿ ಇನ್ನೊಂದು ಕಣ್ಣಿನ ಗುಡ್ಡಿಗೆ ಉಗುರಿನಿಂದ ಚುಚ್ಚ ಹೋಗಲು, ಆ ರೋಗಿಯು ತಟ್ಟನೆ ಕಣ್ಣು ಮುಚ್ಚಿಕೊಂಡನು. ಅದರಿಂದ ಅವನ ಠಕ್ಕತನವು ಮತ್ತಿಷ್ಟು ವ್ಯಕ್ತವಾಗಲು, ಮನೋಹರನು ನಸುನಕ್ಕನು.

ಕೈಯಲ್ಲಿ ದೀಪವನ್ನು ಹಿಡಿದಿದ್ದ ಆ ರಮಣಿಯು ಒಳ್ಳೇ ಕಷ್ಟದಿಂದ ಉಸಿರ್ಗರೆದು:-ಮಹಾಶಯರೇ, ಇವರಿಗೆ ಏನಾಗಿದೆಯೆಂದು ನಿರ್ಧರಿಸಿದಿರಿ?

"ಇವರಿಗೆ ವಿಶೇಷವೇನೂ ಆಗಿಲ್ಲ. ನಾನು ಇವರ ರೋಗವನ್ನು ಸಹಜವಾಗಿ ನಿವಾರಿಸುವೆನು"

"ಈಗ ಏನು ಮಾಡಿದರೆ ಇವರಿಗೆ ಸ್ಮೃತಿಯುಂಟಾದೀತು?"

ಆಗ ಆ ರಮಣಿಗೆ ಏನು ಉತ್ತರ ಕೊಡಬೇಕೆಂಬದನ್ನು ಮನೋಹರನು ಮನಸ್ಸಿನಲ್ಲಿಯೇ ಆಲೋಚಿಸಹತ್ತಿದನು. ಕೆಲಕ್ಷಣಗಳನಂತರ ಅವನು:—ಇವರಿಗೆ ಈ ಅಪರಾತ್ರಿಯಲ್ಲಿ ಬೇರೆ ಯಾವ ಉಪಾಯವನ್ನೂ ಮಾಡಲಿಕ್ಕೆ ಸಾಧ್ಯವಾಗುವದಿಲ್ಲ. ಈಗ ಇವರ ಮುಖದ ಮೇಲೆ ಆಗಾಗ್ಗೆ ತಣ್ಣೀರನ್ನು ಸಿಂಪಡಿಸುತ್ತ ಗಾಳಿ ಬೀಸಬೇಕು; ಅಂದರೆ ಅದರಿಂದ ಇವರಿಗೆ ತೀವ್ರವೇ ಸ್ಮೃತಿಯುಂಟಾಗಬಹುದು. ಈ ಕೆಲಸಕ್ಕಾಗಿ ಈಗಲೇ ನಿಮ್ಮೊಬ್ಬ ಸೇವಕನನ್ನು ನೇಮಿಸಿರಿ, ಎನ್ನಲು, ಆ ರಮಣಿಯು ಅವನ ಮಾತಿಗೆ ಸಮ್ಮತಿಸೂಚಕವಾಗಿ ಗೋಣು ಅಲ್ಲಾಡಿಸುತ್ತ, ಆ ಕೋಣೆಯಿಂದ ಬೇರೆ ಕಡೆಗೆ ಭರದಿಂದ ಹೊರಟು ಹೋದಳು.

ಆ ಹೆಣ್ಣುಮಗಳು ಹೋಗಿ ಎಷ್ಟೋ ಹೊತ್ತಾಯಿತು; ಆದರೂ ಅವಳು ಮರಳಿ ಬರಲಿಲ್ಲ. ಕುಳಿತು ಕುಳಿತು ಮನೋಹರನಿಗೆ ಬೇಸರಿಕೆ ಬಂದಿತು ಆಗ ಅವನು ಅಲ್ಲಿಂದೆದ್ದು ಹೋಗಬೇಕೆನ್ನುವಷ್ಟರಲ್ಲಿ ಆ ರೋಗಿಯು ಒಮ್ಮೆ ಗಟ್ಟಿಯಾಗಿ ಆಕಳಿಸಿದನು. ಡಾ. ಮನೋಹರನು ಅವನ ಕಡೆಗೆ ಹೊರಳಿ ನೋಡಲು, ಅವನು ಮತ್ತೂ ಒಮ್ಮೆ ಆಕಳಿಸಿದನು ಹೀಗೆ ೨-೩ ಸಾರೆ ಆಕಳಿಸಿದನಂತರ ಗಾಢವಾದ ನಿದ್ರೆಯಿಂದ ಎಚ್ಚತ್ತವನಂತೆ ಆ ರೋಗಿಯು ತಟ್ಟನೆ ಎದ್ದು ಹಾಸಿಗೆಯ ಮೇಲೆ ಕುಳಿತನು; ಹಾಗು ಕಣ್ತೆರೆದು ಮನೋಹರನ ಕಡೆಗೆ ಕೆಲಕಾಲ ದಿಟ್ಟಿಸಿ ನೋಡಿ:—ರಾಯರೇ, ನೀವು ಯಾರು? ನಿಮ್ಮನ್ನು ಎಲ್ಲಿಯೋ ನೋಡಿದಂತೆ ಇದೆ; ಆದರೆ ಎಲ್ಲಿ, ಯಾರು ಎಂಬದು ನೆನಪಾಗಲೊಲ್ಲದು. ನೀವು ಯಾರು? ನಿಮ್ಮ ಹೆಸರೇನು?

ಮನೋಹರ:—ನನ್ನ ಹೆಸರು ಡಾಕ್ಟರ ಮನೋಹರ.

ರೋಗಿ:—ಡಾ ಮನೋಹರರಾಯರೇ, ತಮ್ಮ ಊರು ಯಾವದು? ತಾವು ಇಲ್ಲಿಗೆ ಹೀಗೆ ಆಕಸ್ಮಿಕವಾಗಿ ಬಂದ ಕಾರಣವೇನು?

ಮನೋ:—ನಾನು ಧಾರವಾಡ ಜಿಲ್ಲೆಯೊಳಗಿನ ಹಾನಗಲ್ಲಿನವನ ಇಂದು ರಾತ್ರಿ ತಮ್ಮ ಹೆಂಡತಿಯು ಸಮೀಪದ ಶರಾವತೀ ಹೊಳೆಗೆ ಬ ತಿತ ದ್ದಳು. ಅವಳು ಒಬ್ಬಳೇ ಮರಳಿ ಬರಲಿಕ್ಕೆ ಧೈರ್ಯಗೆಟ್ಟು ಅಳಹ ಬಲು ರಿಂದ, ನಾನು ಅವಳನ್ನು ಇಲ್ಲಿಯವರೆಗೆ ಕರೆತಂದು ಮುಟ್ಟಿಸಿದೆನು. ಸ್ನಿಂದ ಬೆಳಕು

ಳಿಂದಲೇ ತಮಗೆ ಆಗಾಗ್ಗೆ ಮೂರ್ಛಾರೋಗ ಬರುತ್ತದೆಂದೂ, ಇಂದು ಬೆಳಿಗ್ಗೆ ತಮಗೆ ಬಂದ ಮೂರ್ಛೆಯು ಇನ್ನೂ ತಿಳಿದಿಲ್ಲವೆಂದೂ ಕೇಳಿದೆನು. ನನಗೂ ವೈದ್ಯಕದಲ್ಲಿ ಅಲ್ಪ-ಸ್ವಲ್ಪ ಪರಿಶ್ರಮವುಂಟು. ಆದರಿಂದ ನಾನು ನಿಮ್ಮ ರೋಗ ಪರೀಕ್ಷಿಸಲಿಕ್ಕಾಗಿ ನಿಮ್ಮ ಹತ್ತರ ಬಂದಿರುತ್ತೇನೆ.

ರೋಗಿ:—ನೀವು ಡಾಕ್ಟರರೆಂದಿರಲ್ಲವೇ? ನಿಮ್ಮ ಡಾಕ್ಟರ ಜಾತಿಯ ಮೇಲೆ ನಾನು ಕೊಂಚವೂ ವಿಶ್ವಾಸವಿಡುವದಿಲ್ಲವಲ್ಲ! ಈ ಸಂಗತಿಯನ್ನು ನಿಮಗೆ ನನ್ನ ಹೆಂಡತಿಯು ತಿಳಿಸಲಿಲ್ಲವೆ?

ಮನೋ:—ಅಹುದು. ಅವಳು ಒಮ್ಮೆ ಹಾಗೆಂದಿದ್ದಳು.

ರೋಗಿ:—ಹಾಗಾದರೆ ನೀವು ಇಷ್ಟು ಕಷ್ಟಪಟ್ಟು ನನ್ನ ಬಳಿಗೆ ಬಂದಿರೇಕೆ? ಅವಳಾದರೂ ನಿಮ್ಮನ್ನು ಕರೆತಂದಳೇಕೆ?

ಮನೋ:-ನಾವು ಬಂದಾಗ ನೀವು ಕೇವಲ ಸತ್ತವರಂತೆ ಮೂರ್ಛಿತರಾಗಿ ಬಿದ್ದುಕೊಂಡಿದ್ದಿರಿ; ಆದರೆ ಈಗ ನೀವು ಚೆನ್ನಾಗಿ ಹುಷಾರಾಗಿರುವಿರಿ. ಇನ್ನು ಇಲ್ಲಿ ನನ್ನ ಕೆಲಸವೇನು? ನಾನಿನ್ನು ಹೊರಡುವೆನು. ಎಂದವನೇ ಮನೋಹರನು ಅಲ್ಲಿಂದ ಹೊರಡಲುದ್ಯುಕ್ತನಾದನು.

ರೋಗಿ:—ಛೇ-ಛೇ, ಡಾಕ್ಟರರೇ, ಇನ್ನು ತುಸಹೊತ್ತು ವಿಶ್ರಮಿಸಿರಿ. ನಾನಂದದ್ದಕ್ಕೆ ಸಿಟ್ಟುಗಾಗಲಿಲ್ಲವಷ್ಟೆ? ಹಾಗಿದ್ದರೆ ನನ್ನನ್ನು ಕ್ಷಮಿಸಿರಿ. ತಾವು ನನ್ನ ಬೇನೆಗೆ ಕಟ್ಟುನಿಟ್ಟಾದ ಔಷಧವನ್ನು ಕೊಡಬಲ್ಲಿರಾ?

ಮನೋ:—ಒಮ್ಮೆ ಪ್ರಯೋಗಮಾಡಿ ನೋಡಬೇಕೆಂದಿರುವೆನು; ಆದರೆ ನಿಮಗೆ ಮೊಟ್ಟಮೊದಲು ತಿಳಿಸುವದೇನಂದರೆ, ರೋಗಿಗೂ ವೈದ್ಯನಿಗೂ ಪರಸ್ಪರರಲ್ಲಿ ವಿಶ್ವಾಸವಿರಬೇಕೆಂಬದು ಮೊದಲನೇ ಮುಖ್ಯ ಸಂಗತಿಯು; ರೋಗಿಯು ತನ್ನ ರೋಗದ ಸಂಗತಿಯನ್ನು ಕೊಂಚವೂ ಮರೆಮಾಜದಂತೆ ವೈದ್ಯನಿಗೆ ತಿಳಿಸುವದು ಎರಡನೇ ಮಹತ್ವದ ಮಾತು. ಇವೆರಡು ಸಂಗತಿಗಳು ಸಂಭವಿಸದ ಹೊರತು ನಿಮಗೆ ನಾನು ಎಷ್ಟು ಕಷ್ಟಪಟ್ಟು ಚಿಕಿತ್ಸೆ ಮಾಡಿದರೂ ಆದರಿಂದ ಏನೂ ಪ್ರಯೋಜನವಾಗಲಿಕ್ಕಿಲ್ಲ. ಬೇನು ಇಲ್ಲಿಗೆ ಬಂದಾಗ ನೀವು ಮೂರ್ಛೆಬಂದಂತೆ ಬಿದ್ದುಕೊಂಡದ್ದೇನೋ ಆದರೆ ನೀವು ಆಗ ನಿಜವಾಗಿ ಮೂರ್ಛೆ ತಳೆದಿದ್ದಿಲ್ಲ, ಆ ವಿಷಯುದ ಲ ತ್ರಕೆಯನ್ನು ಮಾತ್ರ ಬಹು ಚೆನ್ನಾಗಿ ಮಾಡಿದಿರಿ ಅಹುದೋ-ಅಲ್ಲವೋ?

ರೋಗಿ:—ಅಹುದು. ನಿಮ್ಮ ತರ್ಕವು ಯಥಾರ್ಥವಾದದ್ದು.

ಮನೋ:— ಹಾಗೆ ನಟಿಸಲಿಕ್ಕೆ ಕಾರಣವೇನು?

ಮನೋಹರನ ಆ ಪ್ರಶ್ನೆಯನ್ನು ಕೇಳಿ ಈ ರೋಗಿಯು ಮತ್ತೆ ಮೊದಲಿನಂತೆ ಹಲ-ಕೆಲವು ಸಾರೆ ಕಣ್ಣು ತಿರುಗಿಸುತ್ತ ನಡು-ನಡುವೆ ಆ ಕೋಣೆಯ ಬಾಗಿಲ ಕಡೆಗೆ ನೋಡುತ್ತ:—ರಾಯರೇ, ನನ್ನ ಈ ನಟಣೆಯೆಲ್ಲ ಆ ನನ್ನ ದುಷ್ಟ ಸ್ತ್ರೀಯಳಿಗಾಗಿ. ನಾನು ಹುಷಾರಾಗಿರುವದಕ್ಕಿಂತ ಮೂರ್ಚ್ಛಾಗತನಾಗಿರುವದೇ ಅವಳ ಸಲುವಾಗಿ ನನಗೆ ಹೆಚ್ಚು ಹಿತಕರವಾಗುವದು. ನಾನು ಆ ಮೋಡಿಯನ್ನು ಹೇಳಿಕೇಳಿ ನನಗೆ ಮುಳುವಾಗಿ ಕಟ್ಟಿಕೊಂಡಿರುತ್ತೇನೆ; ಅದರಿಂದ ಡಾಕ್ಟರರೇ, ನೀವು ದಯವಿಟ್ಟು ನನಗೆ ಈ ಮೂರ್ಚ್ಛಾಗತನಿವಾರಣದ ಉಪಾಯವನ್ನು ಮಾಡದೆ, ಸಾಯುವ ವರೆಗೂ ನಾನು ಇದೇ ಸ್ಥಿತಿಯಲ್ಲಿ ಏಕಪ್ರಕಾರವಾಗಿರುವಂತೆ ಅನುಗ್ರಹಿಸಿರಿ. ರಾಯರೇ, ನಾನಿನ್ನು ನಿಮ್ಮೊಡನೆ ಮಾತಾಡಲಿಚ್ಛಿಸುವದಿಲ್ಲ. ನೀವು ದಯವಿಟ್ಟು ಕೆಲಹೊತ್ತು ಆ ಪಕ್ಕದ ಕೋಣೆಯಲ್ಲಿ ವಿಶ್ರಮಿಸಿರಿ. ಆ ಮೇಲೆ ನಾನು ನಿಮ್ಮನ್ನು ಕರೆಸುವೆನು; ಆದರೆ ಡಾಕ್ಟರರೇ, ನಾನು ನಿಮ್ಮೆದುರಿಗೆ ತಿಳಿಸಿದ ಆ ನನ್ನ ಸ್ತ್ರೀ ವಿಷಯದ ಸಂಗತಿಯನ್ನು ಅವಳಿಗೆ ಸರ್ವಥಾ ತಿಳಿಸಬೇಡಿರಿ ಕಂಡಿರಾ, ಎಂದೆಂದು ಮತ್ತೆ ಮೊದಲಿನಂತೆ ಮೂರ್ಚ್ಛಾಗತನಾಗಿ ಬಿದ್ದುಕೊಂಡನು.

ಕೂಡಲೆ ಮನೋಹರನು ಅಲ್ಲಿಂದ ಹೊರಗೆ ಬಂದು ಛಾವಣಿಯಲ್ಲಿ ನಿಂತುಕೊಂಡನು. ಅಷ್ಟರಲ್ಲಿ ಆ ರಮಣಿಯೂ ಅಲ್ಲಿಗೆ ಬಂದು:— "ಡಾಕ್ಟರರೇ, ಏಕೆ, ಹೊರಗೆ ಬಂದು ನಿಂತಿರಿ? ಅವರು ತೀರಿ.........ನು?" ಎನ್ನಲು, ಅವನು ಅವಳನ್ನು ಮುಂದೆ ಮಾತಾಡಗೊಡದೆ:—ಛೇ, ಛೇ, ಹಾಗಾಗಿಲ್ಲ; ಅವರಿಗೆ ಈಗ ತುಸ ಎಚ್ಚರವುಂಟಾಗಿದೆ; ಹಾಸಿಗೆಯ ಮೇಲೆ ಎದ್ದು ಕುಳಿತುಕೊಂಡಿರುತ್ತಾರೆ. ಅವರ ಸ್ಥಿತಿಗತಿಯ ಮೇಲಿಂದ ಅವರಿಗೆ ಶರೀರಬಾಧೆಗಿಂತಲೂ ಮನೋರೋಗವೇ ಹೆಚ್ಚಾಗಿ ಉಂಟಾದಂತೆ ತೋರುತ್ತದೆ, ಎಂದನು.

ಕೆಲಕ್ಷಣಗಳ ವರೆಗೆ ಆ ರಮಣಿಯು ಮನೋಹರನೆದುರಿಗೆ ಚಿಂತಿತಳಾಗಿ ನಿಂತುಕೊಂಡನಂತರ:—ರಾಯರೇ, ಇಂದು ನಿಮಗೆ ನನ್ನಿಂದ ಬಲು ಕಷ್ಟವಾಯಿತು. ಈ ನಿಮ್ಮ ಉಪಕಾರವು ಈ ಜನ್ಮದಲ್ಲಂತೂ ನನ್ನಿಂದ ತೀರಲಾರದು, ಅದಿರಲಿ. ರಾಯರೇ, ಅಗೋ ಅಲ್ಲಿ ಎದುರಿಗೆ ಬೆಳಕು

ಕಾಣುವ ಆ ಕೋಣೆಗೆ ನಡೆಯಿರಿ. ನಾನೂ ನಿಮ್ಮ ಹಿಂದಿನಿಂದಲೇ ಬಂದು ನಿಮಗೆ ತುಷ ಉಪಹಾರ ಮಾಡಿಸುವೆನು, ಎಂದವಳೇ ರೋಗಿಯು ಕೋಣೆಯನ್ನು ಹೊಕ್ಕಳು.

ಮನೋಹರನು ಆ ಕೋಣೆಗೆ ಹೋಗುವವನಂತೆ ನಟಿಸಿ, ನಾಲ್ಕು ಹೆಜ್ಜೆ ಹೋಗಿ, ಅಲ್ಲಿಯೇ ನಿಂತುಕೊಂಡು ಆ ಅಪರಿಚಿತರೀರ್ವರಾಡುವ ಮಾತುಗಳನ್ನು ಆಲಿಸಿ ಕೇಳಹತ್ತಿದನು.

ಒಳಗೆ ಹೊಕ್ಕವಳೇ ಆ ರಮಣಿಯು ಆ ರೋಗಿಯನ್ನು ಕುರಿತು ಮೃದುಸ್ವರದಿಂದ:—ಇವನೇ ಅವನಲ್ಲವೇ? ನೀವು ಇವನನ್ನು ಗುರ್ತಿಸಿದಿರಾ? ಆ ನಿಮ್ಮ ಡಾಕ್ಟರ ಮನೋಹರನು ಇವನೇ ಅಹುದೋ? ನಾನು ಆ ಬಗ್ಗೆ ಮೋಸಹೋಗಲಿಲ್ಲವಷ್ಟೇ?

ರೋಗಿ:—ಅಹುದು; ಅವನೇ ಇವನು. ಈತನ ಹೆಸರೇ ಮನೋಹರ. ಎಂದೂ ಯಾವ ಸಂದರ್ಭದಲ್ಲೂ ಮೋಸಹೋಗದ ನೀನು, ಇಂದು ಮೋಸಹೋಗುವ ಸಂಭವವಾದರೂ ಉಂಟೆ? ಹೀಗೆಂದು ಆ ರೋಗಿಯು ಅನುಚ್ಚಸ್ವರದಿಂದ ನಕ್ಕನು ಅದೂ ಮನೋಹರನ ಕಿವಿಗೆ ಕೇಳಿಸಿತು.

ಆ ಮೇಲೆ ರಮಣಿಯು:-ಹಾಗಾದರೆ ಇನ್ನು ಏನು ಮಾಡತಕ್ಕದ್ದು?

ರೋಗಿ:—ನಿನ್ನ ಇಚ್ಛೆ ಬಂದಹಾಗೆ ಮಾಡು.

ರಮಣಿ:—ನೀವು ಹೇಳಿದಂತೆ ಮಾಡುವೆನು.

ರೋಗಿ:—ಇವನನ್ನು ಕೊಲ್ಲು.

ರಮಣಿ:—ಇವನನ್ನು ಕೊಲ್ಲಬೇಕೇ!

ರೋಗಿ:—ಯಾಕೆ ಆಶ್ಚರ್ಯಭರಿತಳಾದೆ? ಖೂನೆಂದರೆ ನಿನಗೆ ನನಗಿಂತಲೂ ಹುರುಪು ಹೆಚ್ಚು. ಹೀಗಿದ್ದು ಇಂದು ಇಷ್ಟು ಸೌಮ್ಯತನವು ನಿನಗೆಲ್ಲಿಂದ ಬಂತು? ಆ ನವತರುಣನನ್ನು ನೋಡಿ, ಅವನಲ್ಲಿ ನೀನು ಮನಸೋತು ಹೋಗಿಲ್ಲವಷ್ಟೇ? ನೋಡು, ಈ ಬಡವನನ್ನು ಹೀಗೆ ನಡುನೀರಿನಲ್ಲಿ ಮುಳುಗಿಸುವ ಯತ್ನ ಮಾತ್ರ ಸರ್ವಥಾ ಮಾಡಬೇಡ, ಕಂಡಿಯಾ.

ರಮಣಿ:—ಛೀ-ಛೀ, ಆ ದುಷ್ಟಕಲ್ಪನೆಯಾದರೂ ನಿಮ್ಮಲ್ಲಿ ಹ್ಯಾಗೆ ಉತ್ಪನ್ನವಾಯಿತು? ನಿಮಗೆ ನನ್ನ ಸ್ವಭಾವವು ಗೊತ್ತಿಲ್ಲವೆ? ಅದಿರಲಿ. ಈಗ ಮೊದಲು ಇವನ ಬಗ್ಗೆ ನಾವು ನಿಶ್ಚಯಿಸಿದಂತೆ ಮಾಡೋಣ; ಅಂದರೆ

ಯೋಗ್ಯವಾಗುವದು.

, ರೋಗಿ:—ಅಂತೇ ನಾನು ನಿನಗೆ ಈ ಮೊದಲೇ ಹೇಳಲಿಲ್ಲವೆ, ನಿನ್ನ ಮನಸ್ಸಿಗೆ ಬಂದಹಾಗೆ ಮಾಡೆಂದು.

ಆ ಉಭಯತರ ಈ ಸಂಭಾಷಣವನ್ನು ಕೇಳಿ ಮನೋಹರನು ಕಡು ಚಿಂತೆಗೊಳಗಾದನು. ತನ್ನನ್ನು ಈ ಅಪರಿಚಿತಳು ಇಲ್ಲಿಗೆ ಕರೆತಂದಳೇಕೆಂಬ ಬಗ್ಗೆ ಈಗ ಅವನಿಗೆ ಚೆನ್ನಾಗಿ ಹೊಳೆಯಿತು; ಹಾಗು ಈ ಮೊದಲು ಅಂಬಿಗರ ಸಂಜೀವನ ಮಾತು ಕೇಳದೆ ತಾನು ಈ ಅಪರಿಚಿತ ರಮಣಿಯೊಡನೆ ಬಂದಬಗ್ಗೆ ಹೆಚ್ಚಾಗಿ ಪಶ್ಚಾತ್ತಾಪವೂ ಆಯಿತು; ಆದರೆ ಮಿಂಚಿಹೋದ ಮಾತಿಗೆ ಚಿಂತಿಸಿ ಮಾಡುವದೇನು? ಮನಸ್ಸು ಎಷ್ಟು ಅಂಜಿದರೂ ಅವನು ವಿವೇಕವನ್ನು ಬಲಪಡಿಸಿ, ಬಂದಸಮಯಕ್ಕೆ ಎದೆಗೊಡಲಿಕ್ಕೆ ಸಿದ್ಧನಾದನು. ಅವನು ಆ ಎದುರಿಗಿನ ಕೋಣೆಗೆ ಹೋಗಬೇಕೋ-ಬಾರದೋ ಎಂಬದನ್ನು ಆಲೋಚಿಸುತ್ತ ಅಲ್ಲಿಯೇ ಒಂದು ಕಂಬಕ್ಕೆ ಆತು ನಿಂತುಬಿಟ್ಟನು!

ಕೆಲಹೊತ್ತಿನಲ್ಲಿ ಆ ರಮಣಿಯು ಒಂದು ಕಂದೀಲನ್ನು ಹಿಡಕೊಂಡು ಬಂದು ಮನೋಹರನ ಪಕ್ಕದಲ್ಲಿ ನಿಂತುಕೊಂಡಳು. ಅವಳು ಈಗ ಬುರುಕೆಯನ್ನು ತೆಗೆದಿಟ್ಟು ಬಂದಿದ್ದಳು. ಆದರಿಂದ ಆ ಉಜ್ವಲವಾದ ದೀಪದ ಬೆಳಕಿನಲ್ಲಿ ಅವಳ ಸೌಂದರ್ಯವು ಮತ್ತಿಷ್ಟು ಪ್ರಕಾಶಮಾನವಾಯಿತು. ತಾನು ಮಹಾವಿಪತ್ತಿನಲ್ಲಿ-ಮರಣದ ದವಡೆಯಲ್ಲಿ-ಸಿಕ್ಕಿದ್ದರೂ ಆ ಯುವಕನು ಅದನ್ನು ಕ್ಷಣಕಾಲ ಮರೆತು, ಆ ರಮಣಿಯ ಸೌಂದರ್ಯವನ್ನು ಮನಸೋಕ್ತವಾಗಿ ಅವಲೋಕಿಸುತ್ತ ಚಿತ್ರದೊಳಗಿನ ಗೊಂಬೆಯಂತೆ ನಿಂತುಕೊಂಡಿದ್ದನು.

ರಮಣಿಯು ಹತ್ತರ ಬಂದವಳೇ ಒಳ್ಳೇ ಒಯ್ಯಾರದ ನಗೆನಗುತ್ತ:- ರಾಯರೇ ತಾವಿನ್ನೂ ಇಲ್ಲಿಯೇ ನಿಂತಿರುವಿರೇನು? ಬನ್ನಿರಿ, ನನ್ನ ಕೂಡ ಆ ಕೋಣೆಗೆ ಬನ್ನಿರಿ, ಎಂದಂದು ಅವನ ಮೇಲೊಮ್ಮೆ ತನ್ನ ತೀಕ್ಷ್ಣ ಕಟಾಕ್ಷವನ್ನು ಬೀರಿ, ಮುಂದೆ ಮುಂದೆ ನಡೆದಳು.

ಮನೋಹರನೂ ಅವಳನ್ನನುಸರಿಸಿ ಸಾಗುತ್ತ:—ನಾನು ಇಲ್ಲಿಗೆ ಬಂದು ಬಹು ವೇಳೆಯಾಯಿತು ಅಲ್ಲಿ ನದೀ ತೀರದಲ್ಲಿ ನನ್ನ ನಾವಿಕರು ದಾರಿಕಾಯುತ್ತಿರಬಹುದು; ಬೇಗನೆ ನಿಮ್ಮೊಬ್ಬ ಆಳಿಗೆ ಹೇಳಿ ನನ್ನನ್ನು ಅಲ್ಲಿಗೆ ಕಳಿಸಿಕೊಡಿರಿ, ಎನ್ನುತ್ತಿದ್ದನು.

ಆಗ ಆ ರಮಣಿಯು ಒಳ್ಳೇ ವಿನಯದಿಂದ:—ತಾವು ತುಸ ಉಪಾಹಾರ ತಕ್ಕೊಳ್ಳದ ವಿನಃ ನಾನು ತಮ್ಮನ್ನು ಬಿಡುವವಳಲ್ಲ.

ಮನೋಹರ:—ಛೀ-ಛೀ! ನಾನು ಇಂಥ ಅಪರಾತ್ರಿಯಲ್ಲಿ ಎಂದೂ ಏನನ್ನೂ ತಕ್ಕೊಳ್ಳುತ್ತಿರುವದಿಲ್ಲ ಆ ಬಗ್ಗೆ ಕ್ಷಮಿಸಿ, ಬೇಗನೆ ನನ್ನನ್ನು ಹೋಗಗೊಡಿರಿ.

"ತಾವು ಹಾಗೇ ಹೊರಟು ಹೋದರೆ ನನಗೆ ಬಲು ದುಃಖವಾಗುತ್ತದೆ ಆದಕ್ಕಾಗಿ ಸ್ವಲ್ಪಾದರೂ ಉಪಾಹಾರ ಮಾಡಿಯೇ ತೆರಳಬೇಕೆ"ಂದು ಅವಳು ಒತ್ತಾಯಪಡಿಸಹತ್ತಿದಳು

ಹೀಗೆ ಅವರೀರ್ವರು ಸಂಭಾಷಣ ಮಾಡುತ್ತ ಒಂದು ಭಾವಣಿಯಿಂದ ಮತ್ತೊಂದು ಕೋಣೆಗೆ; ಮತ್ತೊಂದು ಕೋಣೆಯಿಂದ ಇನ್ನೊಂದು ಪಡಸಾಲೆಗೆ; ಇನ್ನೊಂದು ಪಡಸಾಲೆಯಿಂದ ಮಗದೊಂದು ಭಾವಣಿಗೆ ಹೀಗೆ ಎಷ್ಟೋ ಪ್ರಾಕಾರಗಳನ್ನು ದಾಟದರೂ ರಮಣಿಯ ಆ ಉಪಾಹಾರದ ಕೋಣೆಯು ಬರದಾಗಲು, ಕಡೆಗೆ ಮನೋಹರನು:—ನನ್ನನ್ನು ನೀವು ಕರೆದೊಯ್ಯುವದಾದರೂ ಎಲ್ಲಿಗೆ? ಎಂದು ಪ್ರಶ್ನೆ ಮಾಡಲು,

"ರಾಯರೇ, ನನ್ನೊಡನೆ ಕಾರ್ಗತ್ತಲೆಯಲ್ಲಿ ಎಷ್ಟೋ ಮಾರ್ಗವನ್ನು ಕ್ರಮಿಸಿ ಬಂದ ತಾವು, ಈ ದೀಪದ ಬೆಳಕಿನಲ್ಲಿ ಆ ಕೋಣೆಯವರೆಗೆ ಬರಲಿಕ್ಕೆ ಅಂಜುವಿರೇನು? ನಾನು ಹೇಳಿ-ಕೇಳಿ ಹೆಂಗಸು. ತಾವು ಮೀಸೆಹೊತ್ತ ಗಂಡಸರು. ಹೀಗಿದ್ದು ಅಂಜುವದೇಕೆ? ಬನ್ನಿರಿ, ಇಗೋ ಇಲ್ಲಿಯೇ ಇದೆ.'' ಎಂದವಳೇ ಲಗುಬಗನೆ ನಡೆಯಲಾರಂಭಿಸಿದಳು.

ಈಕೆಗೆ ಏನು ಉತ್ತರ ಕೊಡಬೇಕೆಂಬದನ್ನು ತಿಳಿಯಲಾರದೆ ಮನೋಹರನು ಸುಮ್ಮನೆ ಅವಳ ಹಿಂದಿಂದೆ ನಡೆದಿದ್ದನು. ತುಸ ಮುಂದಕ್ಕೆ ಹೋದ ಮೇಲೆ ಆ ರಮಣಿಯೇ ಮತ್ತೆ:—ತಾವು ಅಪರಿಚಿತರು; ರೂಪಸಂಪನ್ನರು; ಯುವಕರು; ಮೇಲಾಗಿ ನನಗೆ ಪರಪುರುಷರು. ನಾನೂ ರೂಪಸಂಪನ್ನಳೂ, ಯೌವನಯುತಳೂ, ಮೇಲಾಗಿ ನಿಮಗೆ ಪರಸ್ತ್ರೀಯು ಈ ಅವಸ್ಥೆಯಲ್ಲಿ ನಾವೀರ್ವರೂ ಈ ಅಪರಾತ್ರಿಯಲ್ಲಿ ಈ ಮೇಲಂತಸ್ತಿನ ಭಾವಣಿಯಲ್ಲಿ ಅಡ್ಡಾಡುತ್ತಿರುವದನ್ನು ಯಾರಾದರೂ ನೋಡಿದರೆ ಅವರು ಏನು ಅಂದುಕೊಂಡಾರು? ಎಂದು ಪ್ರಶ್ನ ಮಾಡಲು, ಅವಳ ಆ ವಿಚಿತ್ರ ಪ್ರಶ್ನೆಯಿಂದ ಆ ನವತರುಣನಲ್ಲಿ ಹೆಚ್ಚು

ಚಂಚಲತೆಯುಂಟಾದದ್ದು ಸ್ವಾಭಾವಿಕವೇ. ಕೆಲಕ್ಷಣಗಳನಂತರ ಮನೋಹರನಿಗೆ ಆ ರಮಣಿಯ ಕೌಟಿಲ್ಯವು ಹೊಳೆಯಿತು. ಆದರೂ ಅವನು ಅವಳಿಗೆ ಪಿಟ್ಟೆಂದು ಉತ್ತರ ಕೊಡದೆ ಸುಮ್ಮನೆ ಅವಳೊಡನೆ ನಡೆದಿದ್ದನು.

ಆ ದೀರ್ಘವಾದ ಭಾವಣಿಯ ದಕ್ಷಿಣದಿಕ್ಕಿನ ಮೂಲೆಯಲ್ಲಿ ಒಂದು ಅಚ್ಚುಕಟ್ಟಾದ ಕೋಣೆಯಿದ್ದಿತು. ಆ ಕೋಣೆಯು ಆಕಾರದಿಂದ ಚಿಕ್ಕದಾಗಿದ್ದರೂ ಅದರೊಳಗಿನ ಬಗೆ-ಬಗೆಯ ಉಪಯುಕ್ತ ಸಾಮಾನುಗಳನ್ನು ಸಜ್ಜಾಗಿಟ್ಟದ್ದನ್ನು ನೋಡಿದರೆ, ಅದು ಯಾವದೊಂದು ಭವ್ಯವಾದ ದಿವಾಣಖಾನೆಯನ್ನು ನಾಚಿಸುವಂತಿತ್ತು. ಅಲ್ಲಿ ಒಂದು ಪಕ್ಕದಲ್ಲಿ ಒಂದು ಸ್ಪ್ರಿಂಗಿನ ಡಬಲ್ ಪಲ್ಲಂಗದ ಮೇಲೆ ಶುಭ್ರವಾದ ಮೆತ್ತನ್ನ ಹಾಸಿಗೆಯು ಹಾಸಿ ಸಜ್ಜಾಗಿದ್ದಿತು. ಒಂದು ಪಕ್ಕದಲ್ಲಿ ಮೇಜಿನ ಮೇಲೆ ಸುಗಂಧದ್ರವ್ಯದ ಸೀಸೆಗಳೂ, ಮಾವು, ಬಾಳೆ, ಕಿತ್ತಳೆ, ಸೇಬು, ದ್ರಾಕ್ಷಿ ಮೊದಲಾದ ನಾನಾಪ್ರಕಾರದ ಪಕ್ವಫಲಗಳೂ, ಸ್ವಚ್ಛವಾದ ತಣ್ಣೀರಿನ ಬೆಳ್ಳಿಯ ತಂಬಿಗೆ-ಥಾಲಿಗಳೂ ಶೋಭಿಸುತ್ತಿದ್ದವು. ಕೋಣೆಯ ತುಂಬೆಲ್ಲ ಬಗೆ-ಬಗೆಯ ಶೃಂಗಾರಪೂರಿತ ಚಿತ್ರಗಳು ಸುವ್ಯವಸ್ಥಿತವಾಗಿ ಹಚ್ಚಲ್ಪಟ್ಟಿದ್ದವು. ಆ ರಮಣಿಯು ಮನೋಹರನನ್ನು ಆ ಮೇಜಿನ ಬಳಿಯ ಒಂದು ಸುಂದರವಾದ ಖುರ್ಚಿಯ ಮೇಲೆ ಕೂಡಿಸಿ, ತಾನೂ ಸಮೀಪದ ಒಂದು ನಾಜೂಕಾದ ಖುರ್ಚಿಯ ಮೇಲೆ ಕುಳಿತು, ಅವನಿಗೆ ಅಲ್ಲಿಟ್ಟಿದ್ದ ಫಲಾಹಾರವನ್ನು ತಿನಿಸಹತ್ತಿದಳು. ಮನೋಹರನೂ ಬಾಯಿಂದ ಒಲ್ಲೆ-ಒಲ್ಲೆ ಎನ್ನುತ್ತಲೇ ಅವುಗಳೊಳಗಿನ ಎಷ್ಟೋ ಹಣ್ಣು-ಹಂಪಲಗಳನ್ನು ತಿಂದುಹಾಕಿದನು. ಬಳಿಕ ಅವಳು ಸುರುವಿಕೊಟ್ಟ ಸುಗಂಧಯುಕ್ತ ವಾರಿಯನ್ನು ನೀಂಟಿ, ಒಳ್ಳೇ ಅವಸರದಿಂದ ಮತ್ತೆ ತನ್ನ ಮೂಲಮಂತ್ರವಾದ "ನನಗೆ ತಡವಾಯಿತು, ಬೇಗನೆ ನನ್ನನ್ನು ಕಳಿಸಿಕೊಡಿರಿ" ಎಂಬದನ್ನು ಪಠಿಸಹತ್ತಿದನು.

ಆಗ ಅವಳು ಮೆಲ್ಲನೆ ಅವನ ತೊಡೆಗೆ ತೊಡೆಯಾನಿಸಿ ಕುಳಿತು:— ರಾಯರೇ, ನಿಮಗೆ ನನ್ನ ಹೃದ್ಗತವು ಈ ಒಳಗಾಗಿಯೇ ತಿಳಿದಿರಬಹುದಾಗಿದೆ; ಹಾಗು ನೀವು ಈ ಅಪರಿಚಿತ ಸ್ಥಳಕ್ಕೆ ಬಂದಿರುವದರಿಂದ ನಿಮ್ಮ ಹೃದ್ಗತವನ್ನು ತಿಳಿಸಲಾರದವರಾಗಿದ್ದೀರೆಂಬದರ ಅರಿವೂ ನನಗಿದೆ. ಪ್ರಿಯನೇ, ನನ್ನ ಮನಸ್ಸನ್ನು ನೀನು ನಿನ್ನ ಹರಗೋಲಿನೊಳಗಿಂದಲೇ

ಸೆಳಕೊಂಡಿರುತ್ತೇ. ನಿನ್ನ ಹೊರತು ನನಗೆ ಬೇರೆ ಯಾರೂ ಗತಿ ಇರುವದಿಲ್ಲ. ನೀನು ಈ ನಿನ್ನ ಚರಣದಾಸಿಯನ್ನು ಅನುಗ್ರಹಿಸು. ಅಂದರೆ ನಾನು ಈಗಲೆ ಆ ನನ್ನ ಬೇನೆಕೊಳಕ ಗಂಡಸನ್ನು ಸಂಹರಿಸಿ ಬರುವೆನು. ಬಳಿಕ ನಾವಿಬ್ಬರೂ ಸುಖದಿಂದ ಇರೋಣ, ಎಂದವಳೇ ಅವನ ಕೊರಳಿಗೆ ತೆಕ್ಕೆ ಹಾಕಿದಳು.

"ಛೇ-ಛೇ! ನೀವು ಹೀಗೆ ಮಾಡುವದು ಸರಿಯಲ್ಲ-ಸರಿಯಲ್ಲ" ಎಂದೆನ್ನುತ್ತ ಮನೋಹರನು ಅವಳ ಕೈಯೊಳಗಿಂದ ಕೊಸರಿಕೊಂಡು ಹೊರಹೊರಡಲು ಯತ್ನಿಸಿದನು; ಆದರೆ ಆ ರಮಣಿಯಲ್ಲಿ ಎಷ್ಟು ರಮಣೀಯತ್ವವಿದ್ದಿತೋ ಅದಕ್ಕೂ ಹೆಚ್ಚು ಶರೀರಸಾಮರ್ಥ್ಯವೂ ಇದ್ದಿತು. ಆದರಿಂದ ಅವಳು ಆ ಹರೆಯದವನನ್ನು ಏಳಗೊಡದೆ, ಅಲ್ಲಿಯೇ ಹತ್ತಿಕ್ಕಿ ಕೂರಿಸಿ, ಅವನಿಗೆ ಮತ್ತೆ ಮತ್ತೆ ಅದೇ ಪ್ರಕಾರವಾಗಿ ವಿನಂತಿಮಾಡಿಕೊಳ್ಳ ಹತ್ತಿದಳು. ಎಷ್ಟು ಸಾರೆ ಪ್ರಾರ್ಥಿಸಿದರೂ ಅವನು ಸಮ್ಮತಿಸದಾಗಲು, ಕ್ರೋಧಭರದಿಂದ ಅವಳು:—ಮೂರ್ಖಾ, ನಿನಗೆ ನಾರೀಹೃದಯದ ಪರೀಕ್ಷೆಯಿಲ್ಲ-ಕಲ್ಪನೆಯಿಲ್ಲ ನಿನ್ನ ರೂಪ-ಯೌವನಗಳಿಗೆ ಮನಸೋತ ಈ ರಮಣಿ-ಜೊನ್ಸ-ನಾಗಿಣಿಯನ್ನು ನೀನು ಹೇಳಿಕೇಳಿ ನಿನ್ನ ಕಾಲಿನಿಂದ ಒದೆಯುತ್ತಿರುವೆ; ಆದರೆ ಈ ಜೊನ್ಸಳು ಸಾಮಾನ್ಯ ಹೆಂಗಸಲ್ಲ. ತನ್ನ ಮನಸ್ಸಿನ ವಿರುದ್ಧ ನಡೆದವರಿಗೆ ಕೂಡಲೆ ತಕ್ಕ ಶಿಕ್ಷೆಯನ್ನು ಮಾಡಿಯೇ ತೀರುವಳು, ಎಂದವಳೇ ಮನೋಹರನನ್ನು ಆ ಖುರ್ಚಿಯ ಮೇಲಿಂದ ಹಿಂದಕ್ಕೆ ದೂಡಿದಳು; ಹಾಗು ಅವನು ಎದ್ದೇಳುವಷ್ಟರಲ್ಲಿ ಭರದಿಂದ ಕೋಣೆಯ ಹೊರಗೆ ಬಂದು, ಹೊರಗಿನಿಂದ ಬಾಗಿಲಪನ್ನಿಕಿ ಚಿಲಕವನ್ನು ಹಾಕಿದಳು.

ಆ ತರುಣನು ಆ ಅಪರಿಚಿತ ತರುಣಿಗೆ ಉಪಕಾರ ಮಾಡಹೋಗಿ, ಅವಳಿಂದ ವಿಶ್ವಾಸಘಾತಹೊಂದಿ ಆ ಕೋಣೆಯಲ್ಲಿ ಹೀಗೆ ಆಕಸ್ಮಿಕ ರೀತಿಯಿಂದ ಸೆರೆಯಾಳಾಗಿ ಬೀಳಬೇಕಾಯಿತು!



## ೧೭ ವಿಚಿತ್ರ ಘಟನೆ!

ಮನೋಹರನಿಗೆ ಆ ಕೋಣೆಯಿಂದ ಹೊರಬೀಳಲಿಕ್ಕೆ ಒಂದೂ ಉಪಾಯವು ತೋಚದಾಯಿತು ಆದರಿಂದ ಅವನು ಅಲ್ಲಿ ಸುಮ್ಮನೆ ಕುಳಿತಿದ್ದನು. ಆ ರಮಣಿಯು ಅಲ್ಲಿಂದ ಹೊರಟು ಹೋದ ತುಸ ಹೊತ್ತಿನಲ್ಲಿಯೇ ಆ ಕೋಣೆಯು ಯಾವ ಕಡೆಯಿಂದಲೋ ದುರ್ಗಂಧಯುಕ್ತ ಹೊಗೆಯು ಬರಹತ್ತಿತು. ಮನೋಹರನು ಆ ಕೋಣೆಯ ಪ್ರತಿಯೊಂದು ಸಂದಿಮೂಲೆಯನ್ನು ದಿಟ್ಟಿಸಿ ನೋಡಿ ಪರೀಕ್ಷಿಸಿದನು. ಅಲ್ಲಿ ಯಾವ ವಸ್ತುವಿಗೂ ಬೆಂಕಿಹತ್ತಿದಂತೆ ಅವನಿಗೆ ಕಾಣಲಿಲ್ಲ. ಪಕ್ಕದ ಯಾವದೊಂದು ಕೋಣೆಗೆ ಆಕಸ್ಮಿಕವಾಗಲಿ, ಇಲ್ಲವೆ ಆ ಭಗ್ನಮನೋರಥಳಾದ ಸ್ತ್ರೀಯು ಬೇಕಂತಾಗಲಿ ಬೆಂಕಿ ಹಚ್ಚಿರಬಹುದೆಂದು ಅವನು ತರ್ಕಿಸಿದನು; ಆದರೆ ಅವನ ಕೋಣೆಯಲ್ಲಿ ನುಗ್ಗುತ್ತಿದ್ದ ಸೂಕ್ಷ್ಮ ಹೊಗೆಯು ಯಾವದೊಂದು ಮನೆಗೆ ಬೆಂಕಿ ಹತ್ತಿದರೆ ಹೊರಡುವ ಹೊಗೆಯಂತಿರದೆ, ಒಂದು ಬಗೆಯ ಪ್ರಾಣಹಾರಕ ಗ್ಯಾಸಿನಂತೆ ಅತಿ ದುರ್ಗಂಧಮಯವಾಗಿತ್ತು. ಬರಬರುತ್ತ ಆ ದುರ್ಗಂಧಯುಕ್ತ ಗ್ಯಾಸಿನಿಂದ ಮನೋಹರನ ಶ್ವಾಸ ನಿರೋಧವಾಗಹತ್ತಿತು ಅವನು ಒಳ್ಳೇ ಪ್ರಯಾಸದಿಂದ ಉಸಿರಾಡುವ ಪ್ರಸಂಗ ಬಂದಿತು. ಆದರೂ ಅವನಿಗೆ ಆ ದುರ್ಗಂಧವು ಯಾವ ಕಡೆಯಿಂದ ಬರುವದೋ ಅದರ ಸುಳಿವೇ ಹತ್ತಲಿಲ್ಲ ಇನ್ನು ಹೀಗೆ ಸುಮ್ಮನೆ ಕುಳಿತು ಪ್ರಾಣಕ್ಕೆರವಾಗುವದಕ್ಕಿಂತ ಕೋಣೆಯ ಬಾಗಿಲವನ್ನಾದರೂ ಮುರಿದು ಹೊರಬಿದ್ದು ಪ್ರಾಣವುಳಿಸಿಕೊಳ್ಳಬೇಕೆಂದು ನಿರ್ಧರಿಸಿದ ಮನೋಹರನು ಆ ಬಾಗಿಲಿಗೆ ಒಳ್ಳೇ ಕಸುವಿನಿಂದ ಹಾರಿ ಹಾರಿ ಒದೆಯಲಿಕ್ಕೆ ಪ್ರಾರಂಭಿಸಿದನು. ಎಷ್ಟು ಸಾರೆ ಒದೆದರೂ ಆ ಬಾಗಿಲವು ಜುಮ್ಮೆನ್ನಲಿಲ್ಲ ಇತ್ತ ದುರ್ಗಂಧವು ಹೆಚ್ಚಾಗುತ್ತ ನಡೆದದ್ದರಿಂದ ಅಲ್ಲಿ ಒತ್ತಟ್ಟಿಗೆ ನಿಲ್ಲುವದು ಅವನಿಗೆ ಅಸಹ್ಯವೆನಿಸಿತು. ಆಗ ಅವನು ಅತ್ತಿಂದ ಇತ್ತ ಇತ್ತಿಂದ ಅತ್ತ ಭರದಿಂದ ಓಡಾಡುತ್ತ ನಡುನಡುವೆ ಶಕ್ತಿಮೀರಿ ಒದೆದು ಆ ಬಾಗಿಲವನ್ನು ಮುರಿಯುಲು ಪ್ರಯತ್ನಿಸುತ್ತ ಒಳ್ಳೇ ಕಷ್ಟದಿಂದ ಉಸಿರಾಡಿಸುತ್ತಿದ್ದನು.

ಇಷ್ಟರಲ್ಲಿ ಬಾಗಿಲದ ಹೊರಗೆ ಯಾರದೋ ಕಾಲಸಪ್ಪಳವಾದಂತಾ

ಯಿತು. ಅವನು ಬಾಗಿಲಿಗೆ ಕಿವಿಯಾನಿಸಿ ನಿಂತುಕೊಳ್ಳಲು, ಹೊರಗಿನಿಂದ:—"ಮೂರ್ಖ, ನೀನೆಷ್ಟೇ ಬಲವಂತನಿದ್ದಮಾತ್ರಕ್ಕೆ ಈ ಅತ್ತೀಕಟ್ಟಿಗೆಯ ಕದವು ನಿನ್ನ ಲತ್ತಾಪ್ರಹಾರಕ್ಕೆ ಮುರಿಯುವದೇ? ವ್ಯರ್ಥವಾಗಿ ಶ್ರಮಪಡುವೆ ಮಾತ್ರ. ಉಪೇಕ್ಷಿತ ನಾರೀ ಹೃದಯದ ಕಲ್ಪನೆಯು ನಿನಗಿಲ್ಲ. 'ಒಲಿದರೆ ನಾರಿ, ಮುನಿದರೆ ಮಾರಿ' ಎಂಬ ವಾಕ್ಯವು ಇಂದು ನಿನ್ನ ಅನುಭವಕ್ಕೆ ಬರುವದು. ಇಂದು ನಿನ್ನ ಈ ಡಾಕ್ಟರೀ ಯೋಜನೆಯ-ದುರ್ಗಂಧ ವಾಯುವಿನಿಂದಲೇ ನಾನು ನಿನ್ನ ಪ್ರಾಣವನ್ನು ಹರಣ ಮಾಡುವೆನು. ನಿನ್ನ ಮರಣಕ್ಕಿನ್ನು ಹೆಚ್ಚು ಅವಕಾಶವಿಲ್ಲ. ಆ ಅಲ್ಪಾವಧಿಯನ್ನಾದರೂ ಈ ತರದ ಶಾರೀರಿಕ ಶ್ರಮದಲ್ಲಿ ಕಳೆಯದೆ ಒತ್ತಟ್ಟಿಗೆ ಸ್ವಸ್ಥವಾಗಿ ಕುಳಿತು ಈಶಚಿಂತನೆಯಲ್ಲಿ ಕಳೆ" ಎಂದವಳೇ ಕಿಲ್ಲು-ಕಿಲ್ಲೆಂದು ನಕ್ಕು ಹೊರಟು ಹೋದಂತಾಯಿತು.

ಆ ರಮಣಿಯ ಆ ವಿಕಟ ಹಾಸ್ಯವು ಆ ಪ್ರಾಣಹಾರಕ ದುರ್ಗಂಧಯುಕ್ತ ಗ್ಯಾಸಿಗಿಂತಲೂ ಮನೋಹರನಿಗೆ ತೀಕ್ಷ್ಣವಾದ ಮರ್ಮಭೇದಕವಾಯಿತು. ಅದರಿಂದ ಅವನ ಚೇತನಾಶಕ್ತಿಯು ಕಳವಳಗೊಂಡಿತು. ಅವನು ಮತ್ತೆ ಆ ಕೋಣೆ ತುಂಬಾ ಭರದಿಂದ ಓಡಾಡಲಾರಂಭಿಸಿದನು. ಏನಾದರೂ ಅವನಿಗೆ ಅಲ್ಲಿಂದ ಹೊರಬೀಳಲಿಕ್ಕೆ ಮಾರ್ಗ ದೊರೆಯದಾಯಿತು. ಕ್ಷಣ ಕ್ಷಣಕ್ಕೆ ಅವನ ಶ್ವಾಸನಿರೋಧವು ಹೆಚ್ಚಿ, ಚೇತನಾಶಕ್ತಿಯು ಕಳೆಗುಂದಲಾರಂಭಿಸಿತು. ಅವನ ಗಂಟಲವು ಒಣಗಿತು; ಮೂಗು ಒಣಗಿತು; ಕಣ್ಣು ಕತ್ತಲುಗಟ್ಟಿಸಿದವು; ಕೈ-ಕಾಲುಗಳ ನರಗಳು ಬಿಗಿದವು; ನಾಲಿಗೆಯು ಸೆಳೆಯಿತು. ಆದರೂ ಅವನು ಹುಚ್ಚನಂತೆ ಆ ಕೋಣೆಯಲ್ಲಿ ಅಡ್ಡಾಡುತ್ತಲೇ ಇದ್ದನು. ಬರಬರುತ್ತ ಅವನ ಚೈತನ್ಯವು ಕುಗ್ಗಿ ಅವನು ಒಂದು ಕಡೆಗೆ ದೊಪ್ಪೆಂದು ಬಿದ್ದುಬಿಟ್ಟನು!

ಡಾ. ಮನೋಹರನು ಯಾವಾಗ ಎಚ್ಚತ್ತು ಕಣ್ತೆರೆದು ನೋಡಿದನೋ ಆಗ ತಾನು ಮೊದಲನೇ ದಿನ ರಾತ್ರಿಯಲ್ಲಿ ತನ್ನ ನಾಕೆಯನ್ನು ಶರಾವತೀ ತೀರದಲ್ಲಿ ಎಲ್ಲಿ ಬಿಟ್ಟು ಬಂದಿದ್ದನೋ-ಆ ಅಪರಿಚಿತ ರಮಣಿಯನ್ನು ಅಲ್ಲಿಯ ಯಾವ ಗಿಡದ ಕೆಳಗೆ ನಿಂತಿರುವದನ್ನು ನೋಡಿದ್ದನೋ ಅದೇ ಮರದ ಕೆಳಗೆ ತೃಣಾಚ್ಛಾದಿತ ಭೂಮಿಯಲ್ಲಿ ಬಿದ್ದುಕೊಂಡಿರುವೆನೆಂದು ಅವನಿಗೆ ಗೊತ್ತಾಯಿತು. ಅವನು ಮತ್ತೆ ಕಣ್ಣು ಮುಚ್ಚಿ

ದನು. ಆಗ ಅವನ ಮೂಗಿಗೆ ಆ ಕೋಣೆಯೊಳಗಿನ ದುರ್ಗಂಧವುಯು ಗ್ಯಾಸಿನ ವಾಸನೆಯು ಬರುತ್ತಿರಲಿಲ್ಲ. ಆದರೂ ಈವರೆಗಿನ ಯಾವುದೋ ಒಂದು ಬಗೆಯ ಆಯಾಸದಿಂದ ಅವನ ಶರೀರವು ಬಲು ಬಾಧೆಪಟ್ಟಿತ್ತು. ಅದರಿಂದ ಈಗ ಅವನು ಕಣ್ಣು ಮುಚ್ಚುತ್ತಲೆ ಆ ನದೀ ತಟಾಕದ ಶಾಂತ ಹಾಗು ಸಾನಂದ ವಾತಾವರಣದಲ್ಲಿ ಅವನಿಗೆ ಗಾಢವಾದ ನಿದ್ದೆಯೇ ಹತ್ತಿಬಿಟ್ಟಿತು.

ಮತ್ತೆ ಮನೋಹರನಿಗೆ ಸ್ಮೃತಿಯುಂಟಾದಾಗ ತಾನು ಹರಗೋಲಿನಲ್ಲಿ ಮಲಗಿಕೊಂಡಿದ್ದು, ತನ್ನ ನೌಕೆಯು ಭರದಿಂದ ಪರತೀರದ ಕಡೆಗೆ ನಡೆದಿದೆಯೆಂದು ಅವನಿಗೆ ಗೊತ್ತಾಯಿತು. ಅಗ ಅವನು ತಾನು ಯಾರು? ಎಲ್ಲಿಗೆ ಹೋಗಿದ್ದೆನು? ಎಲ್ಲಿಂದ ಬಂದೆನು? ಮುಂತಾದುದನ್ನು ಸಾವಕಾಶವಾಗಿ ವಿಚಾರಮಾಡಲಾರಂಭಿಸಿದನು. ಮೊದಮೊದಲು ಅವನಿಗೆ ಏನೂ ತಿಳಿಯದಾಯಿತು. ಕೆಲ ಹೊತ್ತಿನ ಮೇಲೆ ಕಳೆದ ರಾತ್ರಿಯಲ್ಲಿ ತಾನು ಆ ಮರದ ಕೆಳಗೆ ನಿಂತ ಆ ರಮಣಿಯನ್ನು ದೃಷ್ಟಿಸಿದ್ದು ಥಕ್ಕನೆ ನೆನಪಿಗೆ ಬಂತು. ಅಲ್ಲಿಂದ ಅವನು ಆ ಮುಂದಿನ ಒಂದೊಂದೇ ಸಂಗತಿಗಳನ್ನು ಶೃಂಖಲಾಬದ್ಧವಾಗಿ ಮಾಡುತ್ತ ವಿಚಾರಮಗ್ನನಾಗಲು, ತಾನು ಆ ದುರ್ಗಂಧಯುಕ್ತ ಗ್ಯಾಸಿನಿಂದ ಮೂರ್ಛೆಹೊಂದಿ ಆ ಕೋಣೆಯಲ್ಲಿ ಬಿದ್ದುಕೊಂಡವರೆಗಿನ ಸಂಗತಿಗಳು ಚೆನ್ನಾಗಿ ನೆನಪಾದವು; ಆದರೆ ಆ ಮುಂದಿನ ಸಂಗತಿಯೊಂದೂ ತಿಳಿಯಲೊಲ್ಲದು. ಆ ರೂಪಸಿ ರಮಣಿಯೂ, ಅವಳ ಗಂಡನೂ ತನ್ನನ್ನು ಈ ಪರಿ ಗೋಳಾಡಿಸಲಿಕ್ಕೆ ಕಾರಣವೇನಿರಬಹುದೆಂದು ಅವನು ಬಹು ಪರಿಯಾಗಿ ಯೋಚಿಸಿದನು ಏನೂ ತಿಳಿಯದಾಯಿತು. ಆಗ ಅವನು ಮತ್ತೆ ತಾನು ಬವಳಿ ಬಂದು ಬಿದ್ದುಕೊಂಡಾಗಿನಿಂದ ಈಗ ಸ್ಮೃತಿಯುಂಟಾಗುವವರೆಗಿನ ಮಧ್ಯಕಾಲದಲ್ಲಿ ನಡೆದ ಸಂಗತಿಗಳನ್ನು ಜ್ಞಾಪಿಸಿಕೊಳ್ಳಲಿಕ್ಕೆ ಪ್ರಾರಂಭಿಸಿದನು. ತಾನು ಬವಳಿ ಬಂದು ಬಿದ್ದ ನಂತರ ಎಷ್ಟೋ ಹೊತ್ತಿನ ಮೇಲೆ ಆ ರಮಣಿಯ ಆಜ್ಞೆಯ ಮೇರೆಗೆ ಒಬ್ಬ ಕರೀ ಮೈಬಣ್ಣದ ಟೊಣಪನು ತನ್ನನ್ನು ಹೊತ್ತುಕೊಂಡು ಸಾಗಿದ್ದು ಅವನಿಗೆ ನೆನಪಾಯಿತು. ಆ ಟೊಣಪನನ್ನು ತಾನು ಈ ಮೊದಲು ಎಲ್ಲಿಯೋ ನೋಡಿರುವಂತೆಯೂ ತೋರಹತ್ತಿತು. ಇದಕ್ಕೂ ಹೆಚ್ಚು ವಿಷಯವು ಆ ರಾತ್ರಿಯ ಗೊಂದಲದ ಬಗ್ಗೆ ಅವನಿಗೆ ತಿಳಿಯಲಿಲ್ಲ.

ಹೀಗೆ ಎಷ್ಟೋ ಹೊತ್ತಿನವರೆಗೆ ಡಾ. ಮನೋಹರನು ತನ್ನಷ್ಟಕ್ಕೆ ತಾನೇ ಯೋಚಿಸಿಕೊಂಡನಂತರ ಕಣ್ತೆರೆದು ಎದ್ದು ಕುಳಿತು, ಆ ನಾವಿನ ಮುಖ್ಯಸ್ಥನಾದ ಅಂಬಿಗರ ಸಂಜೀವನನ್ನುದ್ದೇಶಿಸಿ:—ಸಂಜೀವಾ, ಈಗ ನೀನು ನನ್ನನ್ನೆಲ್ಲಿಗೆ ಸಾಗಿಸಿಕೊಂಡು ನಡೆದಿರುವೆ? ಎಂದು ಪ್ರಶ್ನೆಮಾಡಿದನು.

''ಧನಿಯರೇ, ನಿನ್ನಿನ ರಾತ್ರಿ ನೀವು ನಮ್ಮ ಮಾತು ಕೇಳಿದ್ದರೆ ನಿಮಗೆ ಇಷ್ಟು ತೊಂದರೆಯೆಲ್ಲಿ ಉಂಟಾಗುತ್ತಿತ್ತು? ನಿಮ್ಮ ಮೇಲೆ ದೇವರ ದಯೆಯಿತ್ತೆಂದೇ ನೀವು ಆ ಸ್ತ್ರೀ ಪಾಶದಿಂದ ಪಾರಾಗಿ ಬಂದಿದ್ದೀರಿ! ನಾವು ಈಗ ನಿಮ್ಮನ್ನು ಆಚೇಧಡಕ್ಕೆ ತಲುಪಿಸುವೆವು. ಅಲ್ಲಿ ನಿಮಗೋಸುಗ ಸಿದ್ಧವಾಗಿರುವ ಮೋಟಾರಿನಲ್ಲಿ ಕುಳಿತು ಬಳಿಕ ನಿಮ್ಮ ಸ್ವಂತ ಊರಾದ ಸಿದ್ಧದೇವಪುರಕ್ಕೆ ತೆರಳಬಹುದು'' ಎಂದನು.

ಮನೋಹರನು ರೇಗಿಗೆದ್ದು:—ಸಂಜೀವಾ, ನಾನು ಯಾರೆಂದು ತಿಳಿದಿರುವೆ? ಸಿದ್ಧದೇವಪುರದಲ್ಲಿ ನನ್ನವರಾರಿರುತ್ತಾರೆ?

''ಧಣಿಯರೇ, ತಮ್ಮ ಹೆಸರು ಪಂತರೆಂದಲ್ಲವೆ? ತಾವು ಸಿದ್ಧದೇವಪುರವಾಸಿಗಳಲ್ಲವೆ? ನಮಗೆ ನಿಮ್ಮ ಹೆಸರು-ದೆಸೆಗಳೂ, ಊರೂ ಗೊತ್ತಿಲ್ಲ. ನೀವು ನಿನ್ನೆ ಸಾಯುಂಕಾಲಕ್ಕೆ ನನ್ನ ಡೋಣಿಯುನ್ನೇರಿ ''ನನ್ನನ್ನು ನದಿಯ ಪ್ರವಾಹದಲ್ಲಿ ತುಸು ಅಡ್ಡಾಡಿಸಿಕೊಂಡು ಬಾ'' ಎಂದಿದ್ದಿರಿ. ನಿಮ್ಮಿಂದ ಸಿಗಬಹುದಾದ ಹೆಚ್ಚಿನ ಇನಾಮಿನ ಸಲುವಾಗಿ ನಿನ್ನೆ ರಾತ್ರಿಯೆಲ್ಲ ನಾವು ಆಚೇಧಡದಲ್ಲಿ ನಿಮಗೋಸುಗ ತಡೆದಿದ್ದೆವು. ಬೆಳಗಿನ ಝಾವದಲ್ಲಿ ಒಬ್ಬ ವಿಕ್ರಾಳ ಸ್ವರೂಪದ ಟೊಣಪನು ನಿಮ್ಮನ್ನು ಹೊತ್ತುಕೊಂಡು ಬಂದು ಆ ಗಿಡದ ಕೆಳಗಿಳಿಸಿ, ನಮ್ಮನ್ನು ಕುರಿತು:—ಎಲೈ ಡೋಣಿಯುವರೇ, ಈ ನಿಮ್ಮ ಒಡೆಯನಾದ ಪಂತನು ನಮ್ಮಲ್ಲಿ ಬಂದಾಗ ಆಕಸ್ಮಿಕವಾಗಿ ಮೂರ್ಛೆ ತಳೆದನು. ಅದರಿಂದ ನಾನು ಈಗ ಇವನನ್ನು ಇಲ್ಲಿಗೆ ಕರೆತಂದು ಬಿಟ್ಟಿರುವೆನು. ಇವನನ್ನು ನೀವು ಈಗಲೆ ಆಚೇ ಧಡಕ್ಕೆ ಕರೆದೊಯ್ಯಿರಿ. ಅಲ್ಲಿ ಇವನಿಗಾಗಿ ಒಂದು ಮೋಟಾರಬಂಡಿಯು ಕಾದಿರುವದು. ಇವನು ಸಿದ್ಧದೇವಪುರದ ಪ್ರಸಿದ್ಧ ಪತ್ತೇದಾರನಾದ ಪಂತನು, ಎಂದು ಹೇಳಿ ಹೋದನು ಅವನು ಅಂದಂತೆ ನೀವು ಪಂತರಲ್ಲವೆ?'' ಎಂದು ಸಂಜೀವನು ಪ್ರಶ್ನೆ ಮಾಡಲು,

ಮನೋಹರ:—ಸಂಜೀವಾ, ನನ್ನನ್ನು ತಂದು ಬಿಟ್ಟವನನ್ನು ನೀವು ಗುರ್ತಿಸಬಲ್ಲಿರಾ? ಅವನು ಮತ್ತೇನು ಹೇಳಿದನು?

ಸಂಜೀವ:—ನಾವು ಅವನನ್ನು ಚೆನ್ನಾಗಿ ಗುರ್ತಿಸಲಾರೆವು. ಯಾಕಂದರೆ ಅವನು ಬಂದಾಗ ಇನ್ನೂ ಕತ್ತಲು ಗವಿದಿತ್ತು. ಮೇಲಾಗಿ ಅವನು ಅಲ್ಲಿ ಬಹಳ ಹೊತ್ತು ನಿಲ್ಲಲೂ ಇಲ್ಲ. "ನೀವು ಯಾರು? ನೀವು ಇವರನ್ನು ಹೀಗೇಕೆ ಎತ್ತಿಕೊಂಡು ಬಂದಿರಿ?" ಎಂದು ನಾವು ಆ ಗೃಹಸ್ಥನಿಗೆ ಪ್ರಶ್ನ ಮಾಡಲು, ಆತನು ಸಿಟ್ಟಿನ ಆವೇಶದಿಂದ:—"ಎಲೋ, ಗಂಗೆಮಕ್ಕಳಿರಾ, ನಿಮಗೆ ಅದೆಲ್ಲ ಪಂಚಾಯತಿಯೇತಕ್ಕೆ? ನಾನು ಹೇಳಿದಷ್ಟು ಕೆಲಸ ಮಾಡಿರಿ. ಹೆಚ್ಚಿನ ಸಂಗತಿಯ ಬಗ್ಗೆ ಇಗೋ ಈ ಚೀಟಿಯನ್ನು ಓದಿಸಿ ತಿಳಿದುಕೊಳ್ಳಿರಿ; ಎಂದವನೇ ಆ ಟೊಣಪನು ನಿಮ್ಮ ಬಕ್ಕಣದಲ್ಲಿ ಒಂದು ಚೀಟಿಯನ್ನು ಇಟ್ಟು ಹೊರಟು ಹೋದನು.

ಆಗ ಮನೋಹರನು ತನ್ನ ಬಕ್ಕಣಗೊಳಗಿಂದ ಒಂದು ಚೀಟಿಯನ್ನು ಹುಡುಕಿ ಹೊರಗೆ ತೆಗೆದನು; ಹಾಗು ಅದನ್ನು ಓದಿ ಅಂಬಿಗರನ್ನು ಕುರಿತು:—ಅಂಬಿಗರೇ, ಹಾಳಾಗಿ ಹೋಯಿತು; ಆ ಟೊಣಪನು ಕಳ್ಳನು-ದರವಡೆಖೋರನು; ಅವನು ಮಹಾ ಠಕ್ಕನು-ಅತಿ ವಿಶ್ವಾಸಘಾತುಕನು. ನೀವೂ ಆತನ ಸಂಗಡಿಗರೇ ಕಾಣುತ್ತೀರಿ. ನೀವು ನನ್ನನ್ನು ಸಾಮಾನ್ಯನೆಂದು ತಿಳಿದು, ಈ ಹುಡುಗಾಟಿಕೆ ನಡೆಸಿರುವದಾಗಿ ಕಾಣುತ್ತದೆ; ಆದರೆ ತೀವ್ರವೇ ನಿಮ್ಮ ಮಗ್ಗಲನ್ನು ಮುರಿಯದೆ ಬಿಡಲಾರೆನು. ತಿಳಿಯಿತೇ? ಎಂದವನೇ ಕ್ರೋಧಭರದಿಂದ ನಾವಿನಲ್ಲಿ ಇತ್ತಿಂದ ಅತ್ತ, ಅತ್ತಿಂದ ಇತ್ತ ಅಡ್ಡಾಡಲಾರಂಭಿಸಿದನು.

ಅಂಬಿಗರಿಗೆ ಮನೋಹರನ ಮಾತಿನ ಅರ್ಥವೇ ತಿಳಿಯಲಿಲ್ಲ. ಇವನಿಗೆ ಮತ್ತ ಯಾವುದೋ ಒಂದು ಬಗೆಯ ವಿಕಾರವು, ಇಲ್ಲವೆ ಚವಡಿಯ ಬಾಧೆಯಾಗಿರಬಹುದೆಂದೆಣಿಸಿ, ಅವನ ಕಡೆಗೆ ಕುತೂಹಲ ದೃಷ್ಟಿಯಿಂದ ಟಕಮಕ ನೋಡುತ್ತ, ತಮ್ಮ ನಾವನ್ನು ಭರದಿಂದ ನಡಿಸುತ್ತ ನಡೆದಿದ್ದರು. ಅಂಬಿಗರ ಸಂಜೀವನು ಮಾತ್ರ ಅವನ ಮಾತಿನಿಂದ ತುಸ ಗಾಬರಿ ಹೊಂದಿ:-ರಾಯರೇ, ನಮ್ಮ ಬಡವರ ಮೇಲೆ ಇಲ್ಲದ-ಸಲ್ಲದ ಆರೋಪಗಳನ್ನು ಹೊರಿಸುವದು ನಿಮ್ಮಂಥ ದೊಡ್ಡ ಮನುಷ್ಯರಿಗೆ ಸರಿಯಲ್ಲ; ನಮ್ಮ ಅಂಥ ಯಾವ ತಪ್ಪು ನಿಮ್ಮ ನಜರಿಗೆ ಬಿದ್ದಿತೆಂದು ನೀವು ಹೀಗೆ ಅನ್ನುತ್ತಿರುವಿರಿ?

ಮನೋಹರ:—ನಿಮ್ಮದೆಲ್ಲವೂ ನನಗೆ ಗೊತ್ತಾಗಿದೆ; ಇಲ್ಲದಿದ್ದರೆ ಆ ಕಳ್ಳನು ನನ್ನ ಬಕ್ಕಣದೊಳಗಿನ ಬಂಗಾರದ ಗಡಿಯಾರ, ಕೈಯೊಳಗಿನ ಪಚ್ಚದ ಉಂಗುರ, ಪಾಕೀಟಿನೊಳಗಿನ ೫೦೦ ರೂಪಾಯಿಗಳ ನೋಟು ಮುಂತಾದವುಗಳನ್ನು ಹೇಗೆ ಸೆಳೆವುತ್ತಿದ್ದನು? ಈಗ ನೀವು ನನ್ನನ್ನು ಬೇಗನೆ ಸಮೀಪದ ಪೋಲೀಸ ಚಾವಡಿಗೆ ಕರಕೊಂಡು ನಡೆಯಿರಿ. ಇನ್ನು ಸುಮ್ಮನೆ ಬಿಡುವದು ಸರಿಯಲ್ಲ, ಎನ್ನುತ್ತ ಅವನು ತನ್ನ ಪಾಕೀಟನ್ನು ಮತ್ತೆ ಮತ್ತೆ ತೆರೆದು ನೋಡುತ್ತಿದ್ದನು. ಆಗ ಅವನಿಗೆ ಆ ಪಾಕೀಟಿನ ಒಂದು ಖಾನೆ ಯಲ್ಲಿ ಒಂದರೊಂದೆಂಟಿದ್ದ ಮತ್ತೆ ಮೂರು ಚೀಟಿಗಳು ಕಂಡವು. ಅವು ಗಳ ಮೇಲ್ವಿಳಾಸಗಳನ್ನು ಓದಲು, ಅವುಗಳೊಳಗಿನ ಎರಡು ಚೀಟಿಗಳು ತನ್ನ ಹೆಸರಿಗೇ ಬರೆಯಲ್ಪಟ್ಟಿದ್ದವೆಂಬದು ಅವನಿಗೆ ತಿಳಿಯಿತು. ಮೂರನೇ ಚೀಟಿಯು ಮಾತ್ರ, ಸಿದ್ಧದೇವಪುರದ ಪಂತನ ಹೆಸರಿಗಿತ್ತು. ಮನೋ ಹರನು ಬಳ್ಳೇ ಉತ್ಸುಕತೆಯಿಂದ ಆ ಮೂರು ಚೀಟಿಗಳನ್ನೂ ಓದಿಕೊಂ ಡನು. ತದನಂತರ ಅವನು ತುಸ ಶಾಂತನಾಗಿ, ಅಂಬಿಗರನ್ನು ಕುರಿತು:- ಸಂಜೀವಾ, ನನ್ನ ಹೆಸರೇ ಪಂತನೆಂದು; ನನ್ನ ಮನೆಯು ಸಿದ್ಧದೇವಪುರ ದಲ್ಲಿದೆ. ಎಷ್ಟು ಬೇಗನೆ ಸಾಧ್ಯವೋ ಅಷ್ಟು ತೀವ್ರ ನನ್ನನ್ನು ಅಲ್ಲಿಗೆ ಕಳಿ ಸುವ ವ್ಯವಸ್ಥೆ ಮಾಡಿರಿ. ನಿಮಗೆ ನಾನು ಬಹು ದೊಡ್ಡ ಕಾಣಿಕೆಯನ್ನು ಕೊಡುತ್ತೇನೆ, ಎಂದು ಸುಮ್ಮನಾಗಲು,

ಅಂಬಿಗರು ಬಳ್ಳೇ ಭರದಿಂದ ನೌಕೆಯನ್ನು ಸಾಗಿಸಿ ಆಚೇ ಧಡಕ್ಕೆ ಬಂದ್ದರು, ಅಷ್ಟರಲ್ಲಿ ಆ ವ್ಯಕ್ತಿಯು ಹೇಳಿದ್ದಂತೆ ಅಲ್ಲಿಯೊಂದು ಮೋಟಾರ ಬಂಡಿಯು ಸಿದ್ಧವಾಗಿತ್ತು. ಈಗ ರಾತ್ರಿಯು ತೀರಿ ಸೂರ್ಯನು ಕ್ಷಿತಿ ಜದ ಮೇಲೆ ಬಂದಿದ್ದನು. ಆದರಿಂದ ಮನೋಹರನು ಯಾವ ಅನುಮಾನ ವನ್ನೂ ತಾಳದೆ, ಅಂಬಿಗರಿಗೆ ಕೊಡತಕ್ಕಷ್ಟು ಇನಾಮು ಕೊಟ್ಟು, ಆ ಮೋಟಾರನ್ನು ಹತ್ತಿ ಸಿದ್ಧದೇವಪುರದ ಕಡೆಗೆ ಸಾಗಿದನು.

ಮನೋಹರನು ಸಿದ್ಧದೇವಪುರಕ್ಕೆ ಯಥಾವಕಾಶದಲ್ಲಿ ತಲುಪಲು, ಅಲ್ಲಿ ಪಂತನ ಮನೆಯು ಪತ್ತೆಹಚ್ಚಲಿಕ್ಕೆ ಅವನಿಗೆ ಹೆಚ್ಚು ತೊಂದರೆ ವಹಿಸ ಬೇಕಾಗಲಿಲ್ಲ. ಆ ಮುಖ್ಯವು ವಸತಿಯ ಗ್ರಾಮದಲ್ಲಿ ಪಂತನ ಬಿಡಾರವು ಹಾ ಹಾ ಅನ್ನುವಷ್ಟರಲ್ಲಿ ಅವನಿಗೆ ಸಿಕ್ಕಿತು ಆಗ ಪಂತನು ಮನೆಯಲ್ಲಿದ್ದು, ಒಂದು ವರ್ತಮಾನಪತ್ರವನ್ನು ಓದುತ್ತಿದ್ದನು. ಕೂಡಲೆ ಅವನು ತನ್ನ

ಡೆಗೆ ಬಂದ ಅಪರಿಚಿತ ವ್ಯಕ್ತಿಯಾದ ಮನೋಹರನಿಗೆ ಕೂಡ್ರುಹೇಳಿ, ಇವ ನನ್ನು ದಿಟ್ಟಿಸಿ ನೋಡುತ್ತ ಕುಳಿತನು.

ಆಗ ಮನೋಹರನು ವಿನಯದಿಂದ:—ನಿಮ್ಮ ಹೆಸರೇ ಪಂತ ರೆಂದೇನು?

ಪಂತನು ಗೋಣು ಅಲ್ಲಾಡಿಸಿ ಸಮ್ಮತಿಸಿದನು.

"ನಿಮ್ಮ ವಿಳಾಸದ ಒಂದು ಪತ್ರವನ್ನು ನಿಮಗೆ ತಲುಪಿಸುವ ಸಲು ವಾಗಿ ನಾನು ಇಲ್ಲಿಗೆ ಬಂದಿರುತ್ತೇನೆ" ಎಂದಂದು ಮನೋಹರನು ತನ್ನ ಬಕ್ಕಣದೊಳಗಿನ ಒಂದು ಚೀಟಿಯನ್ನು ತೆಗೆದು ಅವನ ಕೈಗಿತ್ತನು.

ಪಂತನು ಆ ಪತ್ರವನ್ನು ಚಿತ್ತಗೊಟ್ಟು ಓದಲಾರಂಭಿಸಿದನು:—

"ಗೆಳೆಯನೇ,

ಬಹು ದಿನಗಳಿಂದ ನಿನ್ನ ಕಡೆಯ ವರ್ತಮಾನವು ತಿಳಿಯದ್ದರಿಂದ ಆಲೋಚನೆಗೊಳಗಾಗಿರುವೆನು. ಅದರಂತೆ ನಿನಗೂ ನಮ್ಮ ಬಗ್ಗೆ ಚಿಂತೆ ಯುಂಟಾಗಿರಬಹುದು. ಈಗ ಈ ಕ್ಷೇಮ ಸಮಾಚಾರದ ಪತ್ರದಿಂದ ನಿನಗೆ ಹಾಯ್ ಎನಿಸಬಹುದು

ನೀನು ಈ ವರೆಗೆ ನಮ್ಮ ಸಂವಾದವನ್ನು ತಿಳಿಯದ್ದರಿಂದ ಹೇಗೆ ಚಿಂತಾಮನಸ್ಕನಾಗಿರುವೆಯೋ, ಹಾಗೆಯೇ ನಾವಾದರೂ ನಿನ್ನನ್ನಿನ್ನೂ ಪಂಲೋಕಕ್ಕಟ್ಟದ್ದರಿಂದ ಬಹು ವ್ಯಥಿತರಾಗಿರುವೆವು. ನಾವು ಬೇಗನೆ ಆ ನಮ್ಮ ಕೃತ ಸಂಕಲ್ಪವನ್ನು ಈಡೇರಿಸುವೆವು. ನಿನಗೆ ನಮ್ಮ ಇರವನ್ನು ತಿಳಿಸುವ ಸಲುವಾಗಿಯೇ ಈ ಡಾ|| ಮನೋಹರರಾಯರ ಕೂಡ ಈ ಪತ್ರ ವನ್ನು ಕಳಿಸಿದ್ದೇವೆ ಅವರು ನಮಗೆ ವೈದ್ಯ ಚಿಕಿತ್ಸೆ ಮಾಡಬಂದು ಯಾವ ಗತಿ ಹೊಂದಿರುವರೆಂಬುದನ್ನು ಅವರ ಬಾಯಿಂದಲೇ ಕೇಳಿ ತಿಳಿದು, ಮುಂದಿನ ಕೆಲಸಕ್ಕೆ ತೊಡಗಬಹುದು. ಇತಿ—

ನಿಮ್ಮ ಸ್ಥಿರಪರಿಚಿತ,

ಫಾಕ್ಸ"



## ೧೮ ಪಾತಾಳ-ಪ್ರವೇಶ.

ಆ ಪತ್ರವನ್ನು ಓದಿ, ತನ್ನನ್ನು ಮೋಸಗೊಳಿಸುವ ಸಲುವಾಗಿ ಫಾಕ್ಸನೇ ಮೊದಲಾದ ಬದ್‌ಮಾಷರು ಮತ್ತೆ ಯಾವುದೋ ಒಂದು ಹಂಚಿಕೆಯನ್ನು ಹಾಕಿರುವರೆಂದು ಪಂತನು ಭಾವಿಸಿದನು ಬಳಿಕ ಅವನು ಡಾ|| ಮನೋಹರನನ್ನು ಕುರಿತು—ರಾಯರೇ, ನಿಮಗೆ ಈ ಪತ್ರವು ಎಲ್ಲಿ ಸಿಕ್ಕಿತು? ಎಂದು ಪ್ರಶ್ನಮಾಡಲು,

ಮನೋಹರನು ಹೇಳಿದ್ದೇನಂದರೆ:—ಈ ಪತ್ರವು ನನಗೆ ಎಲ್ಲಿ ದೊರಕಿತು, ಯಾವಾಗ ದೊರಕಿತು, ಯಾರು ಕೊಟ್ಟರು, ಮುಂತಾದು ದಾವುದನ್ನೂ ನಾನರಿಯೆನು. ನನ್ನ ಈ ಬಗೆಯ ಪ್ರತ್ಯುತ್ತರವನ್ನು ಕೇಳಿ ನೀವು ವಿಸ್ಮಯಪಡಬೇಡಿರಿ ನಾನು ನಿಮಗೆ ನನ್ನ ಸಂಪೂರ್ಣ ಸಂಗತಿಯನ್ನು ತಿಳಿಸದಿದ್ದರೆ, ನಿಮಗೆ ಈ ಪತ್ರದ ಗೊಂದಲದ ಇತ್ಯರ್ಥ ವಾಗಲಿಕ್ಕಿಲ್ಲ! ಎಂದೆಂದು ತಾನು ಯಾರು, ಆ ಅಪರಿಚಿತ ಹೆಣ್ಣುಮಗಳೊ ಡನೆ ಅವಳಲ್ಲಿಗೆ ಏಕೆ ಹೋಗಿದ್ದೆನು, ಅಲ್ಲಿ ಏನಾಯಿತು? ಮುಂತಾದು ದನ್ನು ಅವನು ವಿಸ್ತಾರವಾಗಿ ತಿಳಿಸಿದನು ಆ ಸಂಗತಿಯನ್ನು ಕೇಳಿ ಪಂತನು ಎಷ್ಟು ಆಶ್ಚರ್ಯಪಡುವನೆಂದು ಮನೋಹರನು ತರ್ಕಿಸಿದ್ದನೋ ಅದರ ಶತಾಂಶದಷ್ಟು ಕೂಡ ಅವನಿಗೆ ಸೋಜಿಗವೆನಿಸಲಿಲ್ಲ ಫಾಕ್ಸ ಹಾಗು ಜೊನ್ಸರು ಇವನನ್ನು ಈ ಪರಿ ಪೀಡಿಸಿದ್ದರಲ್ಲಿ ಆಶ್ಚರ್ಯವೇ ಇಲ್ಲೆಂದ್ಯ, ಪಂತನ ಮನೋನಿಶ್ಚಯವಾಗಿ ಬಿಟ್ಟಿತ್ತು! ಅದರಿಂದ ಅವನು ಆ ಸಂಗತಿ ಯ ಬಗ್ಗೆ ವಿಸ್ಮಯಪಡದೆ, ಇಂಥ ಸ್ಥಿತಿಯಲ್ಲೂ ಅವರು ಇವನನ್ನು ಜೀವ ದಿಂದ ಮರಳಿ ಬಿಟ್ಟಬಗ್ಗೆ ಅವನಿಗೊಂದು ಬಗೆಯ ಆಶ್ಚರ್ಯವೆನಿಸಿತು.

ಬಳಿಕ ಪಂತನು ಮತ್ತೆ ಮನೋಹರನನ್ನುದ್ದೇಶಿಸಿ:—ಡಾಕ್ಟರರೇ, ನಿಮಗೆ ಆ ಉಳಿದ ಎರಡು ಪತ್ರಗಳು ದೊರೆತದ್ದೆಲ್ಲಿ? ಅವನ್ನು ನೀವಿನ್ನೂ ಹರಿದು ಹಾಕಿಲ್ಲವಷ್ಟೇ? ಎಂದು ಕೇಳಲು,

"ಅವಾದರೂ ನಿಮ್ಮ ಪತ್ರದಂತೆಯೇ ನನ್ನ ಬಕ್ಕಣದಲ್ಲಿಯೇ ದೊರೆ ತವು. ಅವನ್ನಿನ್ನೂ ನಾಶಪಡಿಸಿಲ್ಲ, ಇಕೊಳ್ಳಿರಿ" ಎಂದೆಂದು ತನ್ನ ಹೆಸ ರಿನ ಆ ಎರಡೂ ಪತ್ರಗಳನ್ನು ಪಂತನ ಮುಂದಿಟ್ಟನು. ಕೂಡಲೆ ಪಂತನು

ಅವುಗಳನ್ನು ಕುತೂಹಲಭರದಿಂದ ಓದಲುದ್ಯುಕ್ತನಾದನು. ಅವುಗಳ ಲ್ಲೊಂದರ ಸಂಗತಿಯು ಈ ತೆರವಾಗಿತ್ತು:—

"ಡಾ. ಮನೋಹರ,

ನೀನು ನನ್ನನ್ನು ಗುರುತಿಸದಿದ್ದರೂ ನಾನು ನಿನ್ನನ್ನು ಚೆನ್ನಾಗಿ ಗುರುತಿಸಿರುತ್ತೇನೆ ನೀನು ಹಾನಗಲ್ಲಿನವನೆಂಬದೂ ಬನವಾಸಿಗೆ ನೀನು ಯಾತಕ್ಕೋಸುಗ ಹೋಗಿದ್ದೆಯೆಂಬದೂ ನನಗೆ ಗೊತ್ತಾಗಿದೆ; ಮತ್ತು ನೀನು ಅಲ್ಲಿಯ ಜಮೀನ್‍ದಾರ ಗೋವಿಂದರಾಯನ ಸಲಹೆಯಿಂದ ಅಂಬಿಕೆಯನ್ನು ಪತ್ತೆಹಚ್ಚುವ ಸಲುವಾಗಿ ಯಾವನೊಬ್ಬ ಒಳ್ಳೇ ಕುಶಲ ಗುಪ್ತ ಪೋಲೀಸನನ್ನು ನಿಯಮಿಸುವದಕ್ಕಾಗಿ ಕಾರವಾರಕ್ಕೆ ನಡೆದಿರುವೆಯೆಂಬದೂ ಗೊತ್ತುಂಟು ; ಆದರೆ ಈ ವಿಷಯದಲ್ಲಿ ನೀನು ನನ್ನ ಮಾತು ಕೇಳುವದಾದರೆ ನಮ್ಮ ಪ್ರಾಂತದಲ್ಲಿ ಅದೇಕೆ ಈ ದೇಶದಲ್ಲಿ ಸಿದ್ಧದೇವಪುರದ ಪಂತನಂತಹ ಗುಪ್ತಚಾರನು ನಿನಗೆಲ್ಲಿಯೂ ದೊರಕಲಾರನು. ಆದುದರಿಂದ ನೀನು ಬೇರೆ ಕಡೆಗೆ ಅಂಡಲೆಯದೆ, ಆತನ ಕಡೆಗೇ ಹೋಗು; ಹಾಗೂ ಅವನಿಗೆ ಆ ಕೆಲಸವನ್ನು ಒಪ್ಪಿಸು.

ನೀನು ಅಂಬಿಕೆಯನ್ನು ಪ್ರೀತಿಸುವೆಯೆಂಬದೂ, ಅವಳು ನಿನ್ನನ್ನು ಪ್ರೀತಿಸುತ್ತಿರುವಳೆಂಬದೂ ನನಗೆ ಚೆನ್ನಾಗಿ ಗೊತ್ತಿದೆ; ಅಲ್ಲದೆ ಅವಳನ್ನು ನಿನಗೇ ಕೊಟ್ಟು ಲಗ್ನ ಮಾಡಬೇಕೆಂದು ಅವಳ ತಂದೆ ಸೀತಾರಾಮರಾಯನು ಮಾಡಿದ್ದ ನಿಶ್ಚಯವೂ ನನಗರಿಯದ ಮಾತಲ್ಲ; ಆದರೆ ದೈವಗತಿಯು ಯಾರಿಗೂ ತಪ್ಪಿದ್ದಲ್ಲ. ನಿನ್ನ ವಿಷಯವಾಗಿ ನನಗೆ ಅತ್ಯಂತ ಕರುಣೆಯುಂಟಾಗಿರುವದು; ಆದರೆ ನಾನು ಈಗ ಹೆಚ್ಚಾಗಿ ದುಡ್ಡಿನ ಅಡಚಣಿಯಲ್ಲಿ ಸಿಲುಕಿರುವದರಿಂದ ನಿನಗೆ ಕೊಂಚ ತೊಂದರೆ ಕೊಡಬೇಕಾಯಿತು. ಹಿಂದಕ್ಕೆ ಬನವಾಸಿಯಲ್ಲಿ ಪ್ರಸಿದ್ಧಿ ಹೊಂದಿದ್ದ ಕೇಶವರಾಯನೆಂಬವನೇ ನಾನು. ನನ್ನ ವಿಷಯವಾಗಿ ಇದಕ್ಕೂ ಹೆಚ್ಚು ಪರಿಚಯವು ನಿನಗೀಗ ದೊರಕಲಾರದು. ಇತಿ."

ಮನೋಹರನ ಹೆಸರಿನ ಮತ್ತೊಂದು ಪತ್ರದ ಸಂಗತಿಯು

"ಮನ್ಮನ ಮನೋಹರ!

ಪ್ರಿಯಕರಾ, ನೀನು ಇಂದು ನನ್ನ ಕೈಯಿಂದ ಪಾರಾಗಿ ಹೋಗಿದ್ದರೂ, ನಿನ್ನನ್ನು ನಾನೇ ಬಿಟ್ಟುಗೊಟ್ಟಿದ್ದರೂ, ನೀನು ಪಾರಾದೆಯೆಂದು

ಮಾತ್ರ ಸರ್ವಥಾ ಬಾವಿಸಬೇಡ; ನಿನ್ನನ್ನು ಕ್ಷಮಿಸಿ ಬಿಟ್ಟಿರುವೆನೆಂದೂ ತಿಳಿಯಬೇಡ; ಆದರೆ ಇಂದು ನಾನೊಂದು ಕಾರ್ಯಸಾಧನೆಗಾಗಿ ನಿನ್ನನ್ನು ಬಿಟ್ಟುಬಿಟ್ಟದ್ದೇನೆ. ಬೇಕಾದಾಗ, ಬೇಕಾದಲ್ಲಿದ್ದರೂ ನಾನು ನಿನ್ನನ್ನು ಹಿಡಿತಂದು ನೀನು ಮಾಡಿದ ಮೋಸಕ್ಕೆ—ನಿನ್ನನ್ನು ಮನಃಪೂರ್ವಕವಾಗಿ ಪ್ರೀತಿಸುವ ಈ ಜೊನ್ಸಳನ್ನು ತುಚ್ಛೀಕರಿಸಿದ್ದಕ್ಕೆ—ನಿನಗೆ ತಕ್ಕ ದೇಹಾಂತ ಪ್ರಾಯಶ್ಚಿತ್ತವನ್ನು ಇಂದಿಲ್ಲ ನಾಳೆ ಕೊಟ್ಟೇ ಕೊಡುತ್ತೇನೆಂಬದನ್ನು ಚೆನ್ನಾಗಿ ಜ್ಞಾಪಿಸಿಕೊಂಡಿರು. ನಿನ್ನ ಕತ್ತಿನ ನೆತ್ತರದಲ್ಲಿ ಕೈತೊಳೆಯದ ಹೊರತು ನಿನ್ನಿಂದಾದ ಅಪಮಾನದ ಸೇಡು ತೀರಲಿಕ್ಕಿಲ್ಲ; ಮತ್ತು ಅಂದೇ ನಿನಗೆ ಉಪೇಕ್ಷಿತ ಸ್ತ್ರೀಯು ನಾಗಿಣಿಗಿಂತಲೂ ಭಯಂಕರಳೆಂಬದು ಅನುಭವಕ್ಕೆ ಬಂದೀತು. ಇತಿ.

ನಿನ್ನಿಂದ ಉಪೇಕ್ಷಿತಳಾದ ಜೊನ್ಸ"

ಈ ಬಗೆಯಾಗಿದ್ದಿತು.

ಬನವಾಸಿಯ ಕೇಶವ, ಮನೋಹರಮಯ ವಿನಾಯಕ, ಗೋಪೀಚಂದನ ವೈದ್ಯರಾಜ ಹಾಗು ಜೊನ್ಸಳ ಡಾಕ್ಟರ ಫಾಸ್ಸ ಈ ಎಲ್ಲ ಹೆಸರುಗಳನ್ನು ಧರಿಸಿದ ಒಂದೇ ವ್ಯಕ್ತಿಯಿದ್ದು, ಅದೇ ವ್ಯಕ್ತಿಯು ತನ್ನ ಅನುಯಾಯಿಗಳ ಸಹಾಯದಿಂದ ಅಲ್ಲಲ್ಲಿ ಅಲ್ಲೋಲಕಲ್ಲೋಲವನ್ನು ಮಾಡುತ್ತ ತನಗೆ ಪ್ರತಿಸ್ಪರ್ಧಿಯಾಗಿರುವದೆಂಬದನ್ನು ಪಂತನು ಈ ಮೊದಲೇ ತರ್ಕಿಸಿದ್ದನು. ಅದರಿಂದ ಆ ಮೂರೂ ಪತ್ರಗಳನ್ನು ಓದಿದರೂ ಪಂತನಿಗೆ ವಿಶೇಷವೇನೂ ಅನಿಸಲಿಲ್ಲ ಬಳಿಕ ಆವನು ಮುಗುಳುನಗೆಯಿಂದ ಮನೋಹರನನ್ನು ಕುರಿತು:— ಡಾಕ್ಟರರೇ, ತಮ್ಮ ಪೂರ್ವ ಜನ್ಮಗಳ ಸುಕೃತದಿಂದಲೇ ತಾವು ಇಂದು ಆ ನರರಾಕ್ಷಸರ-ಕೊಲೆಗಡಕರ-ಕೈಯೊಳಗಿಂದ ಪಾರಾಗಿ ಬಂದಿರುತ್ತೀರಿ! ಎಂದನು.

ಮನೋ:—ತಾವು ಆ ಜನರನ್ನು ಬಲ್ಲಿರಾ?

ಪಂತ:—ಇಂಥ ಹಲಕೆಲವು ಜನರ ಪರಿಚಯವನ್ನು ಮಾಡಿಕೊಳ್ಳದ ಹೊರತು ನಮ್ಮ ಬಾಳು ನಡೆಯಲಾರದು. ಈಗ ಅದಿರಲಿ. ಅಂಬಿಕೆಯ ಚಿಕ್ಕಪ್ಪನಾದ ಗೋಪಿಂದರಾಯನ ಸ್ವಭಾವಪರಿಚಯವು ನಿಮಗೆ ಚೆನ್ನಾಗಿದೆಯೋ?

ಮನೋ:—ಅವರು ದೊಡ್ಡ ಮನುಷ್ಯರು ಬನವಾಸಿಯ ಜನ ರೆಲ್ಲರೂ ಅವರನ್ನು ಸಭ್ಯಗೃಹಸ್ಥರೆಂದು ಸನ್ಮಾನಿಸುತ್ತಿರುತ್ತಾರೆ.

ಪಂತ:— ನೀವು ನನ್ನೊಡನೆಯೇ ಕೆಲ ದಿನ ಇದ್ದು, ನನ್ನ ಕೆಲಸದಲ್ಲಿ ಸಹಾಯಮಾಡುವದಾದರೆ ಅಂಬಿಕೆಯ ಪತ್ತೆ ಹಚ್ಚುವ ಉದ್ಯೋಗಕ್ಕೆ ಹತ್ತುವೆನು. ಇದಕ್ಕೆ ನಿಮ್ಮ ಸಮ್ಮತಿಯುಂಟೋ?

ಮನೋ:—ನನ್ನ ಅಡ್ಡಿಯಿಲ್ಲ; ಆದರೆ ನನ್ನಿಂದ ತಮಗೆ ಏನಾಗ ಬೇಕಾಗಿದೆಯೆಂಬದನ್ನು ತಿಳಿಸುವಿರಾ?

ಪಂತ:—(ಉತ್ಸುಕತೆಯಿಂದ) ನಿನ್ನಿನ ರಾತ್ರಿಯಲ್ಲಿ ನೀವು ಆ ಅಪ ರಿಚಿತ ಹೆಣ್ಣುಮಗಳೊಡನೆ ಯಾವ ಬಂಗ್ಲೆಗೆ ಹೋಗಿದ್ದಿರೋ ಅಲ್ಲಿಗೆ ನನ್ನನ್ನು ಕರೆದೊಯ್ಯುವಿರಾ? ಆ ದಾರಿಯು ಲಕ್ಷ್ಯದಲ್ಲಿದೆಯೋ?

ಮನೋ:—ಛೇ-ಛೇ! ಆ ಕಟ್ಟಡವಿಯೊಳಗಿನ ದಾರಿಯು ನನ್ನ ಸ್ಮರಣದಲ್ಲಿಲ್ಲ. ನಾವು ಮಧ್ಯರಾತ್ರಿಯ ಕಾರ್ಗತ್ತಲೆಯಲ್ಲಿ ಅಲ್ಲಿಗೆ ಹೋದದ್ದು. ಇದ್ದರಿಂದ ಈಗ ಆ ದಾರಿಯನ್ನು ಕಂಡುಹಿಡಿಯುವದು ದುಸ್ತರವು. ಆದರೂ ಪ್ರಯತ್ನಮಾಡಿದರೆ ನಿಮ್ಮನ್ನು ಆ ಬಂಗ್ಲೆಗೆ ಕರೆದೊಯ್ಯಬಹುದು.

ಪಂತ: ಭಲೆ! ಭಲೆ!! ಹಾಗೇ ಆಗಲಿ ಇಂದು ನೀವು ನನ್ನಲ್ಲೇ ಊಟಮಾಡಿರಿ; ಹಾಗು ನಿಮ್ಮ ನಿದ್ರೆ-ವಿಶ್ರಾಂತಿಗಳಾದ ಬಳಿಕ ಮಧ್ಯಾಹ್ನ ದಲ್ಲಿ ಅತ್ತ ಹೋಗೋಣ, ಎಂದೆಂದು ಅವನ ಊಟಪಾಟಗಳ ವ್ಯವಸ್ಥೆ ಮಾಡಿಸಿದನು.

ಮನೋಹರನು ನಿದ್ರೆಯಿಂದ ಎಚ್ಚತ್ತು ಕೋಣೆಯಿಂದ ಹೊರಗೆ ಬರುವಷ್ಟರಲ್ಲಿ ಪಂತನೂ ತನ್ನ ಎಲ್ಲ ಕೆಲಸಗಳನ್ನು ತೀರಿಸಿಕೊಂಡು ಘಾಕ್ಸ- ಜೊನ್ಸರ ಆ ಬಂಗ್ಲೆಯ ಶೋಧಕ್ಕೆ ಹೊರಡುವದಕ್ಕಾಗಿ ಸಜ್ಜಾದನು. ಬಳಿಕ ಇಬ್ಬರೂ ಒಂದು ಸ್ಪೆಶಲ್ ಮೋಟಾರಕಾರಿನಲ್ಲಿ ಕುಳಿತು ಸಿದ್ಧದೇವ ಪುರದಿಂದ ಗೆರಸಪ್ಪೆಯ ಹತ್ತರದ ಶರಾವತೀ ತೀರಕ್ಕೆ ನಡೆದರು; ಹಾಗು ಅಲ್ಲಿಗೆ ತಲುಪುತ್ತಲೇ ಒಂದು ಡೋಣಿಯನ್ನು ಏರಿ ಪರತೀರಕ್ಕೆ ಸಾಗಿ, ಅಲ್ಲಿಂದ ಇಬ್ಬರೂ ಕಾಲುನಡಿಗೆಯಿಂದಲೇ ಆ ಬಂಗ್ಲೆಯ ಅನುಸಂಧಾನಕ್ಕೆ ತೆರಳಿದರು.

ಮನೋಹರನಿಗೆ ಆ ದಾರಿಯು ಸಂಪೂರ್ಣವಾಗಿ ಸ್ಮರಣದಲ್ಲಿರಲಿಲ್ಲ.

ಅದರಿಂದ ಅವರು ನಡುನಡುವೆ ತಪ್ಪುತ್ತ-ತಾಕುತ್ತ ನಡೆದು ಸರಾಸರಿ ಸಂಜೆಯ ೫ ಗಂಟೆಯ ಸಮಯಕ್ಕೆ ಆ ಬಂಗ್ಲೆಯ ಕಂಪೌಂಡಿಗೆ ಹೋಗಿ ತಲುಪಿದರು. ಅದೇ ಕಾಲಕ್ಕೆ ಅತ್ತ ಕಡೆಯಿಂದ ಒಬ್ಬ ಒಕ್ಕಲಿಗನು ಬರುತ್ತಿದ್ದನು. ಅವನನ್ನು ಕುರಿತು ಪಂತನು:—ಏನಯ್ಯಾ ಹಿರಿಯಾ, ಈ ತೋಟವು ಯಾರದು? ಎಂದು ಪ್ರಶ್ನೆ ಮಾಡಿದನು

"ಸ್ವಾಮಿ, ಇದು ನಮ್ಮ ಸಾವುಕಾರರದು."

ಒಕ್ಕಲಿಗನ ಈ ಉತ್ತರವನ್ನು ಕೇಳಿ ಪಂತನು ಗೊಂದಲದಲ್ಲಿಬಿದ್ದನು. ಕ್ಷಣಕಾಲದ ನಂತರ ಅವನು:—ಏನಪ್ಪಾ ಯಜಮಾನ, ನಿಮ್ಮ ಸಾವುಕಾರರಾರು? ಅವರು ಯಾವ ಊರಲ್ಲಿರುತ್ತಾರೆ?

"ದೇವರು ಅವರು ಬತ್ತೀರಿಯವರು ಅವರ ಹೆಸರು ಲಾಂಗಮನ್ ಸಾಹೇಬರು. ಕೆಲದಿನಗಳ ಹಿಂದೆ ಅವರು ತೀರಿಕೊಂಡರು ಈಗ ಇದನ್ನು ಬನವಾಸಿಯ ಗೋವಿಂದರಾಯರು ಕೊಂಡುಕೊಂಡಿರುವರಂತೆ" ಒಕ್ಕಲಿಗನ ಈ ಉತ್ತರದಿಂದ ಪಂತನ ಕಣ್ಣಲ್ಲಿ ಕಿಡಿಗಳು ತೋರಿದವು ಒಕ್ಕಲಿಗನು ಕಣ್ಣುಮರೆಯಾಗುತ್ತಲೆ ಪಂತನು ಮನೋಹರನನ್ನು ಕುರಿತು:— ಡಾಕ್ಟರರೇ, ಅಂಬಿಕೆಯ ಕಕ್ಕನು—ನಿಮ್ಮ ಮಾವನ ತಮ್ಮನು ನೀವು ಹೇಳಿಕೊಳ್ಳುತ್ತಿರುವಂತಹ ದೊಡ್ಡ ಮನುಷ್ಯನಾಗಿ ತೋರುವದಿಲ್ಲ. ಅಂಬಿಕೆಯ ಹರಣದಲ್ಲಿ ಅವನ ಅಂಗವು ಒಂದಿಲ್ಲೊಂದು ತೆರವಾಗಿ ಇರಲೇಬೇಕೆಂದು ನನಗನಿಸುತ್ತದೆ ಅದು ಹೇಗೆಯೇ ಇರಲಿ, ಆ ಬಗ್ಗೆ ಹಿಂದಿನಿಂದ ನೋಡಿಕೊಳ್ಳುವಾ, ಎಂದೆಂದು ಇಬ್ಬರೂ ಆ ಬಂಗ್ಲೆಯ ಉಪವನವನ್ನು ಪ್ರವೇಶಿಸಿದರು

ಆ ತೋಟದಲ್ಲಿ ನಾನಾಬಗೆಯ ಫಲ-ಪುಷ್ಪಗಳ ವೃಕ್ಷಗಳು ಗಗನಚುಂಬಿತವಾಗಿ ಬೆಳೆದಿದ್ದವು ಹುಲ್ಲಂತೂ ಒಳ್ಳೇ ದಟ್ಟವಾಗಿ ಬೆಳೆದಿತ್ತು. ಅದರಿಂದ ಆ ಸ್ಥಾನವು ಮನುಷ್ಯ ವಸತಿಗೆ ಕೇವಲ ಅಯೋಗ್ಯವಾಗಿ ತೋರುತ್ತಿತ್ತು ಅವರಿಬ್ಬರೂ ಆ ಪುರುಷಪ್ರಮಾಣದ ಹುಲ್ಲಿನೊಳಗಿಂದ ಎಷ್ಟೋ ದಾರಿಯನ್ನು ಕ್ರಮಿಸಿದ ಬಳಿಕ ಅವರಿಗೊಂದು ವಿಸ್ತೃತವಾದ, ಆದರೆ ಹೊರಗಿನಿಂದ ಜೀರ್ಣ-ಶೀರ್ಣವಾಗಿ ತೋರುವ ಬಂಗ್ಲೆಯು ಕಾಣಿಸಿಕೊಂಡಿತು ಅವರು ಬಂಗ್ಲೆಯ ಸಮೀಪದಲ್ಲಿ ಹೋದಾಗ ಮೇಲಂತಸ್ತಿನೊಳಗಿನ ಪಶ್ಚಿಮದಿಕ್ಕಿನ ಒಂದು ಕಿಡಿಕೆಯು ತೆರೆಯಲ್ಪಟ್ಟದ್ದು,

ಅದರೊಳಗೆ ನಿಂತಿದ್ದ ಒಬ್ಬ ರೂಪಲಾವಣ್ಯಯುಕ್ತ ನಡುಹರೆಯದ ಹೆಂಗಸು ತನ್ನ ನಿಡಿದಾದ ಕೂದಲುಗಳನ್ನು ಸಾಯುಂಕಾಲದ ಸೂರ್ಯನ ಕಿರಣಗಳಿಂದ ಆರಿಸಿಕೊಳ್ಳುತಲಿದ್ದಳು. ಪಂತನು ದೂರದಿಂದಲೇ ನೋಡಿ, ಅವಳು ಫಾಕ್ಸನ ಉಪಪತ್ನಿಯಾದ ಜೊನ್ಸಳೆಂಬದನ್ನು ಕಂಡುಹಿಡಿದನು. ಅವಳನ್ನು ನೋಡಿ, ಇವಳೇ ಮೊದಲಿನ ರಾತ್ರಿಯಲ್ಲಿ ಕಂಡ ಆ ಅಪರಿಚಿತ ಸ್ತ್ರೀಯೆಂಬದನ್ನು ಮನೋಹರನು ಗುರುತಿಸಿ, ಗಾಬರಿಗೊಂಡನು; ಹಾಗು ಪಂತನನ್ನು ಕುರಿತು ಮೆಲ್ಲಗೆ:—ಪಂತರೇ, ಇವಳೇ ಆ ಮೋಸಗಾರ್ತಿಯು, ಎಂದನು.

ಪಂತ:— ನಿನಗಿಂತಲೂ ನಾನು ಇವಳನ್ನು ಚೆನ್ನಾಗಿ ಬಲ್ಲೆನು. ತಮ್ಮಾ, ನಾವು ಈಗ ಈ ಮಾರ್ಗದಿಂದ ಬಂಗ್ಲೆಯನ್ನು ಸೇರದೆ ಬೇರೆ ಕಡೆಯಿಂದ ಹೋಗೋಣ ನಡೆ, ಎಂದು ಮೃದು ಸ್ವರದಿಂದ ನುಡಿದು, ಅತ್ತ ಕಡೆಗೆ ನಡೆದನು.

ಪಂತನ ಇಚ್ಛೆಯಂತೆ ಜೊನ್ಸಳ ಕಣ್ಣಿಗೆ ಬೀಳದ ಹಾಗೆ ಅವರೀರ್ವರೂ ಆ ಬಂಗ್ಲೆಯನ್ನು ಪ್ರವೇಶಿಸಿದರು; ಹಾಗು ಲಗುಬಗೆಯಿಂದ ಮೇಲಟ್ಟವನ್ನೇರಿ, ಯಾವ ಕೋಣೆಯಲ್ಲಿ ಜೊನ್ಸಳು ನಿಂತುಕೊಂಡಿದ್ದಳೋ, ನೆಟ್ಟಗೆ ಅಲ್ಲಿಗೇ ಹೊರಟು ಹೋದರು. ಪಂತನನ್ನು ದೃಷ್ಟಿಸಿದೊಡನೆ ಜೊನ್ಸಳು ಓಡಹತ್ತಿದಳು. ಪಂತನೂ ಅವಳನ್ನು ಹಿಂಬಾಲಿಸಿದನು. ಅವಳು ಒಂದು ಕೋಣೆಯಿಂದ ಮತ್ತೊಂದು ಕೋಣೆಗೆ, ಅದರಿಂದ ಮೂರನೇ ಕೋಣೆಗೆ ಹೀಗೆ ಒಂದೇಸವನೆ ಓಡುತಲಿದ್ದಳು. ಪಂತನೂ ಅವಳನ್ನು ಎಡೆಬಿಡದೆ ಹಿಂಬಾಲಿಸಿದ್ದನು ಕಟ್ಟಕಡೆಗೆ ಅವಳು ಒಂದು ಕೋಣೆಯನ್ನು ಹೊಕ್ಕವಳೇ ಒಳಗಿನಿಂದ ಬಾಗಿಲವನ್ನಿಕ್ಕಿ ಅಗಳಿ-ಚಿಲಕಗಳನ್ನು ಹಾಕಿಕೊಂಡು ಬಿಟ್ಟಳು.

ಕೂಡಲೆ ಪಂತನು ತನ್ನ ಶಕ್ತಿಸರ್ವಸ್ವವನ್ನುಪಯೋಗಿಸಿ ಆ ಕದವನ್ನು ಮುರಿದು ಒಳಹೊಕ್ಕನು; ಆದರೆ ಅಲ್ಲೇನಿದೆ? ಅಲ್ಲಿ ಯಾರೂ ಇರಲಿಲ್ಲ. ಈ ಮೊದಲು ಯಾರಾದರೂ ಬಂದ ಸುಳುವು ಕೂಡ ಅಲ್ಲಿರಲಿಲ್ಲ. ಇಷ್ಟೇ ಅಲ್ಲ; ಆ ಕೋಣೆಯಿಂದ ಬೇರೆ ಕಡೆಗೆ ಹೋಗಲಿಕ್ಕೆ ಬೇರೆ ಬಾಗಿಲವಾಗಲಿ-ಕಿಟಕಿಯಾಗಲಿ ಒಂದೂ ಇರಲಿಲ್ಲ. ಆ ಕೋಣೆಯಲ್ಲಿ ಬೆಳಕಿಗಾಗಿ ಒಂದೆರಡು ಬೆಳಕಿಂಡಿಗಳಿದ್ದು ಅವಕ್ಕೆ ಭದ್ರವಾದ ಕಬ್ಬಿಣದ ಗಜಗಳಿದ್ದವು.

ಪಂತನು ಅವನ್ನೆಲ್ಲ ನೋಡಿ ಇಲ್ಲಿಂದ ಯಾರೂ-ಮನುಷ್ಯನೇ ಏಕೆ, ಇತರ ಯಾವುದೊಂದು ಪ್ರಾಣಿಯೂ ಕೂಡ-ಹೊರಗೆ ಹೋಗಲಿಕ್ಕೆ ಶಕ್ಯವಿಲ್ಲೆಂಬ ದನ್ನು ಖಾತ್ರಿಮಾಡಿಕೊಂಡನು. ಬಳಿಕ ಅವನು ಆ ಕೋಣೆಯ ಸಂದ ಮೂಲೆಗಳನ್ನು ಹುಡುಕಿ ಹುಡುಕಿ ಬೇಸತ್ತನು ಆ ಕೋಣೆಯಲ್ಲಿ ಒಂದು ಕಪಾಟು, ಒಂದು ಚಿಕ್ಕ ಪಲ್ಲಂಗ ಹಾಗು ಅದರ ಮೇಲೊಂದು ಚಿಕ್ಕ ಹಾಸಿಗೆ ಇಷ್ಟೇ ಜಿನಸುಗಳು ಇದ್ದವು. ಕಪಾಟಿನ ಬಾಗಿಲು ತೆರೆದದ್ದೇ ಇದ್ದಿತು. ಅದರಿಂದ ಅವನು ಅದನ್ನು ಮತ್ತಿಷ್ಟು ತೆರೆದು ಒಳಗೆ ನೋಡಿ ದನು. ಅಲ್ಲೆಲ್ಲಿಯೂ ಜೊನ್ನಳ ಸುಳಿವೇ ಅವನಿಗೆ ಹತ್ತದಾಯಿತು. ಅದ ರಿಂದ ತಾನು ಈ ವರೆಗೆ ಯಾರನ್ನು ಹಿಂಬಾಲಿಸಿ ಬಂದೆನೋ ಅವಳು ಜೊನ್ನಳೋ ಅಥವಾ ಈ ಅರಣ್ಯಮಧ್ಯದೊಳಗಿನ ಯಾವುದೊಂದು ಭೂತ-ಪಿಶಾಚಿಯೋ ಎಂಬ ಬಗ್ಗೆ ಪಂತನಿಗೆ ಅನುಮಾನವೆನಿಸಿತು.

ಇತ್ತ ಪಂತನು ಜೊನ್ನಳನ್ನು ಹಿಂಬಾಲಿಸಿ ಹೀಗೆ ಗೊಂದಲಕ್ಕೆ ಬಿದ್ದನೋ, ಅತ್ತ ಮನೋಹರನೂ ಬೇರೆವಿಧದಿಂದ ಗೊಂದಲಕ್ಕೀಡಾದನು.

ಪಂತನು ಜೊನ್ನಳನ್ನು ಹಿಡಿಯುವ ಸಲುವಾಗಿ ಅವಳನ್ನು ಹಿಂಬಾ ಲಿಸಿ ನಡೆದಾಗ ಮನೋಹರನು ತನ್ನ ಮನದಲ್ಲಿ:—ಈ ಓರ್ವ ಅಬಲೆ ಯನ್ನು ಹಿಡಿಯಲಿಕ್ಕೆ ನಾವೀರ್ವರೂ ಹೋಗುವದು ಕೇವಲ ಲಜ್ಜಾಸ್ಪ ದವು; ಅದರಿಂದ ನಾನು ಇಲ್ಲಿಯೇ ಇರಬೇಕು ಎಂದಂದುಕೊಂಡು, ಅಲ್ಲಿಯೇ ನಿಂತುಕೊಂಡನು ಮನೋಹರನು ಆ ಅಬಲೆಯಿಂದಲೇ ಪೂರ್ವ ರಾತ್ರಿಯಲ್ಲಿ ಪ್ರಾಣಾಂತ ಸಂಕಟಕ್ಕೀಡಾದದ್ದನ್ನು ಈಗಾಗಲೇ ಮರೆತು ಬಿಟ್ಟದ್ದು ಅವನ ದುರ್ದೈವವೆಂದೇ ಹೇಳಬೇಕಾಗುವದು. ಪಂತನು ಜೊನ್ನಳನ್ನು ಹಿಡಿದೇ ಹಿಡಿಯುವನು ನಾನು ಆ ಕೆಲಸಕ್ಕೆ ಹೋಗದೆ, ಅದೇ ಅವಧಿಯಲ್ಲಿ ನಾನು ಫಾಕ್ಸನನ್ನು ಹಿಡಿದರೆ ಸ್ವಲ್ಪಾವಕಾಶದಲ್ಲಿ ಎಲ್ಲ ಕೆಲಸವೂ ಪೂರ್ಣವಾದಂತಾಗುವದೆಂದು ಬಗೆದು, ಮನೋಹರನು ಪಂತ ನನ್ನು ಅನುಸರಿಸಿ ಹೋಗದೆ, ಬೇರೆ ಮಾರ್ಗದಿಂದ ಫಾಕ್ಸನ ಅನುಸಂಧಾ ನಕ್ಕೆ ನಡೆದನು.

ಇಷ್ಟರಲ್ಲಿ ಯಾರೋ ಅಟ್ಟದ ಪಾವಟಗೆಗಳನ್ನು ಏರಿಬರುತ್ತಿರುವ ರೆಂಬದು ಮನೋಹರನಿಗೆ ತಿಳಿಯಿತು. ಕೂಡಲೆ ಅವನು ಮರೆಗೆ ನಿಂತು ಬರುವವನ ದಾರಿ ಕಾಯಹತ್ತಿದನು. ತುಸ ಹೊತ್ತಿನಲ್ಲಿಯೇ ಮನೋ

ಹರನು ಪೂರ್ವ ರಾತ್ರಿಯಲ್ಲಿ ನೋಡಿದ್ದ ಆ ವಿಚಿತ್ರ ಪ್ರಕಾರದ ರೋಗದಿಂದ ಪೀಡಿತನಾಗಿದ್ದ ರೋಗಿಯು-ಡಾಕ್ಟರ ಫಾಕ್ಸನು ಮೇಲಟ್ಟವನ್ನೇರಿ, ಇವನ ಕಡೆಗೆ ಕಣ್ಣೆತ್ತಿ ಕೂಡ ನೋಡದೆ, ಬೇರೊಂದು ಕೋಣೆಯನ್ನು ಪ್ರವೇಶಿಸಿದನು ಮನೋಹರನು ಧಾವಿಸುತ್ತ ಹೋಗಿ ಆ ಕೋಣೆಯ ಬಾಗಿಲಲ್ಲಿ ನಿಂತುಕೊಂಡನು.

ಫಾಕ್ಸನು ಮನೋಹರನನ್ನು ನೋಡಿ ಕೊಂಚವೂ ವಿಸ್ಮಯಗ್ರಸ್ತನಾಗಲಿಲ್ಲ ಅವನು ಮಂಗುಳುನಗೆಯಿಂದ:—ಮನೋಹರ ಡಾಕ್ಟರರೇ, ಮತ್ತೇಕೆ ಇಲ್ಲಿಗೆ ಬಂದಿರಿ? ಎಂದು ಪ್ರಶ್ನ ಮಾಡಿದನು.

ಮನೋಹರನು ಕರ್ಕಶಸ್ವರದಿಂದ:-ಏತಕ್ಕಾಗಿ ಬಂದಿರುವೆನೆಂಬದು ಈಗ ತಾನೆ ತಿಳಿಯುವದು; ನೀಚಾ ಕೊಲೆಗಡಕಾ, ಈಗ ನಿನಗೆ ನನ್ನಿಂದ ತಕ್ಕ ಶಿಕ್ಷೆಯಾಗುವದು.

ಈ ಮಾತನ್ನು ಕೇಳಿ, ಫಾಕ್ಸನು ಸ್ವಲ್ಪವೂ ಸಿಟ್ಟಿಗೇಳದೆ ಮತ್ತೆ ಮೊದಲಿನಂತೆ ಮುಗುಳುನಗೆಯಿಂದಲೇ:—ರಾಯರೇ, ನೀವು ನನಗೆ ತಕ್ಕ ಶಿಕ್ಷೆಯನ್ನು ಕೊಡಲಿಕ್ಕೆ ಬಂದಿರುವಿರಲ್ಲವೇ? ಭಲೆ-ಭಲೆ! ನಿಮ್ಮ ಮಾತನ್ನು ಕೇಳಿ, ನನಗೆ ಬಹು ಸಂತೋಷವಾಗುತ್ತಿದೆ ಅದಿರಲಿ ನನ್ನನ್ನು ಶಿಕ್ಷಿಸಲಿಕ್ಕೆ ಈಗ ನೀವೊಬ್ಬರೇ ಬಂದಿರುವಿರೊ, ಇಲ್ಲವೆ ಮತ್ತಾರನ್ನಾದರೂ ಸಹಾಯಕ್ಕೆ ಕರೆತಂದಿರುವಿರೋ? ಸಿದ್ಧದೇವಪುರದ ಪಂತರನ್ನೇ ಕರೆತಂದಿರಬಹುದಾಗಿದೆಯಲ್ಲವೇ?

ಮನೋಹರನು ಫಾಕ್ಸನ ಆ ಮಾತುಗಳಿಗೆ ಕಿವಿಗೊಡದೆ ಬಕ್ಕಣದೊಳಗಿನ ಪಿಸ್ತೂಲನ್ನು ಹೊರತೆಗೆದನು ಅದನ್ನು ಅವನು ಪಂತನಿಂದ ಪಡೆದಿದ್ದನು ಪಿಸ್ತೂಲಿನ ಗುರಿಯನ್ನು ಫಾಕ್ಸನ ಹಣೆಗೆ ಇಟ್ಟು:—ಓಡಿ ಹೋಗಲು ಪ್ರಯತ್ನಿಸಿದೆಯೆಂದರೆ ಈ ಪಿಸ್ತೂಲಿನ ಗುಂಡಿನಿಂದ ನಿನ್ನ ತಲೆಯನ್ನು ಹಾರಿಸಿಬಿಟ್ಟೇನು, ಎಂದು ಗದ್ದರಿಸಿದನು

ಇಷ್ಟಾದರೂ ಫಾಕ್ಸನು ಸ್ವಲ್ಪವೂ ಹೆದರದೆ ಮೊದಲಿನಂತೆ ಮುಗುಳುನಗೆಯಿಂದಲೇ:—ಛೇ-ಛೇ! ನಾನು ಓಡಿಹೋಗಲೇಕೆ? ನಿಮ್ಮ ಹೆದರಿಕೆಗಾಗಿ ಓಡಲೋ? ಅಥವಾ ನಿಮ್ಮ ಈ ಪಿಸ್ತೂಲಿನ ಗುಂಡಿಗೆ ಹೆದರಿ ಓಡಲೋ? ಹಿಟ್ಟಿನಲ್ಲಿ ನೀವು ನನ್ನನ್ನು ಸೆರೆಹಿಡಿಯಬೇಕೆಂದೇ ಬಂದಿರುವಿರಷ್ಟೇ?

ಮನೋ:—ಅಹುದು

ಫಾಕ್ಸ:— ಯಾವಾಗ ಹಿಡಿಯಬೇಕೆಂದಿರುವಿರಿ?

ಮನೋ:—ಈಗಂದೀಗಲೇ

ಫಾಕ್ಸನು ಗಹಗಹಿಸಿ ನಗಹತ್ತಿದನು. ಕೆಲ ಕ್ಷಣಗಳ ನಂತರ:—ಏನು, ನಿಮ್ಮ ಅಂಬೋಣವಾದರೂ ಏನಿದೆ? ನೀವು ನನ್ನ ಕೈ-ಕಾಲುಗಳಿಗೆ ಬೇಡಿಗಳನ್ನು ತೊಡಿಸಬೇಕೆಂದಿರುವಿರಾ? ಹಾಗು ಆ ವರೆಗೆ ನಾನು ಸ್ವಲ್ಪವೂ ಗೊಂದಲ ಮಾಡದೆ ಸುಮ್ಮನೆ ಇರಬೇಕೆನ್ನುತ್ತಿರುವಿರಾ? ಎಂದು ವ್ಯಂಗ್ಯದನಿಯಿಂದ ನುಡಿದನು.

ಮನೋಹರನು ಗಟ್ಟಿಯಾಗಿ:—ಹಾ! ಹಾಗೆಯೇ ಮಾಡಬೇಕೆಂದಿರುವೆನು.

ಫಾಕ್ಸ:—ಒಂದುವೇಳೆ ನಾನು ಹಾಗೆ ಸ್ತಬ್ಧನಾಗಿ ನಿಲ್ಲದಿದ್ದರೆ?....

ಮನೋ:—ಈ ಪಿಸ್ತೂಲಿನಿಂದ ನಿನ್ನನ್ನು ಕೊಲ್ಲುತ್ತೇನೆ.

ಫಾಕ್ಸ:—ಛೇ-ಛೇ! ರಾಯರೇ, ನಿಮಗೆ ಅಷ್ಟು ಕಷ್ಟ ಕೊಡುವದೆಂದರೇನು? ಇಲ್ಲ, ನಾನು ಇಲ್ಲಿಂದ ಅಣುಮಾತ್ರವೂ ಕದಲುವದಿಲ್ಲ. ನಿಮ್ಮ ಇಚ್ಛೆಯಂತೆ ನನ್ನನ್ನು ಬಂಧಿಸಿರಿ; ಆದರೆ ರಾಯರೇ, ನಿಮ್ಮಿಂದ ನನ್ನನ್ನು ಕೊಲ್ಲಲಿಕ್ಕಾಗುವದಿಲ್ಲ. ಇಷ್ಟೇ ಅಲ್ಲ, ನಿಮ್ಮಿಂದ ಇಲ್ಲಿಯ ಒಂದು ಕಡ್ಡಿಯನ್ನು ಕೂಡ ಕದಲಿಸಲಿಕ್ಕಾಗುವದಿಲ್ಲವಲ್ಲ!

ಮನೋಹರ:—“ಅದೆಲ್ಲ ಹರಟೆಯನ್ನು ಸಾಕು ಮಾಡು” ಎಂದವನೇ ಫಾಕ್ಸನ ಕೈಕಾಲುಗಳಿಗೆ ಬೇಡಿತೊಡಿಸಲು ತುಸ ಮುಂದರಿದನು. ಕೂಡಲೆ ಒಂದು ವಿಕ್ರಾಳ ಧ್ವನಿಯಾಗಿ, ಮನೋಹರನ ದೇಹವು ನಿಂತಲ್ಲಿಯೇ ಭೂಮಿಯಲ್ಲಿ ಅಡಗಿ ಹೋಯಿತು! ಫಾಕ್ಸನು ಗಹಗಹಿಸಿ ನಗುತ್ತ ಆ ಕೋಣೆಯೊಳಗಿಂದ ಬೇರೆ ಕಡೆಗೆ ಹೊರಟುಹೋದನು.

## ೧೯ ಮುಷ್ಟಿಯುದ್ಧ.

ಮನೋಹರನನ್ನು ಮೋಸದಿಂದ ಪಾತಾಳಕ್ಕಿಳಿಸಿ ವಿಜಯಹೊಂದಿದ ಫಾಕ್ಸನು ಆ ಸುದ್ದಿಯನ್ನು ಜೊನ್ಸಳಿಗೆ ತಿಳಿಸುವ ಸಲುವಾಗಿ ಅಟ್ಟದ ಮೇಲೇರಿ ಜೊನ್ಸಳ ಶಯನಾಗಾರಕ್ಕೆ ಅಂದರೆ ಯಾವ ಕೋಣೆಯನ್ನು ಹೊಕ್ಕು ಪಂತನ ಎದುರಿಗೇ ಅವಳು ಅಂತರ್ಹಿತಳಾಗಿದ್ದಳೋ, ಆ ಕೋಣೆಯ ಕಡೆಗೆ ಸಾಗಿದನು. ಪಂತನೂ, ಮನೋಹರನೂ ಆ ಮನೆಯನ್ನು ಪ್ರವೇಶಿಸಿದಾಗ ಫಾಕ್ಸನು ಮನೆಯಲ್ಲಿರಲಿಲ್ಲ. ಆದರಿಂದ ಪಂತನು ಜೊನ್ಸಳ

ಬೆನ್ನಟ್ಟಿ ಹೋದದ್ದೂ, ಅವಳು ಆ ಕೋಣೆಯಲ್ಲಿ ಒಮ್ಮೆಲೆ ಮಾಯ ವಾದದ್ದೂ ಅವನಿಗೆ ತಿಳಿದಿರಲಿಲ್ಲ ಫಾಕ್ಸನು ಹರ್ಷಾತಿರೇಕದಿಂದ ಜೊನ್ಸಳ ಕೋಣೆಯ ಬಳಿಗೆ ಹೋಗಿ ನೋಡುತ್ತಾನೆ, ಅವಳ ಆ ಕೋಣೆಯ ಭದ್ರ ವಾದ ಕದಗಳು ಛಿನ್ನವಿಚ್ಛಿನ್ನವಾಗಿವೆ! ಆಗಲವನು ಒಳ್ಳೇ ವಿಸ್ಮಯದಿಂದ ಕೋಣೆಯನ್ನು ಪ್ರವೇಶಿಸಿ ಅತ್ತಿತ್ತ ನೋಡಿದನು. ಅಲ್ಲಿ ಜೊನ್ಸಳೆಲ್ಲಿಯೂ ಕಾಣಲಿಲ್ಲ. ಒಂದು ಕಡೆಯ ಮೂಲೆಯಲ್ಲಿ ತನ್ನ ಚಿರಶತ್ರುವಾದ ಪಂತನು ಏನೆನ್ನೋ ಯೋಚಿಸುತ್ತ ನಿಂತಿರುವದನ್ನು ಕಂಡನು. ಆಗಂತೂ ಅವನು ಹೇಳಕೂಡದಷ್ಟು ವಿಸ್ಮಯಚಕಿತನಾದನು; ಆದರೆ ಆ ಧೂರ್ತನು ತನ್ನ ಆ ಸ್ಥಿತಿಯನ್ನು ಪಂತನಿಗೆ ಸುತರಾಂ ತೋರಗೊಡದೆ, ಒಳ್ಳೇ ಗಂಭೀರ ವಾಣಿ ಯಿಂದ:—ಪಂತರೇ, ಹೀಗೆ ಆಕಸ್ಮಿಕವಾಗಿ ಇತ್ತಿತ್ತ ಬಂದಿರಿ? ಎಂದು ಪ್ರಶ್ನಮಾಡಿದನು.

ಕೂಡಲೆ ಪಂತನೂ ತನ್ನ ಚಿಂತಿತ ಮುಖಮುದ್ರೆಯನ್ನು ಪರಿವರ್ತಿಸಿ ಕೊಂಡು ಒಳ್ಳೇ ಉತ್ಸುಕತೆಯಿಂದ:—ಬಹು ದಿನಗಳಿಂದ ಮಹಾನು ಭಾವರ ವಾರ್ತೆಯೇ ತಿಳಿಯದಾಗಿತ್ತು. ಪ್ರತ್ಯಕ್ಷವಾಗಿ ಕಂಡು ಕ್ಷೇಮ ಸಮಾಚಾರವನ್ನು ತಿಳಿಯುವ ಸಲುವಾಗಿ ಬಂದಿದ್ದೆನು, ಎಂದಂದನು.

ಫಾಕ್ಸನು ಪ್ರ್ಹ್ರ-ಪ್ರ್ಹ್ರಕ್ಕೆಂದು ನಕ್ಕು:—ನಮ್ಮ-ನಿಮ್ಮ ಉಭಯತ ರಲ್ಲಿ ಬಂಧುತ್ವವೂ, ಋಣಾನುಬಂಧವೂ ಹೆಚ್ಚಾಗುತ್ತಿರುವದರಿಂದ, ಉಭ ಯತರ ಅಗಲುವಿಕೆಯಿಂದ ಉಭಯತರಿಗೂ ಹೆಚ್ಚಾಗಿ ಕಷ್ಟವಾಗುವದು ಸ್ವಾಭಾವಿಕವೇ. ನಾನೂ ನಿಮ್ಮ ಭೆಟ್ಟಿಗಾಗಿ ಆತುರವಾಗಿದ್ದೆನು; ಹಾಗು ಅದಕ್ಕಾಗಿಯೇ ಡಾ. ಮನೋಹರರಾಯರ ಮುಖಾಂತರ ನಿನ್ನಿನ ದಿವಸ ನಿಮಗೆ ಪತ್ರವನ್ನೂ ಕಳಿಸಿದ್ದೆನು. ಅದು ನಿಮಗೆ ತಲುಪಿರಬಹುದಲ್ಲವೆ?

ಪಂತ:—ಅಹುದು. ಅದು ದೊರಕಿದ್ದರಿಂದಲೇ ಇಷ್ಟು ಬೇಗನೆ ನಾನು ಇಲ್ಲಿಗೆ ಬಂದೆನು.

ಫಾಕ್ಸ:—ಬೇಗನೆ ಬಂದದ್ದು ಒಳಿತೇ ಆಯಿತು. ನೀವು ಇಷ್ಟು ಲಗು ಬಗೆಯಿಂದ ಬರಬಹುದೆಂದು ನಾನು ತಿಳಿದಿರಲಿಲ್ಲ ನೀವು ಸ್ವೀಕೃತ ಕಾರ್ಯಕ್ಕಾಗಿ ಇಷ್ಟು ತತ್ಪರರಾಗಿರುವದನ್ನು ನೋಡಿ ನನಗೊಳ್ಳೇ ಸಮಾ ಧಾನವಾಗುತ್ತಿದೆ. ಅದು ಹೇಗೆಯೇ ಇರಲಿ, ನೀವು ಆ ಡಾ. ಮನೋ ಹರ ಪೋರನನ್ನು ಮತ್ತೆ ಇಲ್ಲಿಗೆ ಕರೆತಂದದ್ದು ಒಳಿತಾಗಲಿಲ್ಲ. ನೀವು ಅವ

ನನ್ನು ಮನೆಯಲ್ಲೇ ಬಿಟ್ಟು ಬಂದಿದ್ದರೆ, ಅವನು ಈ ರೀತಿ ಅಕಾಲಮರಣಕ್ಕೆ ತುತ್ತಾಗುತ್ತಿರಲಿಲ್ಲ. ಅವನು ಈ ದಿನ ಎಷ್ಟು ತೀವ್ರವಾಗಿ ಉಬ್ಬಿಕೊಬ್ಬೇರಿ ಬಂದಿದ್ದನೋ, ಅಷ್ಟು ತೀವ್ರ ಅವನು ತಣ್ಣಗಾಗಿ ಹೋದನು!

ಫಾಕ್ಸನ ನುಡಿ ಕೇಳಿ ಪಂತನಿಗೆ ಗಾಬರಿಯಾಯಿತು. ಅದರಿಂದ ಅವನು:—ನೀನು ಮನೋಹರನನ್ನು ಕೊಂದುಬಿಟ್ಟೆಯಾ?

ಫಾಕ್ಸ:—ನಾನು ಅವನನ್ನೇಕೆ ಕೊಲ್ಲ ಹೋಗಲಿ? ಅವನು ತನ್ನನ್ನು ತಾನೇ ಸಂಹರಿಸಿಕೊಂಡಂತಾಯಿತು. ಪಂತರೇ ಅವನೊಳ್ಳೇ ಬುದ್ಧಿಶಾಲಿಯಿದ್ದನು. ಅದಿರಲಿ; ಪಂತರೇ, ಈಗ ನಿಮ್ಮ ಬಳಿಯಲ್ಲಿ ಶಸ್ತ್ರಾಸ್ತ್ರಗಳೇನಾದರೂ ಉಂಟೇ?

ಪಂತ:—ಇರುವವು. ಮುಂದೇನು?

ಫಾಕ್ಸ:—ಹಾಗೆ ಇದ್ದೇ ತೀರಬೇಕು. ನಾನು ಈಗ ಇಲ್ಲಿಂದ ಹೊರಡ ಹತ್ತಿದರೆ ನನಗೆ ನಿಮ್ಮ ಅಸ್ತ್ರಗಳ ಪ್ರಸಾದವು ಸಿಕ್ಕೇತೀರುವದಲ್ಲವೇ? ಅಥವಾ ನೀವು ನಿಮ್ಮ ತೀಕ್ಷ್ಣ ಅಸ್ತ್ರಗಳ ಆಘಾತದಿಂದ ನನ್ನ ಪ್ರಾಣವನ್ನು ಕೂಡ ಹರಣಮಾಡಬಹುದಲ್ಲವೆ?

ಪಂತ:—ನಿನ್ನನ್ನು ಕೊಲ್ಲುವ ಇಚ್ಛೆಯು ನನಗಿಲ್ಲ.

ಫಾಕ್ಸ:—(ವ್ಯಂಗ್ಯ ದನಿಯಿಂದ) ಪಂತರೇ, ಇಷ್ಟು ದಯೆಯನ್ನು ಯಾವ ಪ್ರಾಣಿದಯಾ ಸಂಘದಲ್ಲಿ ಕಡ ತಂದಿರುವಿರಿ?

ಪಂತ:—ಅದಿರಲಿ; ಈಗ ನಿನ್ನ ಹತ್ತರ ಯಾವ ಅಸ್ತ್ರವೂ ಇಲ್ಲವೆ?

ಫಾಕ್ಸ:—ಇಂದು ನಾನು ದುರ್ಭಾಗ್ಯನು. ಈಗ ನನ್ನಲ್ಲಿ ಯಾವ ಅಸ್ತ್ರವೂ ಇರುವದಿಲ್ಲ. ಅದಿದ್ದರೆ ನಿಮಗೆ ಇಷ್ಟು ಮಾತಾಡುವ ಕಷ್ಟವನ್ನು ಸಹಿಸಬೇಕಾಗುತ್ತಿರಲಿಲ್ಲ.

ಪಂತ:—ನಿನ್ನ ಕಪಟಾಚರಣೆಯು ನನಗೆ ಚನ್ನಾಗಿ ವಿದಿತವಾದದ್ದಿದೆ.

ಫಾಕ್ಸ:—ಇನ್ನೂ ನೀವು ಅದನ್ನು ಗೊತ್ತುಮಾಡಿಕೊಳ್ಳಬೇಕಾದೀತು. ಈ ಫಾಕ್ಸ ಡಾಕ್ಟರನು ಜೀವಂತವಾಗಿ ನಿಮ್ಮ ಕೈಗೆಂದಿಗೂ ಸಿಗಲಾರನು. ಈ ಜನ್ಮದಲ್ಲಿ ನಿಮ್ಮನ್ನು ಕೊಂದೇತೀರಬೇಕೆಂದು ನನ್ನ ಪಣವಿರುವದು. ಅದು ತಪ್ಪಿದರೆ ಜೀವಂತನಾಗಿ ನಾನು ನಿಮ್ಮ ಕೈಸೆರೆಯಾಗದಿರುವದಂತೂ ಖಂಡಿತವೇ.

ಪಂತ:—ಈಗಿಂದ್ಹೀಗಲೇ ನಾನು ನಿನ್ನನ್ನು ಸೆರೆಹಿಡಿದರೆ?

ಫಾಕ್ಸ:—ಪ್ರತಿಯೊಂದು ಕ್ಷಣದಲ್ಲಿಯೂ ನಾನು ನನ್ನನ್ನು ರಕ್ಷಿಸ ಲಿಕ್ಕೆ ಸಂಪೂರ್ಣವಾಗಿ ಸಮರ್ಥನಿರುತ್ತೇನೆ.

ಪಂತ:—ನಿಂತ ಕಾಲಲ್ಲಿಯೇ ನಾನು ನಿನ್ನನ್ನು ಸೆರೆಹಿಡಿಯುವೆನು.

ಫಾಕ್ಸ:—ಅದು ಬರೇ ಬಾಯಿಮಾತಲ್ಲ. ಯಾರಿಗೂ ಅದು ಸಾಧ್ಯ ವಿಲ್ಲವೆಂಬದನ್ನು ಎಷ್ಟೋ ಜನರು ಅನುಭವಪಟ್ಟಿರುತ್ತಾರೆ: ನಿಮಗಾ ದರೂ ಅದರ ಅನುಭವವು ಈ ಮೊದಲು ಒಂದೆರಡು ಸಾರೆ ಬಂದೇ ಬಂದಿ ರುತ್ತದೆ. ನಾನೂ ನಿಮ್ಮನ್ನು ಚೆನ್ನಾಗಿ ಬಲ್ಲೆನು. ನಿಮ್ಮ ಬುದ್ಧಿ, ಕೌಶಲ್ಯ, ನೈಪುಣ್ಯ, ಶಕ್ತಿ-ಸಾಹಸ, ಯೋಗ್ಯತೆ ಮುಂತಾದವುಗಳೊಂದೂ ನನಗರಿ ಯದ ವಿಷಯಗಳಾಗಿಲ್ಲ. ಅಂತೇ ನಾನು ನಿಮ್ಮನ್ನು ನನ್ನ ಯೋಗ್ಯ ಪ್ರತಿ ಸ್ಪರ್ಧಿಯೆಂದು ಭಾವಿಸುತ್ತಿರುತ್ತೇನೆ, ಎಂದವನೇ ಪಂತನು ನೋಡನೋಡು ತ್ತಿರಲಿಕ್ಕೆ ಫಾಕ್ಸನು ಅವನನ್ನು ಗಟ್ಟಿಯಾಗಿ ಹಿಡಿದುಬಿಟ್ಟನು! ಇಷ್ಟರಲ್ಲಿಯೇ ಇವನು ಈ ಬಗೆಯಾಗಿ ತನ್ನನ್ನು ಹಿಡಿಯಬಹುದೆಂದು ಪಂತನು ಯೋಚಿ ಸಿರಲಿಲ್ಲ. ಕೂಡಲೆ ಪಂತನು ಒಂದು ಕೈಯಿಂದ ಫಾಕ್ಸನ ಕುತ್ತಿಗೆಯನ್ನು ಒತ್ತಿ ಹಿಡಿದು,ಮತ್ತೊಂದು ಕೈಯಿಂದ ಅವನ ಹಣೆಗೆ ಚನ್ನಾಗಿ ಗುದ್ದಿ ದನು. ಆ ಹೊಡತದಿಂದ ಫಾಕ್ಸನ ಹಣೆಯೊಡೆದು ರಕ್ತವು ಪುಟಿಯ ಹತ್ತಿತು.

ಆದರೂ ಫಾಕ್ಸನು ಹಿಂದೆಗೆಯದೆ ತಾನೂ ಪಂತನನ್ನು ಗುದ್ದತೊಡ ಗಿದನು. ಅವರಿಬ್ಬರಲ್ಲಿ ೧೦-೧೫ ನಿಮಿಷಗಳ ವರೆಗೆ ಒಂದೇಸಮನೆ ಮುಷ್ಟಿ ಯುದ್ಧವು ನಡೆಯಿತು ಒಬ್ಬನು ಮತ್ತೊಬ್ಬನ ಮೇಲೆ ರಭಸದಿಂದ ಏರಿ ಹೋಗುವಾಗ ಆಗುವ ಕಾಲಸಪ್ಪಳದಿಂದಲೂ, ಒಬ್ಬನ ಏಟನ್ನು ತಪ್ಪಿಸಿ ಕೊಳ್ಳುವದಕ್ಕಾಗಿ ಮತ್ತೊಬ್ಬನು ಇತ್ತಿಂದತ್ತ ಅತ್ತಿಂದಿತ್ತ ಓಡುವಾಗಿನ ನಡಿಗೆಯ ಸಪ್ಪಳದಿಂದಲೂ ಆ ಮೇಲಟ್ಟವು ಒಮ್ಮೆಲೆ ಕಳಚಿ ಬೀಳುವ ದೇನೋ ಎಂಬಂತೆ ಗಡಗಡನೆ ನಡಗುತ್ತಿತ್ತು; ಆದರೂ ಒಬ್ಬನೂ ಮತ್ತೊ ಬ್ಬನನ್ನು ಹಿಂಜರಿಸಲಿಲ್ಲ.

ಹೀಗೆ ಅವರೀರ್ವರಲ್ಲಿ ಅರ್ಧ ಗಂಟೆಯ ವರೆಗೆ ಮದವೇರಿದ ಶಾರ್ದೂಲ-ಸಿಂಹಗಳು ಒಂದನ್ನೊಂದು ಅತಿಕ್ರಮಿಸುವ ಸಾಹಸಕ್ಕೊಳ ಗಾಗುವಂತೆ ಮಲ್ಲಯುದ್ಧವು ನಡೆದರೂ ಇತ್ಯರ್ಥವೇ ಆಗಲಿಲ್ಲ. ಅಷ್ಟರಲ್ಲಿ ಫಾಕ್ಸ ಡಾಕ್ಟರನು ತನ್ನ ಕೋಟಿನ ಅರಿವೆಯಲ್ಲಿ ಚುಚ್ಚಿಕೊಂಡಿದ್ದ ಒಂದು

ಡೊಂಕ ಮೊನೆಯು ೨-೩ ಇಂಚು ಉದ್ದವಾದ ಸೂಜಿಯನ್ನು ಹೊರಗೆ ತೆಗೆದನು. ಅದನ್ನು ದೃಷ್ಟಿಸಿದೊಡನೆಯೇ ಇದು ವಿಷಾಕ್ತ ಸೂಜಿಯೆಂದೂ, ಇದರಲ್ಲಿ ಮನುಷ್ಯನ ಪ್ರಾಣವನ್ನು ಬಹು ಸುಲಭವಾಗಿ ಹೀರುವ ಶಕ್ತಿಯುಂಟೆಂದೂ ಪಂತನಿಗೆ ಹೊಳೆಯಿತು. ಫಾಕ್ಸನು ಆ ಸೂಜಿಯನ್ನಿನ್ನು ಪಂತನ ದೇಹದೊಳಗೆ ಚುಚ್ಚತಕ್ಕವನು; ಅಷ್ಟರಲ್ಲಿ ಪಂತನು ಒಮ್ಮೆಲೆ ಅವನ ಆ ಸೂಜಿ ಹಿಡಿದ ಕೈಯನ್ನು ತನ್ನ ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಿದುಬಿಟ್ಟನು. ಕೂಡಲೆ ಫಾಕ್ಸನು ತನ್ನ ಎಡಗೈಯಿಂದ ಪಂತನ ಮೋರೆ, ಮೂಗು, ಎದೆ ಮುಂತಾದ ಕಡೆಗಳಲ್ಲಿ ಒಳ್ಳೇ ಕಸುಪಿನಿಂದ ಗುದ್ದುವ ಹಾಗು ಚೂರಿಕೊಳ್ಳುವ ಕ್ರಮವನ್ನು ನಡಿಸಿದನು. ಅವನ ಆ ಅಸಹ್ಯ ಉಪಟಳದಿಂದ ಪಂತನಿಗೆ ಸಾಕು ಸಾಕಾಯಿತು; ಆದರೆ ಫಾಕ್ಸನ ಬಲಗೈಯನ್ನು ತುಸ ಸಡಲಿಸಿದರೆ, ಎಲ್ಲಿ ಅವನು ಆ ವಿಷಾಕ್ತ ಸೂಜಿಯನ್ನು ತನ್ನ ಶರೀರದಲ್ಲಿ ಚುಚ್ಚುವನೋ ಎಂಬ ಹೆದರಿಕೆಯಿಂದ ಸುಮ್ಮನೆ ಆ ಉಪಟಳವನ್ನು ಸಹಿಸಿಕೊಂಡನು.

ತನ್ನ ಯುಕ್ತಿ ಸಾಹಸಗಳೆಲ್ಲವೂ ವ್ಯರ್ಥವಾದವೆಂಬ ತ್ವೇಷದಿಂದ ಫಾಕ್ಸನು ಮತ್ತೊಂದು ಗುದ್ದನ್ನು ಪಂತನ ಮರ್ಮಸ್ಥಾನಕ್ಕೆ ಹಾಕಬೇಕೆಂದು ಮುಷ್ಟಿಯನ್ನು ಎತ್ತಿ ಹೊಡೆಯು ಹೋಗಲು, ಪಂತನು ತನ್ನ ಎರಡೂ ಕೈಗಳಲ್ಲಿ ಹಿಡಿದಿದ್ದ ವಿಷಾಕ್ತ ಸೂಜಿಯು ಫಾಕ್ಸನ ಬಲಗೈಯನ್ನು ಆತನ ಏಟಿಗೆ ಗುರಿಮಾಡಿದನು. ಕೂಡಲೆ ಫಾಕ್ಸನ ಆ ಭಯಂಕರ ಸೂಜಿಯು ಫಾಕ್ಸನ ಕೈಯೊಳಗೇ ನಟ್ಟುಬಿಟ್ಟಿತು! ಕ್ಷಣಾರ್ಧದಲ್ಲಿ ಫಾಕ್ಸನ ದೇಹಶಕ್ತಿಯು ಕುಂದಿ, ಆ ಆಜಾನಬಾಹುವು ದೊಪ್ಪೆಂದು ನೆಲಕ್ಕುರುಳಿದನು. ಮುಂದೆ ಒಂದೆರಡು ನಿಮಿಷಗಳಲ್ಲಿಯೇ ಆ ಸೂಜಿಯ ವಿಷದ ಪ್ರಭಾವದಿಂದ ಫಾಕ್ಸನ ಕೈ-ಕಾಲು, ಮೋರೆಗಳೆಲ್ಲ ಹಾಗಲಕಾಯಿಯಂತೆ ಹಸರು ವರ್ಣವನ್ನು ತಳೆದವು; ಮತ್ತೆ ಒಂದೆರಡು ನಿಮಿಷಗಳಲ್ಲಿ ಅವನ ಕಣ್ಣುಗಳು ಕೂಡ ಮುಚ್ಚಿ, ಶ್ವಾಸವೂ ನಿರೋಧವಾಗಿ ಹೋಯಿತು!

ಆ ಭೀಮ ಪರಾಕ್ರಮಿ ಫಾಕ್ಸನ ಗತಿಯು ಆ ಕ್ಷುದ್ರ ಸೂಜಿಯಿಂದ ಆ ಪರಿಯಾದದ್ದನ್ನು ಕಂಡು ಪಂತನು ಕಡು ಚಕಿತನಾದನು. ಆಗ ಅವನು ಫಾಕ್ಸನ ಮೈಗೆ ಕೈ ಹಚ್ಚಿ ನೋಡಿದನು. ಅದು ಬರ್ಫದಂತೆ ತಣ್ಣಗಾಗಿ ಹೋಗಿತ್ತು. ಆಗ ಅವನು ಸತ್ತನೆಂದು ಪಂತನ ಖಾತ್ರಿಯಾ

ದರೂ, ಈ ದಾನವನನ್ನು ನಂಬಬಾರದೆಂದು ಯೋಚಿಸಿ, ಅವನು ತನ್ನ ಬಕ್ಕಣದೊಳಗಿನ ಎರಡು ಜೊತೆ ಸ್ಪ್ರಿಂಗಿನ ಬೇಡಿಗಳನ್ನು ತೆಗೆದು ಫಾಕ್ಸನ ಕೈ-ಕಾಲುಗಳಿಗೆ ಹಾಕಿದನು; ಹಾಗು ಅಲ್ಲಿಯೇ ಸಮೀಪದಲ್ಲಿ ಮುರಿದು ಬಿದ್ದಿದ್ದ ಜೊನ್ಸಳ ಕೋಣೆಯ ಒಂದು ಭಾರವಾದ ಕದವನ್ನು ಅವನ ಎದೆಯ ಮೇಲೆ ಹೇರಿ, ಆ ಮಲ್ಲಯುದ್ಧದ ಪ್ರದೇಶದಿಂದ ಬೇರೆ ಕಡೆಗೆ ಹೊರಡಲಿಕ್ಕೆ ಅಣಿಯಾದನು.

---

## ೧೯ ಶಿಕಂದರನ ಸಮಯ ಸಾಫಲ್ಯ.

ಫಾಕ್ಸನನ್ನು ಆ ಅವಸ್ಥೆಯಲ್ಲಿ ಬಿಟ್ಟುಗೊಟ್ಟು ಪಂತನು ಮನೋಹರನನ್ನು ಕಾಣುವದಕ್ಕಾಗಿ ಲಗುಬಗೆಯಿಂದ ಹೊರಟನು. ಅವನು ಆ ಮೇಲಟ್ಟದ ಪ್ರತಿಯೊಂದು ಕೋಣೆಯನ್ನೂ, ಸಂದಿ-ಮೂಲಿಗಳನ್ನೂ ಶೋಧಿಸಿದನು. ಎಲ್ಲಿಯೂ ಅವನ ಪತ್ತೆಯಾಗಲಿಲ್ಲ. ಬಳಿಕ ಅವನು ಮೇಲಟ್ಟದಿಂದ ಕೆಳಗಿಳಿದು ಬಂದು ಕೆಳಗಿನ ಮನೆಯನ್ನು ಹುಡುಕಿದನು. ಅಲ್ಲಿಯೂ ಮನೋಹರನ ಪತ್ತೆಯಾಗಲಿಲ್ಲ. ಕಡೆಗೆ ಒಂದು ಕತ್ತಲುಗವಿದ ಪ್ರದೇಶದಲ್ಲಿ ಎತ್ತಣದಲೋ ಗುಣುಗುಟ್ಟುವ ಮನುಷ್ಯಶಬ್ದವು ಅವನಿಗೆ ಕೇಳಿಸತೊಡಗಿತು. ಪಂತನು ಶಬ್ದ ಬರುವ ಕಡೆಗೆ ಸ್ತಬ್ಧವಾಗಿ ನಿಂತುಕೊಂಡು ಕೇಳಹತ್ತಿದನು. ಒಂದುಶಬ್ದವೂ ಸ್ಪಷ್ಟವಾಗಿ ಕೇಳಿಸಲಿಲ್ಲ. ಬರೇ ಗುಣುಗುಟ್ಟುವ ಧ್ವನಿಯು ಮಾತ್ರ ಕೇಳುತ್ತಿತ್ತು. ಆಗ ಅವನು ಆ ಸ್ಥಳವನ್ನು ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಲು, ಅಲ್ಲಿಯ ಒಂದು ಮೂಲೆಯಲ್ಲಿ ಎರಡು ಮೊಳ ಚೌರಸ್ಸಿನ ಒಂದು ಕಟಾಂಜನದ ಬಾಗಿಲವಿದ್ದಿತು. ಪಂತನು ಆ ಬಾಗಿಲದ ಬಳಿಗೆ ಹೋಗಿ ಕೆಳಗೆ ಇಣಿಕಿಹಾಕಿದನು ಮಾತ್ರ, ಒಂದು ಬಗೆಯ ಅಸಹ್ಯವಾದ ದುರ್ಗಂಧದಿಂದ ಅವನಿಗೆ ಓಕರಿಕೆಯೇ ಬಂದಿತು. ಆದರೂ ಅವನು ಆ ದುರ್ಗಂಧವನ್ನು ಸಹಿಸಿಕೊಂಡು ಅಲ್ಲಿ ಕಿವಿಯಾನಿಸಿ ಕೇಳಲು, ಆ ಕಟಾಂಜನದ ಬಾಗಿಲ ಕೆಳಗಿನ ಗರ್ತದಲ್ಲಿ ಯಾರೋ ಮೆಲ್ಲ ಮೆಲ್ಲಗೆ ಮಾತಾಡುತ್ತಿರುವಂತೆ ಕೇಳುತ್ತಿತ್ತು.

ಕೂಡಲೆ ಪಂತನು ತನ್ನ ಶಕ್ತಿಸರ್ವಸ್ವವನ್ನುಪಯೋಗಿಸಿ, ಆ ಕಟಾಂಜನವನ್ನು ಮುರಿಯ ಹೋದನು. ಅದು ಸಾಧ್ಯವಾಗಲಿಲ್ಲ. ಕಡೆಗೆ

ಅವನು ಅದನ್ನು ಅತ್ತಿತ್ತ ದೂಡಲು, ಅದು ಒಮ್ಮೆಲೆ ಕಿರ್ರೆಂದು ಒಂದು ಬದಿಗಾಯಿತು. ಆ ಕೂಡಲೆ ಪಂತನು ತನ್ನ ಬಕ್ಕಣದೊಳಗಿನ ಇಲೆಕ್ಟ್ರಿಕ್ ಬ್ಯಾಟರಿಯನ್ನು ತೆಗೆದು ಆ ಕೆಳಗಿನ ಗುಂಡಿಯಲ್ಲಿ ಬೆಳಕು ಕೆಡವಿ ನೋಡ ಹತ್ತಿದನು. ಒಬ್ಬ ಮನುಷ್ಯನು ಆ ಗರ್ತದಲ್ಲಿ ಕುತ್ತಿಗೆಯ ವರೆಗೂ ಮುಳುಗಿಕೊಂಡಿದ್ದು, ಬಾಯಿಂದ ಏನೇನೋ ಅನ್ನುತ್ತಿದ್ದನು.

ಆಗ ಪಂತನು ಗಟ್ಟಿ ದನಿಯಿಂದ:—ಮನೋಹರ ರಾಯರೇ, ಡಾ. ಮನೋಹರ ರಾಯರೇ, ಎಂದು ಕೂಗಿದನು.

ಗುಂಡಿಯೊಳಗಿಂದ "ಪಂತರೇ, ನೀವು ಇಲ್ಲಿಗೆ ಬಂದಿರಾ? ನಾನು ಇನ್ನು ತುಸ ಹೊತ್ತಿನಲ್ಲಿಯೇ ಸಾಯುತ್ತೇನೆ. ನನ್ನನ್ನು ಕಾಪಾಡಿರಿ. ಅಯ್ಯೋ ಸಹಿಸಲಾರೆನು, ಈ ಅಸಹ್ಯವಾದ ದುರ್ಗಂಧವನ್ನು!" ಎಂಬ ನುಡಿಗಳು ಮೆಲ್ಲಗೆ ಕೇಳಿಸಿದವು.

"ಅಂಜಬೇಡಿರಿ. ಮನೋಹರರಾಯರೇ, ನೀವಿನ್ನೂ ಜೀವಂತರಿರುವದು ನನ್ನ ಸೌಭಾಗ್ಯವೆಂದೇ ತಿಳಿಯುವೆನು. ನನ್ನ ಪ್ರಾಣವನ್ನು ಕೊಟ್ಟಾಗರೂ ನಾನು ನಿಮ್ಮನ್ನು ಬದುಕಿಸುತ್ತೇನೆ. ಅಂಜಬೇಡಿರಿ" ಎಂದವನೇ ಪಂತನು ಆ ಕಟಾಂಜನದ ಮೇಲಿನ ತನ್ನ ಕೈಯನ್ನು ತಕ್ಕೊಂಡನು. ಅದಕ್ಕೆ ಕೆಳಗೆ ಸ್ಪ್ರಿಂಗು ಹಚ್ಚಿತ್ತಾದ್ದರಿಂದ ಕಿರ್ರೆನ್ನುತ್ತ ಅದು ಮತ್ತೆ ತನ್ನ ಸ್ಥಳಕ್ಕೆ ಬಂದು ಭದ್ರವಾಗಿ ನಿಂತಿತು.

ಕೂಡಲೆ ಪಂತನು ಅತ್ತಿತ್ತ ನೋಡಿದನು. ಸಮೀಪದಲ್ಲಿಯೇ ಒಂದು ಉದ್ದವಾದ ನಿಚ್ಚಣಿಕೆಯಿತ್ತು. ಅವನು ಅದನ್ನು ಲಗುಬಗೆಯಿಂದ ತಕ್ಕೊಂಡು ಆ ಕಟಾಂಜನವನ್ನು ಹಿಂದೂಡಿ ಆ ಗರ್ತದಲ್ಲಿ ಇಳಿಬಿಟ್ಟನು; ಹಾಗು ಅದರ ತುದಿಯನ್ನು ಆ ಕಟಾಂಜನದ ಹತ್ತರದ ಒಂದು ಕಬ್ಬಿಣ ಗೂಟಕ್ಕೆ ತೂಗಹಾಕಿದನು. ನಡುವೆ ನಿಚ್ಚಣಿಕೆ ಬಂದದ್ದರಿಂದ ಕಟಾಂಜನವು ಮತ್ತೆ ಮುಚ್ಚದಾಯಿತು. ಆಗ ಪಂತನು ಕೈಯಲ್ಲಿ ಬ್ಯಾಟರಿಯನ್ನು ಹಿಡಕೊಂಡು ಲಗುಬಗೆಯಿಂದ ಕೆಳಗೆ ಇಳಿದನು. ನಿಚ್ಚಣಿಕೆಯ ಕೆಳಗಿನ ತುದಿಯು ಮನೋಹರನ ತೀರ ಹತ್ತರ ಒಂದು ಮೂಲೆಗೆ ಆತಿತ್ತು. ಮನೋಹರನ ಚಲನವಲನವು ಕಟ್ಟಾಗಿತ್ತು. ಅವನು ಇನ್ನು ತುಸ ಹೊತ್ತಿನಲ್ಲಿಯೇ ಗರ್ತದಲ್ಲಿ ಮುಳುಗಿ ಹೋಗತಕ್ಕವನು. ಅಷ್ಟರಲ್ಲಿ ಪಂತನು ಅವನನ್ನು ಗಟ್ಟಿಯಾಗಿ ಅವಚಿಕೊಂಡು ನಿಚ್ಚಣಿಕೆಯ ಒಂದೊಂದೇ

ಹಲ್ಲುಗಳನ್ನು ಹತ್ತಹತ್ತಿದನು. ಮನೋಹರನಿಗೆ ಆ ದುರ್ಗಂಧ ವಾಯು ವಿನ ಯೋಗದಿಂದ ಈಗಾಗಲೆ ಮೂರ್ಛೆ ಬಂದು ಹೋಗಿತ್ತು. ಇಂಥ ಸ್ಥಿತಿಯಲ್ಲಿ ಆ ಇಕ್ಕಟ್ಟಿನ ಪ್ರದೇಶದಲ್ಲಿ ಅವನನ್ನು ಹೊತ್ತುಕೊಂಡು ಮೇಲೆ ಏರುವದು ಎಷ್ಟು ಕಠಿಣವೆಂಬದನ್ನು ಅನುಭವದಿಂದಲೇ ತಿಳಿಯತಕ್ಕ ಮಾತಾಗಿದೆ. ಇರಲಿ.

ಹಾಗೂ ಹೀಗೂ ಮಾಡಿ ಪಂತನು ಮನೋಹರನ ದೇಹವನ್ನು ಹೊತ್ತುಕೊಂಡು ಅರ್ಧ ನಿಚ್ಚಣಿಕೆಯನ್ನು ಹತ್ತಿರಬಹುದು. ಅಷ್ಟರಲ್ಲಿ ಆ ಕಟಾಂಜನದ ಬಾಗಿಲ ಹತ್ತರ ಒಂದು ಕೈಯಲ್ಲಿ ಪ್ರಜ್ವಲಿತ ಬ್ಯಾಟರಿ ಯನ್ನೂ, ಮತ್ತೊಂದು ಕೈಯಲ್ಲಿ ಎಂಥದೋ ಒಂದು ದ್ರಾವಕದಿಂದ ತುಂಬಿದ ಸೀಸೆಯನ್ನೂ ಹಿಡಿದಂಥ ಒಂದು ಸ್ತ್ರೀ ವ್ಯಕ್ತಿಯು ಪ್ಪೊ-ಪ್ಪೊ ಕ್ಕೆಂದು ನಗುತ್ತ:—ಪಂತರೇ, ಇಂದು ನೀವಿಬ್ಬರೂ ನನ್ನ ಕೈಯಿಂದ ಸಾಯಬೇಕೆಂಬ ಯೋಗವಿದ್ದಂತೆ ಕಾಣುತ್ತದೆ. ಅಂತೇ ನಾನು ಇಲ್ಲಿಗೆ ಆಕಸ್ಮಿಕವಾಗಿ ಬಂದು ತಲುಪಿರುತ್ತೇನೆ. ಪಂತರೇ, ನಿಮಗೆ ನನ್ನ ಗುರುತು ಹತ್ತಿತೇ? ಎಂದು ಪ್ರಶ್ನೆಮಾಡಿತು.

ವಿಸ್ಮಯ ಭರದಿಂದ ಪಂತನು ಮೇಲಕ್ಕೆ ಗೋಣು ಮಾಡಿ ನೋ-ಡುತ್ತ:—ನೀನಾರು? ಎಂದು ಕೇಳಿದನು.

"ನನ್ನ ಗುರುತು ಹತ್ತಲಿಲ್ಲವೆ? ನಾನು ನಿಮ್ಮ ಚಿರಪರಿಚಿತಳಾದ ಜೊನ್ಸಳಲ್ಲವೆ?-ಲಾಂಗಮನ್ನನ ದ್ವಿತೀಯ ಪತ್ನಿಯಾದ ಮೇಯೋಳಲ್ಲವೆ?"

ದಾರಿಕಾರನು ಸುಮ್ಮನೆ ದಾರಿ ನಡೆಯುವಾಗ ಆಕಸ್ಮಿಕವಾಗಿ ದಾರಿ ಯಲ್ಲಿ ಘಟಸರ್ಪವನ್ನು ಕಂಡರೆ ಎಷ್ಟು ಚಕಿತನಾಗುವನೋ, ಪಂತನು ಆಗ ಅದಕ್ಕೂ ಹೆಚ್ಚು ಚಕಿತನಾದನು; ಹಾಗು ಇವಳ ಬಲಗೈಯೊಳಗಿನ ಆ ಸೀಸೆಯಲ್ಲಿ ಮತ್ತಾವ ಪ್ರಾಣಹಾರಕ ದ್ರವ್ಯವಿರುವದೋ ಎಂದು ಚಿಂತಿ ಸಿದನು; ಆದರೆ ಆ ಕಾಲಕ್ಕೆ ಅವನು ಸಹಜಾವಸ್ಥೆಯಲ್ಲಿರಲಿಲ್ಲ. ಒಂದು ಆಳವಾದ ದುರ್ಗಂಧಮಯ ಗರ್ತದಲ್ಲಿ ಮೂರ್ಛಾಗತನಾದ ಮನೋ ಹರನ ದೇಹವನ್ನು ಹೊತ್ತುಕೊಂಡು ನಿಚ್ಚಣಿಕೆಯ ಮೇಲೆ ನಿಂತಿದ್ದನು. ಮೇಲೆ ಬರಲಿಕ್ಕೆ ಆ ಇಕ್ಕಟ್ಟಾದ ಕಟಾಂಜನದ ಬಾಗಿಲದ ಹೊರತು ಅನ್ಯ ಮಾರ್ಗವಿಲ್ಲ. ಆ ಬಾಗಿಲಿಗೇ ನಿಂತು ಜೊನ್ಸಳು ಆ ಪ್ರಾಣಹಾರಕ ದ್ರಾವಕ ವನ್ನು ತನ್ನಮೇಲೆ ಎರಚಲು ಹವಣಿಸುತ್ತಿದ್ದಾಳೆ. ಇಂಥ ಸ್ಥಿತಿಯಲ್ಲಿ ಅದಾ ವನು ಧೈರ್ಯಗೊಂಡಾನು? ನಿರ್ಭೀತನಾದಾನು?

ಕಲಕ್ಷಣಗಳ ವರೆಗೆ ಪಂತನ ಬಾಯಿಂದ ಶಬ್ದಗಳೇ ಹೊರಡದಾಗಲು ಜೊನ್ಸಳೇ ಮತ್ತೆ ಆವೇಶದಿಂದ:—

"ಪಂತರೇ, ಇನ್ನು ನಾನು ನಿಮ್ಮನ್ನು ಸಹಜವಾಗಿ ಕೊಲ್ಲತ್ತೇನೆ; ಆದರೆ ಪಂತರೇ, ನೀವು ನನ್ನದೊಂದು ಮಾತನ್ನು ನಡಿಸಿಕೊಟ್ಟರೆ ಮಾತ್ರ ನಾನು ನಿಮ್ಮೆಲ್ಲರನ್ನೂ ಕಾಪಾಡುತ್ತೇನೆ. ನೀವು ಪ್ರಸಿದ್ಧ ಡಿಟೆಕ್ಟಿವ್ದರಿರುವಿರಷ್ಟೇ? ಆದರೆ ಈ ಪ್ರಸಂಗದಲ್ಲಿ ನೀವು ನನ್ನೆದುರಿನಲ್ಲಿ ಪ್ರಾಣದಾನವನ್ನು ಯಾಚಿಸಬೇಕು, ಹಾಗು ಡಾ. ಮನೋಹರನನ್ನು ನನ್ನ ಮನೋಗತದಂತೆ ನಡೆಯಹಚ್ಚಬೇಕು. ಅಂದರೆ ನಿಮ್ಮೆಲ್ಲರ ಪ್ರಾಣಗಳೂ ಇಂದು ಉಳಿಯುವವು. ಇಲ್ಲದಿದ್ದರೆ ಈ ಕ್ಷಣದಲ್ಲಿಯೇ ಈ ಸೀಸೆಯೊಳಗಿನ ಎರಡು ಹನಿಗಳನ್ನು ನಿಮ್ಮ ಕಣ್ಣಲ್ಲಿ ಸುರುವುವೆನು. ಇದರಿಂದ ಬರೀ ಪ್ರಾಣ ಹೋಗುವದೆಂತಲ್ಲ. ಅಗ್ನಿಕಾಷ್ಠವನ್ನು ಭಕ್ಷಣಮಾಡಿದ್ದಕ್ಕಿಂತಲೂ ಹೆಚ್ಚು ದೇಹಸಂತಾಪವುಂಟಾಗಿ ಸಾಯುವಿರಿ. ಯಾಕೆ, ನನ್ನ ಮಾತಿಗೆ ಒಪ್ಪುವಿರೋ-ಇಲ್ಲವೋ?"

"ಛೀ-ಛೀ, ಪಿಶಾಚಿಯ ಬಳಿಯಲ್ಲಿ ಯಾರಾದರೂ ದಯೆಯ ಭಿಕ್ಷೆ ಬೇಡುವದುಂಟೆ? ನೀನು ನಮ್ಮನ್ನು ಕೊಂದರೂ ಚಿಂತೆಯಿಲ್ಲ; ಆದರೆ ನಾನು ಎಂದೂ ನಿನ್ನಲ್ಲಿ ಪ್ರಾಣದಾನವನ್ನು ಕೇಳಲಿಕ್ಕಿಲ್ಲ"

"ಬೇಡ, ಪಂತರೇ ಅಷ್ಟು ದುರಾಗ್ರಹವನ್ನು ತಾಳಬೇಡಿರಿ. ಸಾವು ಅಂದರೆ ಸಾಮಾನ್ಯ ಮಾತಲ್ಲ; ಆದ್ದರಿಂದ ಇನ್ನೊಮ್ಮೆ ಚೆನ್ನಾಗಿ ವಿಚಾರ ಮಾಡಿರಿ; ತಡಮಾಡಿದರೆ ಈ ಸೀಸೆಯೊಳಗಿನ ದ್ರಾವಕವನ್ನು ನಿಮ್ಮ ಮೇಲೆ ಇನ್ನು ಸುರುವುವದೇ ಖಂಡಿತ" ಎಂದೆಂದು ಖ್ವೊ-ಖ್ವೊಕ್ಕೆಂದು ಭಯಾನಕವಾಗಿ ನಕ್ಕಳು.

ಪಂತನು ಬಾಯಿಂದ ಏನೂ ಮಾತಾಡದೆ ಆಕೆಯ ಕಣ್ಣು ತಪ್ಪಿಸಿ ಒಂದೊಂದೇ ನಿಚ್ಚಣಿಕೆಯ ಹಲ್ಲನ್ನು ಏರುತ್ತಲೇ ಇದ್ದನು. ಆಗ ಜೊನ್ಸಳು ಅವನಿಗೆ ಮತ್ತಿಷ್ಟು ಬೆದರಿಕೆ ತೋರಿಸುವ ಸಲುವಾಗಿ ಆ ಸೀಸೆಯ ಬಿರಡೆಯನ್ನು ತೆರೆದು ಅದನ್ನು ತುಸ ಬೊಗ್ಗಿಸಿದಳು. ಆಗ ಹಿಂದೇ ಒಂದು ಹನಿಯು ಪಂತನ ಮೊಣಕೈಯ ಮೇಲೆ ಬಿದ್ದಿತು. ಆ ದ್ರಾವಕದ ಉರುಪಿನಿಂದ ಅವನ ಮೈ-ಕೈಗಳೆಲ್ಲ ನಡುಗಿ, ಅವನಿಗೆ ಅಸಹ್ಯ ವೇದನೆಗಳಾದವು; ಆದರೂ ಅವನು ಜೊನ್ಸಳಿಗೆ ಅದನ್ನು ಕೊಂಚವೂ ತೋರಗೊಡಲಿಲ್ಲ.

ಇವನು ತನ್ನ ಮಾತನ್ನು ಲಕ್ಷಿಸುವದಿಲ್ಲವಾದ್ದರಿಂದ ಇವನನ್ನು ಕೊಲ್ಲುವದೇ ವಿಹಿತವೆಂದು ನಿರ್ಧರಿಸಿ, ಜೊನ್ಸಳು ಆ ಸೀಸೆಯನ್ನು ಇನ್ನಿಷ್ಟು ಬೊಗ್ಗಿಸಿ ಪಂತ ಹಾಗು ಮನೋಹರನ ಮೇಲೆ ಅದರೊಳಗಿನ ದ್ರಾವಕವನ್ನೆಲ್ಲ ಸುರುವಲುಪಕ್ರಮಿಸಿದಳು. ಇನ್ನು ಒಂದೆರಡು ಸೇಕಂದು ಗಳೊಳಗೆ ದ್ರಾವಕವೆಲ್ಲ ಅವರ ಮೈಮೇಲೆ ಬಿದ್ದು, ಆಕೆಯ ಇಷ್ಟದಂತೆ ಕಾರ್ಯವಾಗಿ ಹೋಗುತ್ತಿತ್ತು; ಆದರೆ ದೈವಗತಿಯು ವಿಚಿತ್ರವಾಗಿತ್ತು. ಅಂತೇ ಅಂದು ಜೊನ್ಸಳ ಇಷ್ಟಾರ್ಥವು ಅಂಥ ಆ ಅನುಕೂಲ ಸ್ಥಿತಿಯಲ್ಲೂ ಸಫಲವಾಗಲಿಲ್ಲ

ಜೊನ್ಸಳು ಆ ಸೀಸೆಯನ್ನು ಬೊಗ್ಗಿಸಿ ಹಿಡಿದು ಪಂತನ ಕಡೆಗೆ ನೋಡುತ್ತ ಅದರ ಹನಿಗಳನ್ನು ಅವನ ಮೇಲೆ ಕೆಡವಬೇಕೆನ್ನುವಷ್ಟರಲ್ಲಿ ಆವಳ ಹಿಂದಿನಿಂದ ಯಾರೋ ಬಂದು ಸೀಸೆ ಹಿಡಿದ ಅವಳ ಕೈಯನ್ನು ಹಾರಿಹೊಡೆದರು. ಅದರಿಂದ ಆ ಸೀಸೆಯು ಅಷ್ಟುದ್ದ ಪುಟದು ಬಿದ್ದಿತು. ಪಂತನ ಮೇಲಾಗಲಿ, ಮನೋಹರನ ಮೇಲಾಗಲಿ ಆ ಸೀಸೆಯ ಒಂದು ಹನಿಯೂ ಬೀಳಲಿಲ್ಲ; ಆದರೆ ಕೈ ಹಾರಿಹೊಡೆದಾಗ ಅದರೊಳಗಿನ ಕೆಲವು ದ್ರಾವಕವು ಜೊನ್ಸಳ ಕೈಬೆರಳುಗಳಿಗೆ ತಗಲಿತು ಮಾತ್ರ; ಅದರಿಂದ ಆವಳು ಬಾಯಿಗೆ ಕೈಹಚ್ಚಿಕೊಳ್ಳುತ್ತ ಕರ್ಕಶದನಿಯಿಂದ ಅಳುತ್ತ ಅಲ್ಲಿಂದ ಎತ್ತೋ ಹೊರಟು ಹೋದಳು.

ಪಂತ-ಮನೋಹರರನ್ನು ಆ ಜೊನ್ಸ ಪಿಶಾಚಿಯ ಕೈಯಿಂದ ಪಾರು ಮಾಡಿದ ಆ ಮಹಾನುಭಾವನು ಯಾರೆಂಬದನ್ನು ತಿಳಿಯುವ ಬಗ್ಗೆ ನಮ್ಮ ವಾಚಕರು ಕುತೂಹಲಪಡುತ್ತಿರಬಹುದು. ಅವನು ೨೦-೨೨ ವರ್ಷ ವಯಸ್ಸುಳ್ಳ ಒಬ್ಬ ಕ್ರಿಶ್ಚನ್ನ ತರುಣನು. ಎಷ್ಟೋ ದಿನಗಳಿಂದ ಅವನೂ ಆ ಘಾರ್ಕ್ಸ-ಜೊನ್ಸರ ಸೆರೆಯಲ್ಲಿದ್ದನು. ಅವನು ಸುಶಿಕ್ಷಿತನು-ಸುಸಂಪನ್ನನು. ಅವನ ಹೆಸರು ರಿಕಂದರನೆಂದು. ಬತ್ತೇರಿಯ ಲಾಂಗಮನ್ನ ಸಾವುಕಾರನ ಸ್ನೇಹಿತನ ಮಗನು. ಲಾಂಗಮನ್ನನೇ ಇವನನ್ನು ಚಿಕ್ಕಂದಿನಿಂದ ಸಲಹಿದ್ದ ನೆಂಬದನ್ನೂ, ಇವನಿಗೇ ತನ್ನ ಒಬ್ಬಳೇ ಒಬ್ಬ ಮಗಳಾದ ಮೇರಿಯನ್ನು ಕೊಟ್ಟು ಲಗ್ನ ಮಾಡಿ, ತನ್ನ ಅಪಾರವಾದ ಸ್ಥಿರ ಮತ್ತು ಚರ ಸಂಪತ್ತು ಗಳನ್ನು ದಾನಮಾಡಬೇಕೆಂದು ಗೊತ್ತುಮಾಡಿದ್ದನ್ನೂ ನಮ್ಮ ವಾಚಕರು

ಈ ಕಾದಂಬರಿಯೊಳಗಿನ ಈ ಮೊದಲಿನ ಒಂದು ಪ್ರಕರಣದಲ್ಲಿ ಓದಿ ತಿಳಿದಿರುವರು. ಅದಿರಲಿ.

ಆ ಅಪರಿಚಿತನ ಆ ಅಭಿನಂದನೀಯ ಕೃತಿಯನ್ನು ಕಂಡು ಪಂತನು ಅವನನ್ನು ಹೊಗಳಿದನು; ಹಾಗು ಅವನ ಸಹಾಯದಿಂದ ಸಂಜ್ಞಾರಹಿತ ಮನೋಹರನನ್ನು ಆ ಭಯಂಕರ ಗರ್ತದಿಂದ ಮೇಲಕ್ಕೆ ತಂದನು. ನಾನಾ ವಿಧವಾದ ಉಪಚಾರಗಳನ್ನು ಮಾಡಿದನಂತರ ಮನೋಹರನು ಎಚ್ಚತ್ತನು. ತದನಂತರ ಅನರೀರ್ವರೂ ಕೂಡಿ ಆ ಅಪರಿಚಿತ ವ್ಯಕ್ತಿಯ ಪರಿಚಯವನ್ನು ಮಾಡಿಕೊಂಡರು. ಶಿಕಂದರನು ಅವರಿಗೆ ತನ್ನ ಸಂಗತಿಯನ್ನು ಈ ಪ್ರಕಾರ ತಿಳಿಸಿದನು:—

ಪಂತರೇ, ಮನೋಹರರಾಯರೇ, ನಾನು ನಿಮ್ಮನ್ನು ಗುರ್ತಿಸಬಾರೆನು. ಪಂತರ ಹೆಸರನ್ನು ಮಾತ್ರ ಕೇಳಿ ತಿಳಿದಿರುವೆನು. ನಾನು ಲಾಂಗಮನ್ನ ಸಾವುಕಾರರಿಂದ ಪೋಷಿತನಾದವನು. ನನ್ನ ಹೆಸರು ಶಿಕಂದರನೆಂದು. ನಾನು ಬಿ. ಎಲ್. ದ ವರೆಗೆ ಓದಿರುವೆನು. ಲಾಂಗಮನ್ನ ಸಾಹೇಬರು ತಮ್ಮ ಮಗಳಾದ ಮಿಸ್ ಮೇರಿಯನ್ನು ನನಗೆ ಕೊಟ್ಟು ತಮ್ಮ ಅಪಾರವಾದ ಸಂಪತ್ತಿಗೆ ನನ್ನನ್ನು ಒಡೆಯನನ್ನಾಗ ಮಾಡಬೇಕೆಂದು ಯೋಚಿಸಿ, ಅದರಂತೆ ಒಂದು ಮೃತ್ಯುಪತ್ರವನ್ನು ಕೂಡ ಬರೆದಿಟ್ಟಿದ್ದರು; ಆದರೆ ಈ ಜೊನ್ಸಳು-ಅವರ ದ್ವಿತೀಯ ಪತ್ನಿಯಾದ ಮೇಯೋಳು-ತನ್ನ ಮಿಂಡನಾದ ಡಾ. ಫಾಕ್ಸನ ಒಳಸಂಚಿನಿಂದ ಲಾಂಗಮನ್ನನಿಗೆ ಪ್ರಾಣಘಾತುಕವಾದ ವಿಷವನ್ನು ಕುಡಿಸುತ್ತ, ಅವನ ಬುದ್ಧಿ ಭ್ರಂಶಗೊಳಿಸಿ, ಅವನಿಂದ ಆ ಮೃತ್ಯುಪತ್ರವನ್ನು ಇಸಗೊಂಡಳು. ತದನಂತರ ಇವಳು ನನ್ನ ಮೇಲೆ ಇಲ್ಲದ-ಸಲ್ಲದ ಆರೋಪವನ್ನು ಹೊರಿಸಿ ಲಾಂಗಮನ್ನನಿಗೆ ಹೇಳಿ, ನನ್ನನ್ನು ಆ ಮನೆಯಿಂದ ಹೊರಗೆ ಹಾಕಿಸಿದಂತೆ ಮಾಡಿ, ಈ ಮನೆಯಲ್ಲಿ ತನ್ನ ಕಾವಲಿನಲ್ಲಿ ಸೆರೆಯಿಟ್ಟಳು; ಆದರೆ ಪಂತರೇ, ಇಂದು ನಿಮ್ಮ ಪುಣ್ಯದಿಂದಲೇ ನಾನು ಇವಳ ಸೆರೆಯಿಂದ ಪಾರಾದದ್ದು. ತಾವು ಈಕೆಯನ್ನು ಬೆನ್ನಟ್ಟ ಈಕೆಯು ಆ ಮಲಗುವ ಕೋಣೆಗೆ ಬಂದು ಆದರ ಕದವನ್ನು ಮುರಿದೊಡನೆ ಇವಳು ಆ ಕೋಣೆಯೊಳಗಿನ ಮಲಸೂತ್ರದ ಖಾನೆಗಳುಳ್ಳ ಕಪಾಟನ ಒಂದು ಖಾನೆಯನ್ನು ಕೆಳಗೆ ಒತ್ತಿ, ಪಕ್ಕದಲ್ಲಿಯೇ ಇದ್ದ ನನ್ನ ಕೋಣೆಯನ್ನು ಪ್ರವೇಶಿಸಿ ಗುಪ್ತವಾಗಿ

ಕುಳಿತಳು. ಆಗ ನಾನು ಅಲ್ಲಿ ಕಣ್ಣು ಮುಚ್ಚಿಕೊಂಡು ಬಿದ್ದುಕೊಂಡಿದ್ದೆನು.

ಎಷ್ಟೋ ಹೊತ್ತು ಇವಳು ಅಲ್ಲಿ ಕುಳಿತು, ಬಳಿಕ ಅಲ್ಲಿಂದ ಹೊರ ಹೊರಟಳು. ಹೊರಡುವಾಗ ನನ್ನ ಕೋಣೆಯ ಬಾಗಿಲವನ್ನು ಎಂದಿನಂತೆ ಭದ್ರಪಡಿಸಿಕೊಳ್ಳಲಿಲ್ಲ. ತಮ್ಮ ಆಗಮನದ ಗಾಬರಿಯಲ್ಲಿ ಮರೆತು ಹೋದಳು ಆ ಸಂಧಿಯನ್ನು ಸಾಧಿಸಿ ನಾನು ಅಲ್ಲಿಂದ ಹೊರಬಿದ್ದು ಕೆಳಗಿಳಿದು ಇಲ್ಲಿಗೆ ಬರಲಿಕ್ಕೂ, ನೀವೆಲ್ಲರೂ ಅವಳ ಉಪಟಳದಿಂದ ತ್ರಸ್ತವಾಗಲಿಕ್ಕೂ ಗಂಟೇ ಬಿದ್ದಿತು. ಅವಳ ಕೈಯಲ್ಲಿದ್ದ ಆ ಸೀಸೆಯೊಳಗಿನ ದ್ರಾವಕವು ಪ್ರಾಣಘಾತಕವೆಂಬುದೆಂದು ನಾನು ನಿಸ್ಸಂಶಯವಾಗಿ ಹೇಳಬಲ್ಲೆನು. ಹೇಗೆಯೇ ಆಗಲಿ, ಇಂದು ತಮ್ಮ ದಯೆಯಿಂದ ನಾನು ಈ ನೀಚರ ಸೆರೆಯಿಂದ ಪಾರಾದಂತಾಯಿತು, ಎಂದು ಶಿಕಂದರನು ಸುಮ್ಮನಾಗಲು,

ಪಂತನು:—ಶಿಕಂದರಾ, ಇಂದು ನೀನು ನಿನ್ನ ಇಂಥ ಮುತ್ತಿನಂಥ ಸಮಯವನ್ನು ಸಫಲ ಮಾಡಿಕೊಂಡು ನಮ್ಮೆಲ್ಲರನ್ನೂ ಉಳಿಸಿರುವೆ. ದೇವರು ನಿನಗೆ ಕಲ್ಯಾಣವನ್ನುಂಟುಮಾಡಲಿ! ಎಂದನು.

---

## ೨೦ ಕಿವಿಮಾತು.

ಪಂತನು ಸ್ಮೃತಿತಪ್ಪಿಬಿದ್ದ ಫಾಕ್ಸನ ಕೈ-ಕಾಲುಗಳಿಗೆ ಬೇಡಿ ತೊಡಿಸಿ, ಅವನ ಮೈಮೇಲೆ ಭಾರವಾದ ಕದವನ್ನು ಹೇರಿ ಬಂದುದನ್ನು ಅಲ್ಲಿಯೇ ಸಮೀಪದಲ್ಲಿಯ ಶಿಕಂದರನ ಗುಪ್ತಗೃಹದೊಳಗಿನ ಕಿಂಡಿಯೊಳಗಿಂದ ಜೋನ್ಸಳು ನೋಡಿದಳು; ಅದರಿಂದ ಪಂತನು ಹೊರಟು ಹೋದ ಬಳಿಕ ಇವಳು ಮೆಲ್ಲಗೆ ಬಂದು, ಆ ಕದವನ್ನು ದೂಡಿ, ಫಾಕ್ಸನ ಕೈ-ಕಾಲುಗಳೊಳಗಿನ ಬೇಡಿಗಳನ್ನು ತನ್ನಲ್ಲಿಯ ಕೈಗಳಿಂದ ತೆಗೆದು, ವಿಷಬಾಧಾಗ್ರಸ್ತನಾದ ಫಾಕ್ಸನ ದೇಹವನ್ನು ಎತ್ತಿಕೊಂಡು ಒಂದು ಗುಪ್ತವಾದ ನೆಲಮನೆಯನ್ನು ಪ್ರವೇಶಿಸಿ, ಅದರ ಬಾಗಿಲವನ್ನಿಕ್ಕಿಕೊಂಡಳು. ಅಲ್ಲಿ ಫಾಕ್ಸನನ್ನು ಒಂದು ಹಾಸಿಗೆಯ ಮೇಲೆ ಮಲಗಿಸಿ, ಅವನಿಗೆ ೨-೩ ಬಗೆಯ ಬೇರೆ ಬೇರೆ ಔಷಧಿಗಳನ್ನು ಕುಡಿಸಿದಳು; ಆದರೆ ಆ ಜಾಲಿಮ ವಿಷದಿಂದ ಅವನ ಹಲ್ಲುಗಳು ಕೂಡ ಗಿಟಕಿರಿದಿದ್ದವಾದ್ದರಿಂದ ಆ ಅಗಧವು ಅವನ ಹೊಟ್ಟೆಯಲ್ಲಿ ಹೋಗಲಿಲ್ಲ ಕಡೆಗೆ ಅವಳು ಒಂದು ನಿಡಿದಾದ ಚೂರಿಯನ್ನು

ತಕೊಂಡು ಅವನ ಎಲ್ಬೈಯ ಬಟ್ಟೆಗೆ ಒಹುದೊಡ್ಡ ಗಾಯವನ್ನು ಮಾಡಿದಳು. ಆ ಗಾಯದಿಂದ ಒಳ-ಒಳನೆ ನೆತ್ತರವು ಸುರಿಯತೊಡಗಿತು. ಆ ಗಾಯದೊಳಗಿಂದ ತಾನಾಗಿಯೇ ನೆತ್ತರ ಸುರಿಯುವದು ಕಟ್ಟಾದಬಳಿಕ ಜೊಸ್ನಳು ಆ ಗಾಯಕ್ಕೆ ಬಾಯಿಹಚ್ಚಿ ನೆತ್ತರವನ್ನು ಹೀರಿ ಹೀರಿ ಉಗುಳ ಹತ್ತಿದಳು

ಹೀಗೆ ಎಷ್ಟೋ ಹೊತ್ತಿನ ವರೆಗೆ ಪ್ರಯತ್ನಿಸಿದ ಬಳಿಕ ಫಾಸ್ಸನಿಗೆ ತುಸ ಎಚ್ಚರವುಂಟಾಯಿತು ಅಷ್ಟರಲ್ಲಿ ಅವಳಿಗೆ ತಮ್ಮ ಗುಪ್ತಗೃಹದ ಹೊರಗೆ ಯಾರೋ ಗುಣುಗುಟ್ಟುತ್ತಿರುವ ಹಾಗೆ ಕೇಳಿಸಿತು. ಅದರಿಂದ ಅವಳು ಫಾಸ್ಸನನ್ನು ಅದೇ ಸ್ಥಿತಿಯಲ್ಲಿ ಬಿಟ್ಟುಗೊಟ್ಟು ಅಲ್ಲಿಂದ ಹೊರಗೆ ಬಂದು ನೋಡಿದಳು. ಆಗ ಅವಳು ಪಂತ-ಮನೋಹರರನ್ನು ಆ ದುರ್ಗಂಧಮಯ ಗರ್ತದಲ್ಲಿ ಕಂಡು ಈಗಲೆ ಅವರನ್ನು ಕೊಲ್ಲಲು ಪ್ರಯತ್ನಿಸಿದಳು; ಆದರೆ ಶಿಕಂದರನ ಆಗಮನದಿಂದ ಅವಳ ಇಷ್ಟಾರ್ಥವು ಕೈಗೂಡದೆ, ಆ ದ್ರಾವಕದಿಂದ ತನಗೇ ಉಪಟಳವಾಗಲು, ಅಲ್ಲಿಂದ ಕಾಲ್ತೆಗೆದು ಪುನಃ ಆ ಗುಪ್ತಗೃಹವನ್ನು ಪ್ರವೇಶಿಸಿ, ಮೊದಲು ಆ ದ್ರಾವಕದ ಸಂತಾಪನಿವಾರಣಾರ್ಥವಾಗಿ ತನ್ನನ್ನು ತಾನೇ ಉಪಚರಿಸಿಕೊಂಡಳು ಬಳಿಕ ಜೊಸ್ನಳು ಫಾಸ್ಸನಿಗೆ ಮತ್ತೆ ೧-೨ ಬಗೆಯ ಔಷಧಗಳನ್ನು ಕುಡಿಸಲು, ಅವನಿಗಾದ ವಿಷಬಾಧೆಯು ನಿವಾರಣವಾಗಿ, ಈ ಮೊದಲಿನ ರಕ್ತಸ್ರಾವದ ಅಶಕ್ತತೆಯು ಕೂಡ ಕಡಿಮೆಯಾಯಿತು. ಆಗ ಅವನು ಎದ್ದು ಕುಳಿತು, ಸಂತಾಪದ ಭರದಿಂದ:—ಪಿಶಾಚಿಯೇ, ನೀನು ನನ್ನನ್ನಿಲ್ಲೇಕೆ ತಂದಿರುವೆ? ಹಾಗು ಈ ಪಕ್ಕದಲ್ಲಿ ಬಿದ್ದಿರುವ ಇಷ್ಟೊಂದು ರಕ್ತವು ಯಾತರದಿದು? ಬೇಗನೆ ಬೊಗಳು; ಇಲ್ಲದಿದ್ದರೆ ನಿನ್ನನ್ನು ಈಗಲೆ ಸಂಹರಿಸಿ ಬಿಡುವೆನು, ಎಂದು ಗದ್ದರಿಸಿದನು.

ಕೂಡಲೆ ಜೊಸ್ನಳು "ಫಾಸ್ಸನು ತನ್ನ ಕೈಯೊಳಗಿನ ವಿಷದ ಸೂಜಿಯಿಂದಲೇ ತಾನು ಮೂರ್ಛಾಗತನಾದ ವೇಳೆಗೆ ನಡೆದ ಸಂಗತಿಯನ್ನು" ಅವನಿಗೆ ತಿಳಿಸಿದಳು.

ಅದನ್ನು ಕೇಳಿ ಫಾಸ್ಸನು: ಪ್ರಿಯೆ, ನೀನು ಮಹಾ ಸಾಹಸಿಯು; ಆದರೆ ಇಂದು ನೀನು ಆ ಶಿಕಂದ ನನ್ನು ಬಿಟ್ಟುಗೊಟ್ಟದ್ದು ಯೋಗ್ಯವಾಗಲಿಲ್ಲ. ಅವನನ್ನು ಮುಕುರುವು ಮಾಡಿ ೨ ಮೇರಿಯಿಂದ ಹತ್ತೆಂಟು ಸಾವಿರ

ರೂಪಾಯಿಗಳನ್ನಾದರೂ ನೆಗವಿ ಹಾಕಲಿಕ್ಕೆ ಮಾರ್ಗವಿತ್ತು. ಅದೂ ಇಂದು ಇಲ್ಲದಂತಾಯಿತಲ್ಲ!

ಜೊನ್ಸ:—ಪ್ರಿಯಕರಾ, ನಾನು ಬೇಕಂತ ಅವನನ್ನು ಬಿಟ್ಟಿರುವದಿಲ್ಲ. ನೀವು ವಿಷಬಾಧೆಯಿಂದ ಗ್ರಸ್ತರಾಗುವದನ್ನು ಕಂಡು ನಿಮ್ಮನ್ನು ಉಪಚರಿಸುವದಕ್ಕಾಗಿ ಹೊರಬೀಳುವಾಗ ನಾನು ಶಿಕಂದರನ ಆ ಗುಪ್ತ ಗೃಹದ ಬಾಗಿಲವನ್ನು ಇಕ್ಕಿಕೊಳ್ಳಲಿಕ್ಕೆ ಮರೆತೆನು. ಮೇಲಾಗಿ ಆಗ ಅವನು ನಿದ್ರಾಗ್ರಸ್ತನಾಗಿದ್ದನು. ಅದರಿಂದ ತುಸ ಹೊತ್ತಿನಲ್ಲಿ ಬಂದು ಇಕ್ಕಿಕೊಂಡರಾಯಿತೆಂದು ಮನಸರಿ ಮಾಡಿದೆನು; ಆದರೆ ಭವಿತವ್ಯವು ವಿಚಿತ್ರವಾದ್ದರಿಂದ ಅವನು ಅಲ್ಲಿಂದ ಪಾರಾದನು.

ಫಾಕ್ಸ:—ಇರಲಿ ಬಿಡು. ಶಿಕಂದರನನ್ನು ಮತ್ತೆ ಹಿಡಿತರುವದೊಂದು ದೊಡ್ಡ ಕೆಲಸವಲ್ಲ; ಆದರೆ ಆ ಪಂತನು ಜೀವಂತನಿರುವವರೆಗೆ ನಮ್ಮ ಕೆಲಸಗಳು ಸುರಳೀತವಾಗಿ ಸಾಗಲಾರವು. ಅವನಿಂದ ಇಷ್ಟೊಂದು ಉಪಟಳವಾಗಲಿಕ್ಕಿಲ್ಲೆಂದು ನಾನು ಈ ವರೆಗೆ ಅವನನ್ನು ಕೊಲ್ಲುವ ಬಗ್ಗೆ ಮನಸರಿ ಮಾಡಿದ್ದೆನು. ಇನ್ನು ಹಾಗೆ ಬಿಡುವದು ಉಚಿತವಲ್ಲ. ಅವನನ್ನು ಕೊಲ್ಲುವ ಬಗ್ಗೆ ಹಾಗು ನಮ್ಮ ಮಿಕ್ಕ ಕೆಲಸಗಳನ್ನೆಲ್ಲ ಸುಯಂತ್ರಿತವಾಗಿ ಸಾಗಿಸುವ ಬಗ್ಗೆ ನಾವು ನಮ್ಮ ಎಲ್ಲ ಹಸ್ತಕರ ಸಭೆಯೊಂದನ್ನು ಬೇಗನೆ ಕೂಡಿಸಬೇಕಾಗಿದೆ; ಆದರೆ ಆ ಸಭೆಗೆ ಸದ್ಯಕ್ಕೆ ಸಭೆಯೆನ್ನುವದಕ್ಕಿಂತ ಕಿವಿಮಾತುಗಳ ಗುಪ್ತಾಲೋಚನೆಯೆನ್ನುವದೇ ವಿಹಿತವು. ಪ್ರಿಯೇ, ನಮ್ಮ ಗೋಪೀಚಂದನ ನೆರವಿನಿಂದ ನೀನು ಆ ಸಭೆಯನ್ನು ಬೇಗನೆ ಕೂಡಿಸು, ಎಂದಂದು, ಅವರಿಬ್ಬರೂ ಆ ಗುಪ್ತಗೃಹದಿಂದ ಹೊರಹೊರಟರು.

---

## ೨೧ ಗುಪ್ತ ಸಭೆ.

ಶಿಕಂದರನ ನೆರವಿನಿಂದ, ಜೀವದಿಂದುಳಿದ ಪಂತನು ಮನೋಹರನ ಸಹಾಯದಿಂದ ಮತ್ತೆ ಫಾಕ್ಸ-ಜೊನ್ಸರನ್ನು ಶೋಧಿಸಿದನು. ಎಷ್ಟು ಶೋಧಿಸಿದರೂ ಅವರ ಸುಳುವೇ ಹತ್ತಲಿಲ್ಲ. ಕಡೆಗೆ ನಿರುಪಾಯರಾಗಿ ಆ ಮೂವರೂ ಅಲ್ಲಿಂದ ಹೊರಟು ಸಿದ್ಧದೇವಪುರಕ್ಕೆ ಬಂದರು. ಮುಂದೆ ಕೆಲವು ದಿವಸಗಳಲ್ಲಿಯೇ ಮೇರಿಯು ಶಿಕಂದರನನ್ನು ಲಗ್ನವಾದಳು. ಅದ

ರಿಂದ ಅವರೀರ್ವರ ಸುಖ-ಸಂಪತ್ತುಗಳೂ ವೃದ್ಧಿಸಿದವು. ಅವರ ಆನಂದ ದಾಯಕವಾದ ಸಮ್ಮಿಲನವನ್ನು ಕಂಡು ಪಂತನಿಗೂ ತುಸಮಟ್ಟಿಗೆ ಸಮಾಧಾನವೆನಿಸಿತು; ಆದರೆ ಫಾಕ್ಸ-ಜೊನ್ಸರನ್ನು ಸೆರೆಹಿಡಿದು ಶಿಕ್ಷಿಸುವ ಅವನ ಮುಖ್ಯ ಕೆಲಸವು ಇನ್ನೂ ಸಫಲವಾಗದ್ದರಿಂದ ಅವನು ಒಂದು ಬಗೆಯ ಚಿಂತೆಯಿಂದ ಕೊರಗಲಾರಂಭಿಸಿದನು. ಅವರನ್ನು ಯಾವ ಯುಕ್ತಿಯಿಂದ ಸೆರೆಹಿಡಿಯಬೇಕೋ ಎಂಬ ಆಲೋಚನೆಯಲ್ಲೀ ಅವನು ಕೆಲಕಾಲವನ್ನು ಕಳೆದನು.

ಅದೇಕಾಲಕ್ಕೆ ಅತ್ತ ಶರಾವತೀ ತೀರದಲ್ಲಿಯ ಆ ಗುಪ್ತವಾಟಿಕೆಯ ಆಚೇಬದಿಗೆ ಮೈಲಿರಡು ಮೈಲುಗಳ ದೂರದಲ್ಲಿದ್ದ ಒಂದು ಘನವಾದ ಮಾವಿನ ತೋಪಿನಲ್ಲಿ, ಪಂತನನ್ನು ಯಾವ ವಿಧವಾಗಿ ಎಷ್ಟು ತೀವ್ರ ಕೊಲ್ಲಲಿಕ್ಕೆ ಸಾಧ್ಯವಿದೆ ಎಂಬ ಬಗ್ಗೆ ಆಲೋಚನೆಯು ಸಶಾಸ್ತ್ರವಾಗಿ ನಡೆದಿದ್ದಿತು.

ಒಂದು ಸುಮನೋಹರವಾದ ಬೆಳದಿಂಗಳ ರಾತ್ರಿಯು. ಚಂದ್ರನು ಆಕಾಶದ ಮಧ್ಯಪ್ರದೇಶಕ್ಕೆ ಬಂದುದರಿಂದ ಎಲ್ಲಿ ನೋಡಿದಲ್ಲಿ ಬೆಳದಿಂಗಳೇ ಬೆಳದಿಂಗಳು. ರಾತ್ರಿಯು ದ್ವಿಪ್ರಹರಕ್ಕೆ ಸಮೀಪಿಸುತ್ತಾದ್ದರಿಂದ ಅಲ್ಲಿ ಶಾಂತತೆಯ ಸಾಮ್ರಾಜ್ಯವು ಸಂಪೂರ್ಣವಾಗಿ ಪ್ರಸ್ಥಾಪಿತವಾಗಿದ್ದಿತು. ಇಲ್ಲೆನ್ನಲಿಕ್ಕೆ ವನಮಧ್ಯದೊಳಗಣ ಹಿಂಸ್ರಪಶುಗಳ ಕೂಗಾಟವು ಯಾವಾಗಾದರೊಮ್ಮೆ ಉಂಟಾಗಿ ಆ ಶಾಂತತೆಯನ್ನು ತುಸಮಟ್ಟಿಗೆ ಭಂಗಗೊಳಿಸುತ್ತಿದ್ದಿತು. ಇಂಥೀ ಪ್ರಶಾಂತಸಮಯದಲ್ಲಿ ಶರಾವತೀ ತೀರದ ಆ ಅಮ್ರವೃಕ್ಷಗಳಲ್ಲಿ ಒಂದು ಗುಪ್ತ ಸಭೆಯು ಕಲೆತಿದ್ದಿತು.

ಆ ಸಭೆಗೆ ಸಾವಿರಾರು ಜನರಾಗಲಿ, ನೂರಾರು ಜನರಾಗಲಿ ಕಲೆತಿದ್ದರೆಂತಲ್ಲ. ಸಭಾಧ್ಯಕ್ಷರನ್ನು ಸೇರಿಸಿ, ಆ ಗುಪ್ತ ಸಭೆಗೆ ಇಪ್ಪತ್ತೈದೇ ಜನರು ಸೇರಿದ್ದರು; ಆದರೆ ಆ ಅಲ್ಪ ಸಂಖ್ಯಾಕ ಜನರು ಸಾವಿರಾರು ಜನ ಸಭಿಕರಿಗಿಂತಲೂ ಕಾರ್ಯಕರ್ತೃತ್ವದಲ್ಲಿ ಮಿಗಿಲಾದವರಾಗಿದ್ದರು. ಆ ಸಭಾಗೃಹದಲ್ಲಿ ಕೃತ್ರಿಮ ಪುಷ್ಪಗುಚ್ಛಗಳಾಗಲಿ, ಧೂಪ-ದೀಪಗಳಾಗಲಿ ತಂದಿರಿಸಿರಲಿಲ್ಲ. ಆ ತೋಪಿನ ಒಂದು ಮೂಲೆಯ ಚಪ್ಪರದಲ್ಲಿ ಆ ಸಭಿಕರೆಲ್ಲರೂ ನೆಲದ ಮೇಲೆಯೇ ಕುಳಿತಿದ್ದು, ಅವರಲ್ಲಿಯ ಕೆಲವರು ಗಾಂಜಿಯನ್ನು ಮಿದ್ದಿ-ಮಿದ್ದಿ ಮನಸೋಕ್ತ ಸೇದುತ್ತಿದ್ದರು. ಮತ್ತೆ ಕೆಲವರು ಆಗಲೇ ಮರಗಳಿಂದ ಇಳಿಸಿ ತಂದಿದ್ದ ತಾಳೇಮರದ ತಾಡಿಯನ್ನು ಅಳಂತ

ವಾಗಿ ಕುಡಿಯುತ್ತಿದ್ದರು. ಇನ್ನುಳಿದವರು ತಮಗಿಷ್ಟವಾದ ಚಟಗಳಲ್ಲಿ ಲೀನವಾಗಿದ್ದರು. ಆ ಸಭೆಯು ನಿಯೋಜಿತ ಅಧ್ಯಕ್ಷರು ತಮ್ಮ ಪತ್ನಿಯ ಳೊಂದೊಡಗೂಡಿ, ಇಷ್ಟುದ್ದವಾದ ಚಿರೂಟನ್ನು ಹೊತ್ತಿಸಿ ಸೇದುತ್ತಿದ್ದರು. ಆ ಚಪ್ಪರದ ಒಂದು ಮೂಲೆಯಲ್ಲಿ ಮಿಣುಕು ಮಿಣುಕಾದ ದೀಪವು ಉರಿಯುತ್ತಿತ್ತು. ಅಲ್ಲಿ ಕಲೆತ ಸಭಿಕರೆಲ್ಲರೂ ಯಾವುದೋ ಒಂದು ವ್ಯಕ್ತಿಯ ದಾರಿಯನ್ನು ಆತುರದಿಂದ ನಿರೀಕ್ಷಿಸುತ್ತಿದ್ದರು. ಇಷ್ಟರಲ್ಲಿ ಆ ವ್ಯಕ್ತಿಯೂ ಅಲ್ಲಿಗೆ ಬಂದು ತಲುಪಿತು. ಎಂದಿನಂತೆ ಅಧ್ಯಕ್ಷರ ಚುನಾವಣೆಯಾಗಿ, ಆ ಸಂಘದ ಕಾಯಂ ಸಭಾಧ್ಯಕ್ಷನಾದ ಡಾ ಫಾಕ್ಸನೇ ಅಧ್ಯಕ್ಷನಾಗಿ ಆರಿಸಲ್ಪಟ್ಟನು. ಕೂಡಲೆ ಅವನು ಉಚ್ಚ ಸ್ವರದಿಂದ ಮಿಕ್ಕ ಸಭಿಕರನ್ನು ಕುರಿತು ಪ್ರಾಸ್ತಾವಿಕ ಭಾಷಣವನ್ನು ಮಾಡಿದನು. ಅದರ ಸಾರಾಂಶವು ಈ ಬಗೆಯಾಗಿದ್ದಿತು:—

"ಪ್ರಿಯ ಸಭಿಕರೇ, ಕರ್ತುಂಮಕರ್ತುಂ ಶಕ್ತಿಸಂಪನ್ನರಾದ ನನ್ನ ಅನುಚರರೇ, ಈ ಸಭೆಯು ಇಂದು ಯಾವ ಉದ್ದಿಶ್ಯವಾಗಿ ಕೂಡಿರುತ್ತ ದೆಂಬದನ್ನು ನಿಮಗೆ ಪ್ರತ್ಯೇಕವಾಗಿ ತಿಳಿಸುವ ಕಾರಣವಿಲ್ಲ. ನಮ್ಮಲ್ಲಿಯ ಒಬ್ಬೊಬ್ಬರೇ ಆ ಪಂತನಂತಹ ನೂರಾರು ಜನ ಗುಪ್ತಪೋಲೀಸರನ್ನು ಸಹಜವಾಗಿ ಸಂಹರಿಸಬಹುದಾಗಿದೆ. ಆದರೂ ಈಗ ಆತನೊಬ್ಬನೇ ನಮಗೆ ಭಾರವಾಗಿ ನಮ್ಮ ಪ್ರತಿಯೊಂದು ಕೆಲಸದಲ್ಲಿ ವಿಘ್ನವನ್ನುಂಟು ಮಾಡತೊಡಗಿರುತ್ತಾನಾದ್ದರಿಂದ ಅವನನ್ನು ಯಾರು, ಯಾವ ಪ್ರಕಾರ ಹಾಗು ಎಷ್ಟು ತೀವ್ರವಾಗಿ ಕೊಲ್ಲಬೇಕೆಂಬದನ್ನು ನಿರ್ಣಯಿಸುವದೇ ಈ ಸಭೆಯ ಮುಖ್ಯ ಕೆಲಸವಾಗಿದೆ ಈಗ ಈ ಸಭೆಯೊಳಗಿನ ಪ್ರತಿಯೊಬ್ಬ ಸಭಿಕನು ತನ್ನ ಈ ವರೆಗಿನ ಇತಿಹಾಸವನ್ನೂ ಯೋಗ್ಯತೆಯನ್ನೂ ತಾನು ಯಾವ ಹಂಚಿಕೆಯಿಂದ ಆ ಸರಾಧಮನನ್ನು ಕೊಲ್ಲುವ ಯೋಚನೆಮಾಡಿರು ವನೆಂಬದನ್ನೂ ಇಲ್ಲಿ ಸ್ಪಷ್ಟವಾಗಿ ತಿಳಿಸಬೇಕೆಂದು ಸೂಚಿಸಿ ನಾನು ನನ್ನ ಭಾಷಣವನ್ನು ಮುಗಿಸುತ್ತೇನೆ" ಎನ್ನಲು, ಎಲ್ಲರೂ ಕೈಚಪ್ಪಾಳೆ ಬಾರಿಸಿ, ಅವನಿಗೆ ಸತ್ಕಾರ ಮಾಡಿದರು.

ಕೂಡಲೆ ಚಿಕ್ಕ ತಾಳೇಮರದಷ್ಟು ಎತ್ತರವಾದ ಹಾಗು ಅತ್ಯುಗ್ರ ಮುಖಚರ್ಯೆಯುಳ್ಳ ಒಂದು ವ್ಯಕ್ತಿಯು ಎದ್ದು ನಿಂತಿತು; ಹಾಗು ಅದು ತನ್ನ ಇತಿಹಾಸವನ್ನು ಹೇಳತೊಡಗಿತು:—

ನಾನು ಬನವಾಸಿಯವನು. ನನ್ನ ಹೆಸರು ಗ್ವಾಲನೆಂದು. ಚಿಕ್ಕಂದಿನಿಂದಲೂ ನಾನು ಹಲವು ಕಳವು-ಕೊಲೆಗಳನ್ನು ಮಾಡಿ, ಎಷ್ಟೋ ಸಾರೆ ಕಾರವಾರ-ಯರವಡೆ ಜೇಲುಗಳನ್ನು ಪ್ರವೇಶಿಸಿರುವೆನು. ಒಂದು ದರವಡೆಯ ಪ್ರಕರಣದಲ್ಲಿ ನನಗೆ ಆಜನ್ಮ ಕರಿನೀರಿನ ಶಿಕ್ಷೆಯು ವಿಧಿಸಲ್ಪಟ್ಟಿತ್ತು; ಆದರೆ ನನ್ನ ಕರ್ತೃತ್ವಶಕ್ತಿಯ ಬಲದಿಂದ ನಾನು ಅಂದಮಾನದ್ವೀಪದಿಂದ ಹಡಗಿನೊಳಗೆ ಸಾಮಾನುಗಳನ್ನು ತುಂಬುವ ಸ್ಥಳದಲ್ಲಿ ಎಲ್ಲರ ಕಣ್ಣು ತಪ್ಪಿಸಿ ಕುಳಿತುಬಂದು, ಈ ದೇಶವನ್ನು ಸೇರಿ ಇಲ್ಲಿಗೆ ಬಂದು ನಿಮ್ಮ ಆಶ್ರಯದಲ್ಲಿ ಸುಖವಾಗಿರುವೆನು. ಆ ಸಿದ್ಧದೇವಪುರದ ಪಂತನಿಂದ ನನಗೆ ಹಲವು ಸಾರೆ ಹಲವು ಬಗೆಯ ತೊಂದರೆಯುಂಟಾಗಿದೆ. ನಾನು ಅವನನ್ನು ಈ ಕೈಗಳಿಂದ ಗುದ್ದಿ ಕೊಲ್ಲದ ಹೊರತು ನನ್ನ ಮನೀಷೆಯು ತೃಪ್ತಿಯಾಗಲಿಕ್ಕಿಲ್ಲ. ಆದರಿಂದ ನಾನು ಅವನನ್ನು ಇನ್ನು ಒಂದು ವಾರದಲ್ಲಿಯೇ ಗುದ್ದಿ ಕೊಲ್ಲುವೆನು, ಎಂದು ತಿಳಿಸಿ ಕುಳಿತುಕೊಂಡಿತು.

ಬಳಿಕ ತೀರ ಗಿಡ್ಡನ್ನ ಆದರೆ ಅತಿ ಗಡುತರವಾದ ಒಬ್ಬ ಮನುಷ್ಯನು ಎದ್ದು ನಿಂತು:—ನಾನು ಈ ಕೊಲೆಸುಲಿಗೆಯ ವ್ಯವಸಾಯ ಮಾಡಹತ್ತಿ ೩ ತಪಗಳಾದವು. ನನ್ನಷ್ಟು ಏಕನಿಷ್ಠೆಯಿಂದ ಈ ವ್ರತವನ್ನು ಪಾಲಿಸಿದವನು ಈ ಸಭೆಯಲ್ಲಿ ವಿರಳರೆಂದೇ ಅನ್ನಬೇಕಾಗುವದು. ನಾನು ಹಲಕೆಲವು ಸಾರೆ ಬಾಡಿಗೆ ಇಲ್ಲದ ಮನೆಯನ್ನು ಪ್ರವೇಶಿಸಿ, ಕೆಲವು ಸಾರೆ ನಿರ್ದಿಷ್ಟ ಅವಧಿಯನ್ನು ಸೆರೆಮನೆಯಲ್ಲಿ ಕಳೆದರೂ, ಹಲಕೆಲವು ಸಾರೆ ತತ್ಪೂರ್ವದಲ್ಲೇ ನನ್ನ ಅಂಗರಕ್ಷಕರಾದ ಪೋಲೀಸ-ಪ್ಯಾದೆಗಳನ್ನು ಕೊಂದು ಓಡಿ ಬಂದಿರುವೆನು. ನಾನು ಪಂತನನ್ನೂ, ಅವನು ನನ್ನನ್ನೂ ಚೆನ್ನಾಗಿ ಗುರ್ತಿಸುವೆವು. ಅವನ ಉಪಟಳದಿಂದಲೇ ನನಗೆ ಬಲು ತೊಂದರೆಯುಂಟಾಗಿದೆಯಾದ್ದರಿಂದ ನಾನು ಅವನನ್ನು ಜೀವಂತ ಸುಟ್ಟು ಸೇಡು ತೀರಿಸಿಕೊಳ್ಳುವದನ್ನು ನಿರ್ಧರಿಸಿದ್ದೇನೆ; ಹಾಗು ಆ ನನ್ನ ನಿರ್ಧಾರವನ್ನು ಇನ್ನು ೪-೬ ದಿವಸಗಳಲ್ಲೇ ಈಡೇರಿಸಿಕೊಳ್ಳಲಿಕ್ಕೆ ತಪ್ಪಲಾರೆನು, ಎಂದನು.

ಆ ಸಭೆಯು ಉಳಿದ ಸಭಿಕರಾದರೂ ಒಂದಿಲ್ಲೊಂದು ಬಗೆಯ ನಿಷ್ಣಾತ ಬದ್‌ಮಾಷರಿದ್ದು, ಅವರೆಲ್ಲರೂ ಬೇರೆ ಬೇರೆ ಪ್ರಸಂಗಗಳಲ್ಲಿ ಪಂತನಿಂದ ನೊಂದವರಾದ್ದರಿಂದ ಅವರು ಅವನನ್ನು ನಾನಾ ರೀತಿಯಿಂದ

ತೀವ್ರವೇ ಗತಿಗಾಣಿಸುವ ತಮ್ಮ ಸಂಕಲ್ಪಗಳನ್ನು ಆ ಸಭೆಯಲ್ಲಿ ನಿವೇದಿಸಿದರು. ಕಟ್ಟಕಡೆಗೆ ಗೋಪೀಚಂದನು-ಡಾಕ್ಟರ ಫಾಕ್ಸನ ಕೇವಲ ವಿಶ್ವಾಸುಕ ಅನುಚರನು-ತನ್ನ ಸಂಗತಿಯನ್ನು ನಿವೇದಿಸಿ, ಅಂಬಿಕೆಯನ್ನು ಹುಡುಕಲು ಪ್ರಯತ್ನಿಸುವಾಗ ಒಂದು ರಾತ್ರಿಯಲ್ಲಿ ಪಂತನು ತನ್ನನ್ನು ಹೇಗೆ ಕಾಡಿಸಿದನೆಂಬದನ್ನು ತಿಳಿಸಿದನು; ಹಾಗು ತಾನೇ ಪಂತನನ್ನು ಸಂಹರಿಸಲಿಕ್ಕೆ ಯೋಗ್ಯ ಹಾಗು ಶಕ್ತನಾದ ಪ್ರತಿಸ್ಪರ್ಧಿಯೆಂದೂ ತನಗೇ ಆತನನ್ನು ಕೊಲ್ಲುವ ಅಪ್ಪಣೆಯಾಗಬೇಕೆಂದೂ ಅಧ್ಯಕ್ಷನಾದ ಫಾಕ್ಸನನ್ನು ಕೇಳಿಕೊಂಡನು.

ಗೋಪೀಚಂದನ ಆ ಆವೇಶಯುಕ್ತ ನಿರ್ಧಾರವನ್ನು ಕೇಳಿ, ಸಭೆಯಲ್ಲಿ ಅಹಮಹಮಿಕೆಯು ಗೊಂದಲವೆದ್ದಿತು. ಎಲ್ಲರೂ ಏಕಸಮಯಾವಚ್ಛೇದದಿಂದ ತಾವೇ ಪಂತನಿಗೆ ಯೋಗ್ಯ ಪ್ರತಿಸ್ಪರ್ಧಿಯಾಗಿದ್ದು ಆತನನ್ನು ಕೊಲ್ಲುವ ಅಧಿಕಾರವು ತಮ್ಮದೇ ಆದ್ದರಿಂದ ತಮಗೇ ಅಪ್ಪಣೆಯಾಗಬೇಕೆಂದು ಕೇಳಿಕೊಳ್ಳಹತ್ತಿದನು.

ಆಗ ಡಾ ಫಾಕ್ಸನು ಎದ್ದು ನಿಂತು ಅವರೆಲ್ಲರನ್ನು ಸುಮ್ಮನಿರಿಸಿ:—ನಿಮ್ಮೆಲ್ಲರಿಗಿಂತಲೂ ಆ ಪಂತನು ನನ್ನನ್ನು ಹೆಚ್ಚು ಕಾಡಿಸಿರುವದರಿಂದ ನಾನೇ ಆತನನ್ನು ಸಂಹರಿಸಲಿಕ್ಕೆ ತಕ್ಕ ಅಧಿಕಾರಿಯು ಮತ್ತು ನನಗೆ ಆ ಕೆಲಸವೂ ಅಷ್ಟೇನು ಅಸಾಧ್ಯವಾದುದಲ್ಲ. ಆದರೂ ಆ ನೀಚ ಪಂತನ ಹತ್ಯಾಕಾಂಡದಲ್ಲಿ ನನ್ನ ಸಂಗಡಿಗರಾದ ನಿಮೆಲ್ಲರಿಗೂ ನಿಮ್ಮ ನಿಮ್ಮ ಇಚ್ಛೆಯ ಪ್ರಕಾರ ಅನುವು ದೊರೆಯಬೇಕೆಂದು ನಾನೊಂದು ಹಂಚಿಕೆ ಹಾಕಿರುವೆನು. ನೀವೆಲ್ಲರೂ ಈ ಕೈಗತ್ತಿಯನ್ನು ಮುಟ್ಟಿ ಆಣೆ ಮಾಡಿ ಆ ಕೆಲಸದಲ್ಲಿ ನನಗೆ ನೆರವಾಗುತ್ತೇವೆಂದು ಅಭಿವಚನ ಕೊಟ್ಟರೆ ನಿಮಗೆ ಆ ಸಂಗತಿಯನ್ನು ತಿಳಿಸುವೆನು; ಹಾಗು ಬಳಿಕ ನಾವೆಲ್ಲರೂ ಆ ಕೆಲಸಕ್ಕೆ ತೊಡಗೋಣ.

ಕೂಡಲೆ ಆ ಗುಪ್ತ ಸಭೆಯ ಸಭಿಕರೆಲ್ಲರೂ ಫಾಕ್ಸನ ಆ ಕೈಗತ್ತಿಯನ್ನು ಹಿಡಿಹಿಡಿದು ಆಣೆಮಾಡಿ ಅವನಿಗೆ ವಚನಬದ್ಧರಾದರು. ಬಳಿಕ ಫಾಕ್ಸನು ಅವರಲ್ಲಿಯ ಒಬ್ಬೊಬ್ಬನನ್ನೇ ತನ್ನ ಹತ್ತರ ಕರೆದು ಅವನ ಕಿವಿಯಲ್ಲಿ ಏನೇನೋ ಹೇಳಿಬಿಡುತ್ತಿದ್ದನು. ಆ ಗುಪ್ತ ಕಿವಿಮಾತಿನಿಂದ ಅವನ ಪ್ರತಿಯೊಬ್ಬ ಅನುಚರನೂ ಹರ್ಷಚಿತ್ತನಾಗಿ ತನ್ನ ಸ್ವೀಕೃತಕಾರ್ಯಕ್ಕೆ

ಪ್ರವೃತ್ತನಾಗುತ್ತಿದ್ದನು. ಹೀಗೆ ಆ ಗುಪ್ತಸಭೆಯ ಕಾರ್ಯವು ಆ ರಾತ್ರಿಯ ಮೂರನೇ ಯಾಮದ ವರೆಗೆ ನಡೆದು ಕಡೆಗೆ ಸಭಾವಿಸರ್ಜನವಾಯಿತು. ಸಭಿಕರೆಲ್ಲರೂ ಬೇರೆ ಬೇರೆ ಮಾರ್ಗಗಳಿಂದ ತಮ್ಮ ತಮ್ಮ ನಿವಾಸಸ್ಥಳಗಳನ್ನು ಕುರಿತು ಪ್ರಯಾಣ ಬೆಳೆಸಿದರು. ಫಾರ್ಗಸನೂ ಜೊನ್ಸಳೊಡನೆ ಬೇರೊಂದು ಸ್ಥಳಕ್ಕೆ ಹೊರಟು ಹೋದನು

---

## ೨೨ ಹುಚ್ಚಿಯ ಉದ್ಯೋಗ.

ಮನೋಹರನು ಇತ್ತೀಚೆಗೆ ಒಂದು ಬಗೆಯ ಸಿಡುಕು ಸ್ವಭಾವದವನಾಗಿದ್ದನು ಅವನು ಪಂತನ ಬಳಿಗೆ ಬಂದು ಒಂದು ತಿಂಗಳಾಗುತ್ತ ಬಂದಿತ್ತು. ಆದರೂ ಪಂತನು ಇದುವರೆಗೂ ಮನೋಹರನ ಮನೋವಲ್ಲಭೆಯಾದ ಅಂಬಿಕೆಯ ಶೋಧಹಚ್ಚಿರಲಿಲ್ಲ ಮನೋಹರನು ಆ ವಿಷಯವನ್ನು ತೆಗೆದಾಗೆಲ್ಲ ಇಂದು ಮಾಡೋಣ-ನಾಳೆ ಮಾಡೋಣ, ಅದಕ್ಕೇಕೆ ಅಷ್ಟು ಆಲೋಚನೆ, ಹಾ-ಹಾ ಅನ್ನುವಷ್ಟರಲ್ಲಿ ಆ ಕೆಲಸವನ್ನು ಮಾಡಿಬಿಡುವಾ, ಎಂದು ಪಂತನು ಅವನಿಗೆ ಆಶ್ವಾಸನ ಕೊಡುತ್ತಿದ್ದನೇ ಹೊರತು, ಕಳೆದ ತಿಂಗಳಲ್ಲಿ ಒಂದು ದಿನವೂ ಅದೇಕೆ ಒಂದು ತಾಸೂ ಕೂಡ ಆ ಕೆಲಸಕ್ಕಾಗಿ ವಿನಿಯೋಗಿಸಿರಲಿಲ್ಲ ಅದರಿಂದ ಮನೋಹರನ ಚಿತ್ತಚಾಂಚಲ್ಯವಾಗಿ, ಇವನಿಂದ ಈ ಕೆಲಸವಾಗದಾಗಿದೆಯೆಂದು ತೋರುತ್ತದೆ. ಅದರಿಂದ ಬೇರೊಬ್ಬ ಚಲೋ ಪತ್ತೇದಾರನನ್ನು ಈ ಕೆಲಸಕ್ಕೆ ನಿಯೋಜಿಸುವದೇ ವಿಹಿತವೆಂದು ಅವನಿಗೆ ಇತ್ತೀಚೆಗೆ ಅನಿಸಹತ್ತಿತು. ಮನೋಹರನು ಆ ಸಂಗತಿಯನ್ನು ಪಂತನ ಎದುರಿಗೆ ಬಾಯಿ ಬಿಚ್ಚಿ ಹೇಳದಿದ್ದರೂ, ಅವನ ಮುಖಚರ್ಯೆ, ಸ್ವಭಾವ ಪರಿವರ್ತನ, ತನ್ನ ವಿಷಯದ ಅನಾದರ ಮುಂತಾದವುಗಳಿಂದ ಪಂತನು ಅವನ ಇಂಗಿತವನ್ನು ತಿಳಿದಿದ್ದನು ಆದರೂ, ಅವನು ಅದನ್ನು ಬಾಯಿಬಿಚ್ಚಿ ಆಡಿ ತೋರಿಸುತ್ತಿರಲಿಲ್ಲ. ಇರಲಿ.

* * * * *

ಒಂದು ದಿನ ಅಪರಾಹ್ಣಕಾಲದಲ್ಲಿ ಪಂತನು ತನ್ನ ಶಯನಾಗಾರದಲ್ಲಿ ವಾಮಕುಕ್ಷಿ ಮಾಡುತ್ತಿರಲು, ಅವನ ಭೃತ್ಯನು ಅಲ್ಲಿಗೆ ಬಂದು:— ಧನಿಯರೇ, ಯಾನಳೋ ಒಬ್ಬ ಘೋಷೆಯ ಹೆಣ್ಣುಮಗಳು ತಮ್ಮ ಭೆಟ್ಟಿ

ಗಾಗಿ ಬಂದು ದ್ವಾರದಲ್ಲಿ ನಿಂತಿರುವಳು, ಎಂದು ತಿಳಿಸಲು, "ಅವರನ್ನು ಈಗಲೆ ಇಲ್ಲಿಗೆ ಕರೆತಂದು ಬಿಡು" ಎಂದು ಪಂತನು ಆಜ್ಞಾಪಿಸಿದಂದರೆ ಕೂಡಲೆ ಭೃತ್ಯನ ಸೂಚನೆಯ ಮೇರೆಗೆ ಒಬ್ಬ ಹೆಂಗಸು ಬಂದು ಪಂತನ ಕೋಣೆಯ ಹೊಸ್ತಿಲದಲ್ಲಿ ಕುಳಿತು ತನ್ನ ಮೋರೆಯ ಮೇಲಿನ ಪ್ರಾವರಣವನ್ನು ತೆಗೆದಳು. ಆಕೆಯ ಮೈಮೇಲೆ ಮಾಸಿದ ಹಾಗು ಹರಿದುಹೋಗಿದ ಬಟ್ಟೆಗಳಿದ್ದವು. ಅವಳ ಮುಖಕಾಂತಿಯು ಮಲಿನವಾಗಿದ್ದರೂ ಅವಳ ವಿಶಾಲವಾದ ನೇತ್ರ, ಸರಳವಾದ ಮೂಗು, ಬಟ್ಟನ್ನ ಮೋರೆ, ನಿಡಿದಾದ ಕೂದಲು, ಅಚ್ಚುಕಟ್ಟಾದ ಮೈಕಟ್ಟು ಇವುಗಳು ಪ್ರೇಕ್ಷಣೀಯವಾಗಿದ್ದವು; ಆದರೆ ಒಂದುಬಗೆಯ ಹುಚ್ಚುಕಳೆಯು ಮಾತ್ರ ಅವಳ ಸ್ವರೂಪವನ್ನೆಲ್ಲ ಆವರಿಸಿ ಕೊಂಡು ಬಿಟ್ಟಿತ್ತು.

ಅವಳು ಅಲ್ಲಿಗೆ ಬರುತ್ತಲೆ ಪಂತನು:—ನೀನು ಯಾರು? ಇಲ್ಲಿಗೇಕೆ ಬಂದಿರುವೆ? ಎಂದು ಕೇಳಿದನು.

ಆ ಸ್ತ್ರೀಯು ದೃಢಸ್ವರದಿಂದ:—ನಾನು ಫಾಕ್ಸ ಡಾಕ್ಟರನ ಹೆಂಡತಿಯು. ನಿಮಗೆ ಆ ಫಾಕ್ಸನ ಕೆಲವು ಗುಪ್ತ ಆಲೋಚನೆಗಳನ್ನು ತಿಳಿಸುವದಕ್ಕೆಂದು ಬಂದಿರುವೆನು.

ಮನೋರಮೆಯ ಆ ನುಡಿಯನ್ನು ಕೇಳಿ, ಪಂತನು ಸ್ತಂಭಿತನಾದನು. ಈಕೆಯು ಫಾಕ್ಸನ ಹೆಂಡತಿಯಾಗಿರಬಹುದೇ? ಹೆಂಡತಿಯು ತನ್ನ ಗಂಡನ ಅನಿಷ್ಟವನ್ನು ಎಂದಾದರೂ ಬಗೆಯಬಹುದೇ? ಇವಳು ಆತನ ಹೆಂಡತಿಯಾಗಿರದೆ ಅವನ ಗುಪ್ತಹೇರಳಾಗಿರಬಹುದಾಗಿದೆ, ಮುಂತಾಗಿ ಆಲೋಚಿಸುತ್ತ ಕುಳಿತ ಪಂತನನ್ನು ಕುರಿತು ಆ ಹೆಂಗಸು ಮತ್ತೆ:—ನನ್ನ ಗಂಡನು-ಫಾಕ್ಸನು-ನಿಮ್ಮನ್ನು ಕೊಲ್ಲುವ ಹಂಚಿಕೆಯನ್ನು ನಿರ್ಧರಿಸಿರುವನು. ನೀವು ಇನ್ನು ಹೀಗೆ ಆಲೋಚಿಸುತ್ತ ಕುಳ್ಳಿರುವದು ಘಾತುಕವು. ಬೇಗನೆ ಆತನ ಪ್ರತೀಕಾರಕ್ಕೆ ಅಣಿಯಾಗಬೇಕಲ್ಲದೆ, ಅನುಚರರಿಂದ ಸಹಿತನಾಗಿ ಬರುವ ಅವನನ್ನು ಹಿಡಿಯುವ ಯೋಚನೆಯನ್ನು ಕೈಕೊಳ್ಳಿರಿ, ಎಂದಳು.

ಆಗ ಪಂತನು:—ನೀನು ಫಾಕ್ಸನ ಹೆಂಡತಿಯಾಗಿದ್ದು ಅವನ ಅಹಿತವನ್ನು ಬಗೆಯುವದೇಕೆ?

ಮನೋರಮೆ:—ಅದಕ್ಕೆ ಅನೇಕ ಕಾರಣಗಳುಂಟು. ಅವನ್ನೆಲ್ಲ

ಮಗೆ ತಿಳಿಸುತ್ತ ಕುಳಿತರೆ ಅವು ಭಾರತ-ರಾಮಾಯಣಗಳಷ್ಟು ವಿಸ್ತೃತ ಳಾಗಬಹುದು; ಅದರಿಂದ ನಾನು ನಿಮಗೆ ಸಂಕ್ಷಿಪ್ತವಾಗಿಯೇ ಆ ಕಾರಣ ಳನ್ನು ತಿಳಿಸುವೆನು:-ಅವನು ನನ್ನನ್ನು ಮನೋವಾಕ್ಕಾಯಗಳಿಂದ ವರಿಸ ದ್ದರೂ ನಾನು ಮಾತ್ರ ಬ್ರಾಹ್ಮಣ ಬಾಲವಿಧವೆಯಾಗಿದ್ದು, ಆತನಲ್ಲಿ ಕರಣಪೂರ್ವಕವಾಗಿ ಮನಸೋತು ಅವನನ್ನು ಹೊಂದಿದೆನು. ಆತನು ನ್ನ ರೂಪ-ಲಾವಣ್ಯಗಳಿಗಿಂತ ನನ್ನಲ್ಲಿಯ ನನ್ನ ಲಗ್ನದ ಗಂಡನ ಮನೆಯ ಹಾಗು ತಂದೆಯ ಮನೆಯ ಅಪಾರ ಸಂಪತ್ತಿಗೆ ಮನಸೋತು ನನ್ನನ್ನು ಪದಭ್ರಷ್ಟಗೊಳಿಸಿದನು. ನನ್ನಲ್ಲಿಯ ಹಣವನ್ನೆಲ್ಲ ಸೆಳಕೊಂಡನಂತರ ಆ ನೀಚನು ನನ್ನನ್ನು ದಾರಿಯ ಭಿಕಾರಿಣಿಯನ್ನಾಗೆ ಮಾಡಿ ತ್ಯಜಿಸಿದನು. ಇಷ್ಟೇ ಅಲ್ಲ, ನನ್ನಂತಹ ಎಷ್ಟೋಜನ ಹಿಂದೂ-ಮುಸಲ್ಮಾನ-ಕ್ರಿಶ್ಚನ್ ಜಾತಿಯ ತರುಣಿಯರನ್ನೂ ಭ್ರಷ್ಟಗೊಳಿಸಿ ಅವರೆಲ್ಲರ ಸಂಪತ್ತನ್ನು ಎತ್ತಿ ಹಾಕಿರುವನು. ಈಗ ಅವನೊಡನೆ ಇರುವ ಅವನ ಮಿಂಡೆಯು ಯಾವ ಜಾತಿಯವಳೋ-ಯಾವ ಮತದವಳೋ ಅದಾರು ಹೇಳಬೇಕು? ಆದರೆ ನೀಚತನದಲ್ಲಿ-ರಾಕ್ಷಸೀಮಾಯೆಯಲ್ಲಿ ಅವಳು ಘಾತ್ಕನಿಗೆ ತಕ್ಕ ಹೆಣ್ಣೇ ಆಗಿರುವಳು. ಆತನ ನೀಚತನದ ಮೂಲಕ ನನ್ನ ಸರ್ವಸ್ವವೂ ಹಾಳಾಗಿ, ನಾನು ನನ್ನ ಜಾತಿಬಾಂಧವರಿಂದ ಬಹಿಷ್ಕೃತಳಾಗಿ ಹೀಗೆ ಹುಚ್ಚಳ ವೇಷ ದಿಂದ ಓಣಿ-ಓಣಿ ತಿರಿದುಣ್ಣಬೇಕಾಗಿದೆ ಪಂತರೇ, ಮನುಷ್ಯನ ಹ್ರಾಸವು ಇದಕ್ಕೂ ಹೆಚ್ಚಾದದ್ದುಂಟೆ? ಆದ್ದರಿಂದ ನಾನಾಗಿಯೇ ವರಿಸಿರುವ ನನ್ನ ಆ ಗಂಡನನ್ನು ಬಂಧಿಸಿ, ಶಿಕ್ಷಿಸುವ ಉದ್ಯೋಗಕ್ಕೆ ಹತ್ತಿರುವೆನು. ನೀವು ನನ್ನ ಮಾತಿನಲ್ಲಿ ಅವಿಶ್ವಾಸವ ತಾಳಬೇಡಿರಿ. ಅವನು ನಿನ್ನಿನ ರಾತ್ರಿ ತನ್ನ ಸಂಗಡಿ ಗರ ಸಭೆಯನ್ನು ಆ ಶರಾವತೀ ತೀರದ ಮಾವಿನ ತೋಪಿನಲ್ಲಿ ಕೂಡಿಸಿ ಅವರೆಲ್ಲರ ಸಹಾಯದಿಂದ ಅವನು ಇಂದು ರಾತ್ರಿ ಈ ನಿಮ್ಮ ಮನೆಯನ್ನು ನುಗ್ಗಿ ನಿಮ್ಮ ಕೊಲೆ ಮಾಡುವವನಿದ್ದಾನೆ; ಅದ್ದರಿಂದ ನೀವು ಇನ್ನು ಕೊಂಚವೂ ವಿಲಂಬಮಾಡದೆ, ಬೇಗನೆ ನಿಮ್ಮ ಜೀವಿತ ರಕ್ಷಣೆಯ ಹಾಗು ಅವನನ್ನು ಹಿಡಿದು ದಂಡಿಸುವ ಉದ್ಯೋಗಕ್ಕೆ ತೊಡಗಿರಿ, ಎಂದವಳೇ ಅಲ್ಲಿಂದ ಹೊರಟು ಹೋದಳು.

---

## ೨೩ ಫಾಕ್ಸನ ಕಡೆಗಾಲ.

ಈ ವಿಚಿತ್ರ ಸಂಗತಿಯನ್ನು ಕೇಳಿ ಪಂತನು ಕೆಲಹೊತ್ತು ಸುಮ್ಮನೆ ಕುಳಿತು, ಈ ಹುಚ್ಚಿಯ ಮಾತನ್ನು ನಂಬಬೇಕೋ-ಬಾರದೋ, ಎಂಬದರ ಬಗ್ಗೆ ಯೋಚಿಸಿದನು. ಕಡೆಗೆ ನಂಬುವದೇ ಯುಕ್ತವೆಂದು ತೋರಿದ್ದರಿಂದ ತಡವರಿಸುತ್ತ ಎದ್ದು, ಕೂಡಲೆ ಜೇಲರ ಭುಜಂಗರಾಯನ ಕಡೆಗೆ ಹೋದನು; ಹಾಗು ತನಗೆ ಕೆಲವು ಉತ್ತಮವಾದ ವಿದ್ಯುಲ್ಲತೆಯ ಬ್ಯಾಟರಿಗಳೂ, ೨೫-೩೦ ಹೊಸಬಗೆಯ ಸ್ಪ್ರಿಂಗಿನ ಬೇಡಿಗಳೂ ಬೇಕಾಗಿವೆಯೆಂದು ತಿಳಿಸಿದನು. ಪಂತನ ನುಡಿ ಕೇಳಿ ಭುಜಂಗರಾಯನು:—ಪಂತರೇ, ಈ ಮೊದಲಿನಂತೆ ಮತ್ತೆ ಆ ಫಾಕ್ಸ-ಜೊನ್ಸರ ಬಂಧನದ ಉದ್ಯೋಗವನ್ನು ಕೈಕೊಂಡಿರುವಿರೇನು? ನೀವೊಬ್ಬರೇ ಆ ಸಾಹಸಕ್ಕೆ ತೊಡಗಬೇಡಿರಿ. ನನಗೆ ತಿಳಿಸಿದರೆ ನಾನು ನನ್ನ ನೂರಾರುಜನ ಹಸ್ತಕರೊಡನೆ ಬಂದು ನಿಮಗೆ ನೆರವಾಗುವೆನು, ಎಂದನು.

ಅದಕ್ಕೆ ಪಂತನು:—ಈಗಲೆ ನಾನು ನಿಮ್ಮ ಸಹಾಯವನ್ನು ಇಚ್ಛಿಸುವದಿಲ್ಲ; ಆದರೆ ನೀವು ನಿಮ್ಮ 50 ಜನರೊಡನೆ ಇಂದು ರಾತ್ರಿ ಮೂರನೇ ಯಾಮದಲ್ಲಿ ನಮ್ಮ ಮನೆಯ ಸುತ್ತಲು ತುಸ ಅಂತರದಲ್ಲಿ ಬಂದು ಸಜ್ಜಾಗಿ ನಿಂತಿರಬೇಕು. ನಾನು ನನ್ನ ಮನೆಯೊಳಗಿಂದ ಪೀಪಿ ಬಾರಿಸಿದೊಡನೆ ನೀವು ಅಲ್ಲಿಗೆ ಬಂದು ನನಗೆ ನೆರವಾಗಬೇಕು, ಎಂದು ಹೇಳಿ, ಅವನಿಂದ ತನಗೆ ಬೇಕಾಗಿದ್ದ ಸಾಮಾನುಗಳನ್ನೆಲ್ಲ ಇಸಕೊಂಡು ನಡೆದನು.

ಪಂತನು ಮನೆಗೆ ಬಂದವನೇ ತನ್ನ ಮನೆಯ ಹೆಣ್ಣುಮಕ್ಕಳು, ಹುಡುಗರು ಮುಂತಾದವರನ್ನೆಲ್ಲ ಭುಜಂಗರಾಯನ ಮನೆಗೆ ಅಂದಿನ ರಾತ್ರಿಯ ಮಟ್ಟಿಗೆ ವಸತಿಗಾಗಿ ಕಳಿಸಿಕೊಟ್ಟನು. ಅಂದು ಮನೆಯಲ್ಲಿ ತಾನೊಬ್ಬನೇ ಮನೋಹರನೊಡನೆ ಇರುವದನ್ನು ನಿಶ್ಚಯಿಸಿದನು. ಮನೋಹರನಿಗೆ ಮನೋರಮೆಯು ಹೇಳಿದ ಸಂಗತಿಯನ್ನೂ, ತಾನು ಫಾಕ್ಸ ಮೊದಲಾದವರನ್ನು ಹಿಡಿಯಲಿಕ್ಕೆ ಮಾಡತೊಡಗಿದ್ದ ಹಂಚಿಕೆಯನ್ನೂ ತಿಳಿಸಿ, ಆ ಕೆಲಸದಲ್ಲಿ ಅವನು ಮಾಡತಕ್ಕ ಸಹಾಯದ ವಿಷಯವಾಗಿ ಅವನಿಗೆ ಚೆನ್ನಾಗಿ ತಿಳಿಸಿ ಹೇಳಿದನು. ಮನೋಹರನಾದರೂ ಅದನ್ನು ಒಳ್ಳೇ ಆಸ್ಥೆಯಿಂದಲೂ, ಹುರುಪಿನಿಂದಲೂ ಮಾಡಲಿಕ್ಕೆ ಒಡಂಬಟ್ಟನು.

...ಂತನ ಮನೆಯು ಅಷ್ಟೊಂದು ಭವ್ಯವಾದ ವಾಡೆಯಾಗಿರದಿದ್ದರೂ ಕಟ್ಟಾದ ಹಾಗು ಭದ್ರವಾದ ಮನೆಯಾಗಿದ್ದಿತು. ಅದರ ಮುಖ್ಯ ...ಲವು ದೊಡ್ಡ ರಸ್ತೆಯಲ್ಲಿದ್ದು ಇನ್ನೊಂದು ಬಾಗಿಲವು ಒತ್ತಟ್ಟಿಗೆ ...ಕ್ಕಟ್ಟಿನ ಸ್ಥಳದಲ್ಲಿತ್ತು. ಅದೇ ಇಕ್ಕಟ್ಟಿನ ಬಾಗಿಲದಿಂದಲೇ ಫಾಕ್ಸ ಮೊದಲಾದವರು ಅಂದು ಸರಿರಾತ್ರಿಯಲ್ಲಿ ಪಂತನ ಮನೆ ನುಗ್ಗಿ ಅವನನ್ನು ನುಚ್ಚುಗಡಿಯಬೇಕೆಂದು ತಮ್ಮ ಸಭೆಯಲ್ಲಿ ನಿಶ್ಚಯಿಸಿದ ಸಂಗತಿಯನ್ನು ಮನೋರಮೆಯು ಇವನಿಗೆ ಹೇಳಿದ್ದಳು. ಅದರಿಂದ ಪಂತನು ತಾನು ತಂದ ವಿದ್ಯುತ್ ಬ್ಯಾಟರಿಗಳಲ್ಲಿ ೧-೨ ಬ್ಯಾಟರಿಗಳನ್ನು ಆ ಕಡೆಯ ಇಕ್ಕಟ್ಟಿನ ಬಾಗಿಲದ ಬಳಿಯಲ್ಲೇ ಇಟ್ಟು ಅದರಿಂದ ಉಂಟಾಗುವ ಪ್ರವಾಹವೆಲ್ಲ ಆ ಬಾಗಿಲಬಳಿಯ ಕಬ್ಬಿಣ ಕಟಾಂಜನ, ಕಬ್ಬಿಣನಿಚ್ಚಣಿಕೆ ಮುಂತಾದವುಗಳಲ್ಲಿ ಹರಡುವಂತೆ ಮಾಡಿದನು.

ಪಂತನು ಕೂಡ್ರುವ-ನಿಲ್ಲುವ ಹಾಗು ಮಲಗುವ ಮುಖ್ಯ ಕೋಣೆಯು ಆ ಇಕ್ಕಟ್ಟಿನ ಬಾಗಿಲದ ಹತ್ತರವೇ ಮೇಲಂತಸ್ತಿನ ದಿವಾಣಖಾನೆಯಲ್ಲಿತ್ತು. ಫಾಕ್ಸ ಮೊದಲಾದವರು ತನ್ನನ್ನು ಹುಡುಕುವದಕ್ಕಾಗಿ ಆ ಸರಿರಾತ್ರಿಯಲ್ಲಿ ಎಲ್ಲಕ್ಕೂ ಮೊದಲು ಆ ತನ್ನ ಮುಖ್ಯ ಕೋಣೆಗೇ ಬರುವರೆಂದು ತಿಳಿದು, ಪಂತನು ಆ ತನ್ನ ಕೋಣೆಯ ಕಡೆಗಿನ ಮೇಲಟ್ಟದ ಕಬ್ಬಿಣದ ಪಾವಟಿಗೆಗಳಲ್ಲೆಲ್ಲ ಹಾಗು ಅವನ್ನು ಹತ್ತುವಾಗ ಎಡಬಲಗಳಲ್ಲಿ ಕೈಗಳನ್ನಿಡುವ ಕಬ್ಬಿಣಕಂಬಿಗಳಲ್ಲೆಲ್ಲ ವಿದ್ಯುತ್‌ಪ್ರವಾಹವು ಚೆನ್ನಾಗಿ ಪ್ರವಹಿಸುವಂತೆ ಏರ್ಪಾಟು ಮಾಡಿದನು. ಇಷ್ಟೇ ಅಲ್ಲ, ಅಂದು ರಾತ್ರಿ ತನ್ನ ಮನೆಯ ಪ್ರತಿಯೊಂದು ಕದ, ಕಿಟಕಿ, ಗೋಡೆ, ಅಟ್ಟ, ಉಲ್ಲಾರ ಮೊದಲಾದವುಗಳಲ್ಲಿಯ ಕಬ್ಬಿಣ ಮುಂತಾದ ವಿದ್ಯುತ್ ಸಂಚಾರಕ್ಕೆ ತಕ್ಕವಾದ ಎಲ್ಲ ಪದಾರ್ಥಗಳಲ್ಲಿ ಅದು ಪ್ರವಹಿಸುವಂತೆ ವ್ಯವಸ್ಥೆ ಮಾಡಿದನು.

ಮೂರೂಸಂಜೆಯಾಗುತ್ತಲೆ ಪಂತನು ಮನೋಹರನೊಡನೆ ಅಲ್ಪಾಹಾರವನ್ನು ತೀರಿಸಿಕೊಂಡು ಮುಂದಿನ ಉದ್ಯೋಗಕ್ಕೆ ಸಜ್ಜಾದನು. ಮನೋಹರನಿಗೆ ಬ್ಯಾಟರಿಗಳನ್ನು ಯಾವಾಗ ಹಾಗು ಹೇಗೆ ಪ್ರಾರಂಭಿಸಬೇಕೆಂಬದನ್ನು ಮನದಟ್ಟಾಗುವಂತೆ ತಿಳಿಸಿಕೊಟ್ಟನು. ಬಳಿಕ ಅವರೀರ್ವರೂ ಕಣ್ಣು-ಮೂಗುಗಳನ್ನುಳಿದು, ಕೈ, ಕಾಲು ಮುಂತಾದ ದೇಹದ ಎಲ್ಲ ಭಾಗಗಳಿಗೂ ರಬ್ಬರಿನ ಪ್ರಾವರಣಗಳನ್ನು ಹಾಕಿಕೊಂಡರು. ರಬ್ಬರು ವಿದ್ಯುದ್ವಾಹಕ

ಪದಾರ್ಥವಾಗೆದ್ದರಿಂದ ವಿದ್ಯುತ್‌ಪ್ರವಾಹವು ನಡೆದ ಪದಾರ್ಥ
ಆ ಪ್ರಾವರಣವನ್ನು ಹಾಕಿಕೊಂಡವರು ಹಿಡಿದರೆ ಅವರಿಗೆ ಏನೂ ತ
ಯಾಗುವದಿಲ್ಲ. ಪ್ರಸಂಗದಲ್ಲಿ ಅಪ್ಪಿ ತಪ್ಪಿ ತಾವೇ ವಿದ್ಯುತ್ ಪ್ರ
ಸುವ ಪದಾರ್ಥಗಳನ್ನು ಮುಟ್ಟಿದರೆ ತಮಗೆ ತೊಂದರೆಯಾಗಬಾ
ದೆಂದೇ ಅವರು ಹಾಗೆ ಜಾಗ್ರತೆ ವಹಿಸಿದ್ದರು. ಬಳಿಕ ಮನೋಹರನನ್ನು
ಆ ಬ್ಯಾಟರಿಗಳನ್ನಿಟ್ಟ ಆ ಇಕ್ಕಟ್ಟಿನ ಬಾಗಿಲ ಬಳಿಗೆ ಮರೆಯಲ್ಲಿ
ಇರಿಸಿ, ಪಂತನು ಮೇಲಟ್ಟವನ್ನೇರಿ ಫಾಕ್ಸಾದಿಗಳ ಮಾರ್ಗನಿರೀಕ್ಷಣಕ್ಕಾ
ರಂಭಿಸಿದನು.

ರಾತ್ರಿಯು ಹನ್ನೆರಡು ಹೊಡೆದು ಹಿಂದಕ್ಕೆ ಸಮೀಪಿಸಿತು. ಆದರೂ
ಅವರ ಸುಳುವು ಹತ್ತಲಿಲ್ಲ. ಹುಚ್ಚಿಯು ತಮಗೆ ಮೋಸಮಾಡಿರಬಹುದೇ,
ಎಂದು ಪಂತನ ಮನಸ್ಸಿನಲ್ಲಿ ಬರಲಿಕ್ಕೂ, ಇತ್ತ ಆ ಇಕ್ಕಟ್ಟಿನ ಬಾಗಿಲದ
ತಿರುಗಣೆಯನ್ನು ಯಾರೋ ತಪ್ಪಿಸುತ್ತಿರುವದು ಕೇಳಬರಲಿಕ್ಕೂ ಗಂಟೇ
ಬಿದ್ದಿತು. ಕೂಡಲೆ ಪಂತನೂ ಮನೋಹರನೂ ತಮ್ಮ ತಮ್ಮ ಕರ್ತವ್ಯ
ಗಳಿಗೆ ಸಜ್ಜಾದರು. ಕ್ಷಣಾರ್ಧದಲ್ಲಿ ಫಾಕ್ಸನ ೨೫ ಜನ ಅನುಯಾಯಿ
ಗಳು ಆ ಕದವನ್ನು ಮುರಿದು ಒಳಗೆ ನುಗ್ಗಿದರು. ಫಾಕ್ಸನು ಅವರೆಲ್ಲರ
ಮುಂದೆ ಇದ್ದನು. ಗೋಪೀಚಂದನು ಎಲ್ಲಕ್ಕೂ ಹಿಂದೆ ಇದ್ದನು. ಜೊ-
ನ್ಸಳು ಮಾತ್ರ ಆ ಮನೆಯನ್ನು ಪ್ರವೇಶಿಸದೆ, ಕೈಯಲ್ಲಿ ಹನ್ನೆರಡು ಬಾರಿನ
ಪಿಸ್ತೂಲನ್ನು ಹಿಡಿದುಕೊಂಡು ಆ ಬಾಗಿಲವನ್ನು ಕಾಯುತ್ತ ಹೊರಗೇ
ನಿಂತುಕೊಂಡಳು.

ಒಳಹೊಕ್ಕ ಮೇಲೆ ಮೊದಲೇ ನಿರ್ಧರಿಸಿಕೊಂಡಂತೆ ಫಾಕ್ಸ ಮೊದ
ಲಾದವರು ಒಳ್ಳೇ ಆವೇಶದಿಂದ ಮೇಲಟ್ಟವನ್ನೇರಿ ಪಂತನ ಕೋಣೆಯ
ಕಡೆಗೇ ತೆರಳಿದರು. ಕರ್ಮಧರ್ಮಸಂಯೋಗದಿಂದ ಆ ಮೇಲಟ್ಟಕ್ಕೆ
ಇಪ್ಪತ್ತೈದೇ ಮೆಟ್ಟಲುಗಳಿದ್ದು, ಅವಕ್ಕೆಲ್ಲ ಹೊಸಪದ್ಧತಿಯಂತೆ ಕಬ್ಬಿಣದ
ಮಡಾಸವು ಮಾಡಲ್ಪಟ್ಟಿತ್ತು; ಎಡಬಲಗಳಿಗೆ ಕಬ್ಬಿಣದ ಕಂಬಿಗಳಿದ್ದವು.
ಪಾವಟಿಗೆಗಳ ಮೇಲೆ ಒತ್ತಟ್ಟಿಗೆ ಹಿಂದು ದೀಪವು ಉರಿಯುತ್ತಿತ್ತು.
ಒಬ್ಬರ ಹಿಂದೊಬ್ಬರಂತೆ ಅವರೆಲ್ಲರೂ ಪಾವಟಿಗೆಗಳನ್ನೇರಹತ್ತಿದರು.
ಫಾಕ್ಸನು ಕಡೆಯ ಪಾವಟಿಗೆಯನ್ನೇರಿ ಪಂತನ ಕೋಣೆಯ ಕದದ ಚಿಲ
ಕಕ್ಕೆ ಕೈ ಹಚ್ಚಿದನು. ಉಳಿದವರೆಲ್ಲರೂ ಹಿಂದೊಂದು ಪಾವಟಿಗೆಯನ್ನು

ಏರುತ್ತ ನಡೆದಿದ್ದರು. ಗೋಪೀಚಂದನು ಎಲ್ಲರ ಹಿಂದಿನಿಂದ ಮೊದಲನೇ ಮೆಟ್ಟಲನ್ನು ಹತ್ತಿದನು. ಎಲ್ಲರೂ ಒಂದೊಂದು ಮೆಟ್ಟಲ ಮೇಲೆ ನಿಂತಿದ್ದ ಸಮಯವನ್ನು ಕಂಡು ಮನೋಹರನು ಒಮ್ಮೆಲೆ ಬ್ಯಾಟರಿಯ ಕೀಲವ ನ್ನೊತ್ತಿದನು. ಕೂಡಲೆ ಎಲ್ಲ ಕಡೆಗೂ ವಿದ್ಯುತ್ತಿನ ಸಂಚಾರವಾಗಿ ಫಾಕ್ಸ ಮೊದಲುಮಾಡಿಕೊಂಡು ಎಲ್ಲ ಬದ್‌ಮಾಷರ ದೇಹದಲ್ಲಿಯೂ ಅದರ ಚಲನ ವಲನವು ನಡೆಯಿತು ಕಬ್ಬಿಣ ಕಂಬಿ, ಕಬ್ಬಿಣ ಮೆಟ್ಟಲುಗಳ ಮೇಲಿಟ್ಟ ಅವರ ಕೈ-ಕಾಲುಗಳು ಎತ್ತಲಿಕ್ಕೆ ಬಾರದಾದವು. ವಿದ್ಯುತ್ತಿನ ಚುಣ ಗುಟ್ಟುವ ಪ್ರವಾಹದಿಂದ ಆ ಎಲ್ಲ ಪುಂಡರೂ ಕ್ಷಣಾರ್ಧದಲ್ಲಿ ಹಣ್ಣಾದರು. ಅವರ ಚೀರುವದನ್ನೂ ಶಂಖವಾದ್ಯಗಳನ್ನೂ ಕೇಳಿ ಇವರಿಗೆ ಏನಾಯಿತೆಂಬ ದನ್ನು ತರ್ಕಿಸುವದೇ ಅಸಾಧ್ಯವಾಯಿತು. ಪಂತನ ಕೋಣೆಯ ಬಾಗಿ ಲದ ಚಿಲಕವನ್ನು ಹಿಡಿದ ಫಾಕ್ಸನಿಗೂ ಅತ್ಯಂತ ವೇದನೆಗಳಾಗುತ್ತಿದ್ದವು; ಆದರೆ ಅವನ್ನೆಲ್ಲ ಸಹಿಸುತ್ತ ಅವನು ಸುಮ್ಮನೆ ನಿಂತುಕೊಂಡಿದ್ದನು.

ಅವರನ್ನು ಕೆಲಕ್ಷಣಗಳ ವರೆಗೆ ಆ ವಿದ್ಯುತ್ತಿನ ಪ್ರವಾಹದಿಂದ ಹಣ್ಣುಮಾಡಿದ ನಂತರ ಪಂತನು ಮನೋಹರನನ್ನು ಮೇಲಕ್ಕೆ ಕರೆದು, ಅವನ ಸಹಾಯದಿಂದ ಪ್ರತಿಯೊಬ್ಬರಿಗೂ ಡಬಲ್‌ಬೇಡಿಗಳನ್ನು ಹಾಕಿ ದನು. ಫಾಕ್ಸನಿಂದ ಗೋಪೀಚಂದನ ವರೆಗೆ ಎಲ್ಲರಿಗೂ ಬೇಡಿತೊಡಿಸುವ ದಾದ ಬಳಿಕ ಒಂದು ಉದ್ದವಾದ ಸರಪಳಿಯನ್ನು ಪ್ರತಿಯೊಬ್ಬರ ಟೊಂಕಕ್ಕೆ ಬಿಗಿದರು. ನಂತರ ಪಂತನು ಕೊಳಲನ್ನೂದಲು, ಭುಜಂಗರಾಯನು ತನ್ನ ೫೦-೬೦ ಜನ ಸಶಸ್ತ್ರ ಶಿಪಾಯಿಗಳೊಂದಿಗೆ ಅಲ್ಲಿಗೆ ಬಂದನು. ಅಷ್ಟು ಜನ ಶಿಪಾಯಿಗಳು ಬರುತ್ತಿರುವದನ್ನು ಕಂಡು ಹೊರಗೆ ಬಾಗಿಲಲ್ಲಿ ನಿಂತಿದ್ದ ಜೊನ್ಸಳು ಅವರ ಮೇಲೆ ತನ್ನ ಪಿಸ್ತೂಲಿನ ಗುಂಡುಗಳನ್ನು ಹಾರಿಸಲುದ್ಯು ಕ್ತಳಾದಳು; ಆದರೆ ಪಂತನು ಹಿಂದಿನಿಂದ ಬಂದು ಅವಳ ಆ ಪಿಸ್ತೂಲಿನ ಕೈಯನ್ನು ಒತ್ತಿಹಿಡಿಯಲು, ಅದರೊಳಗಿಂದ ಹಾರುವ ಗುಂಡು ಬೇರೆ ಕಡೆಗೆ ಹೋಗದೆ, ಜೊನ್ಸಳ ಹೃದಯವನ್ನೇ ಪ್ರವೇಶಿಸಿತು. ಕೂಡಲೆ ಅವಳು ನಿಂತಲ್ಲಿಯೇ ಬಿದ್ದು ಪ್ರಾಣಬಿಟ್ಟಳು!

ಭುಜಂಗರಾಯನ ಶಿಪಾಯಿಗಳು ಒಳಗೆ ಬರಲು, ಮನೋಹರನು ಬ್ಯಾಟರಿಯ ಕೀಲವನ್ನೊತ್ತಿ ವಿದ್ಯುತ್‌ಪ್ರವಾಹವನ್ನು ತಡೆದನು. ಶಿಪಾಯಿ ಗಳು ಆ ಎಲ್ಲ ಬದ್‌ಮಾಷರನ್ನೂ ತಮ್ಮ ವಶಕ್ಕೆ ತಕ್ಕೊಂಡು ಜೇಲಿಗೆ

ಸಾಗಿಸಹತ್ತಿದರು. ಭುಜಂಗರಾಯನೂ ಪಂತನೂ ಕೂಡಿ, ಫಾಕ್ಸ ಡಾಕ್ಟರನನ್ನು ಹಿಡಕೊಂಡು ನಡೆದಿದ್ದರು. ದಾರಿಯಲ್ಲಿ ಸತ್ತುಬಿದ್ದಿದ್ದ ಜೊನ್ಸಳನ್ನು ಕಂಡು ಫಾಕ್ಸನಿಗೆ ಕಡು ವಿಷಾದವೆನಿಸಿತು; ಆದರೆ ಅವನು ಅದನ್ನು ತೋರಗೊಡಲಿಲ್ಲ. ಫಾಕ್ಸನನ್ನು ಪಂತನ ಮನೆಯಿಂದ ಹತ್ತಿಪ್ಪತ್ತು ಹೆಜ್ಜೆ ದೂರ ಸಾಗಿಸಿರಬಹುದು. ಅಷ್ಟರಲ್ಲಿ ಮತ್ತೊಂದು ಅಘಟಿತ ಘಟನೆಯು ಸಂಭವಿಸಿತು.

ದಾರಿಯ ಪಕ್ಕದ ಒಂದು ದೊಡ್ಡ ಮರದ ಮರೆಗೆ ಅವಿತುಕೊಂಡು ನಿಂತಿದ್ದ ಒಂದು ಸ್ತ್ರೀ ವ್ಯಕ್ತಿಯು ಭರದಿಂದ ಬಂದು, ತನ್ನ ನಿಡಿದಾದ ಕೈಗತ್ತಿಯನ್ನು ಒಮ್ಮೆಲೆ ಫಾಕ್ಸನ ಎದೆಯಲ್ಲಿ ಚುಚ್ಚಿತು; ಹಾಗು ಅಷ್ಟೇ ಆವೇಶದಿಂದ ಅಲ್ಪಾವಕಾಶದಲ್ಲಿ ಅದನ್ನು ಹಿರಿದುಕೊಂಡು:—ಮನೋವಲ್ಲಭಾ,-ವಿನಾಯಕಾ,-ಕೇಶವಾ,-ವೈದ್ಯರಾಜಾ,-ಫಾಕ್ಸದೊರೆಯೇ; ಈಗ ನನ್ನ ಇಹ ಜನ್ಮದ ಸಂಕಲ್ಪವು ಈಡೇರಿದಂತಾಯಿತು. ನಡೆ, ನೀನು ಮುಂದೆ ನಡೆ ನಾನೂ ನಿನ್ನನ್ನನುಸರಿಸಿ ಬಂದೆನು-ನಡೆ, ಇಗೋ ಬಂದೆನು ನಡೆ, ಎಂದವಳೇ ಆ ದೀರ್ಘ ಚೂರಿಯನ್ನು ತನ್ನ ಎದೆಯಲ್ಲಿ ಚುಚ್ಚಿಕೊಂಡು ಗತಪ್ರಾಣಳಾದಳು!

ಪಂತ, ಭುಜಂಗರಾಯ, ಮನೋಹರ ಹಾಗು ಮತ್ತೆ ಕೆಲಜನ ಸಶಸ್ತ್ರ ಶಿಪಾಯಿಗಳು ಇಷ್ಟು ಜನರಿದ್ದರೂ ಯಾರಿಂದಲೂ ಆ ಅಪ್ರಾಸಂಗಿಕ ವ್ಯಕ್ತಿಯ ಆ ಅಘಟಿತ ಘಟನೆಯನ್ನು ತಡೆಯುವದಾಗಲಿಲ್ಲ ಫಾಕ್ಸನ ಆ ಅವಸ್ಥೆಯನ್ನು ಕಂಡು ಅಲ್ಲಿದ್ದ ಎಲ್ಲರಿಗಿಂತಲೂ ಪಂತನಿಗೆ ಹೆಚ್ಚು ಕೆಡಕೆನಿಸಿತು. ಯಾಕಂದರೆ ಆ ಫಾಕ್ಸ ಡಾಕ್ಟರನಿಂದ ಅವನು ಎಷ್ಟೋ ಸಂಗತಿಗಳನ್ನು ಕೇಳಿ ತಿಳಕೊಳ್ಳತಕ್ಕದ್ದಿತ್ತು; ಆದರೂ ಅವನು ಇನ್ನೂ ಪ್ರಾಣ ಧರಿಸಿದ್ದ ಫಾಕ್ಸನನ್ನು ಕುರಿತು:—ಡಾ. ಫಾಕ್ಸ, ನಿನ್ನಂತಹ ನಿಪುಣ ಕೊಲೆಗಾರನು ನೀನೇ ಆಗಿರುವೆ. ನೀನು ಬೇರೆ ಯಾವ ಮಾನುಷೀ ಪ್ರಯತ್ನದಿಂದಲೂ ಇಷ್ಟು ಬೇಗನೆ ಸಾಯುತ್ತಿರಲಿಲ್ಲ; ಆದರೆ ನಿನ್ನ ಪ್ರಾಚೀನ ಸುಕೃತದಿಂದಲೇ ನಿನಗೆ ಹೀಗೆ ಅನಾಯಾಸವಾದ ಮರಣವು ಪ್ರಾಪ್ತವಾಗಿರುವದು. ಅದಿರಲಿ; ನಾನು ಈಗ ನಿನ್ನಿಂದ ಕೆಲವು ವಿಷಯಗಳನ್ನು ತಿಳಿಯಬೇಕೆಂದಿರುತ್ತೇನೆ. ಗೊತ್ತಿದ್ದ ವಿಷಯಗಳನ್ನು ಇನ್ನಾದರೂ ಮರೆ